# ‘ಗಂಗವ್ವ ಗಂಗಾಮಾಯಿ’ ಮತ್ತು ‘ಹಳ್ಳ ಬಂತು ಹಳ್ಳ’ ಕಾದಂಬರಿಗಳ ತೌಲನಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಿಬಂಧ)



ಸಂಶೋಧಕರು
ಕುಲಕರ್ಣಿ ಗೀತಾ

ಮಾರ್ಗದರ್ಶಕರು
ಡಾ. ಸುಚೇತ ನವರತ್ನ
ಅಧ್ಯಾಪಕರು



ಭಾಷಾನಿಕಾಯ
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬



೨೦೦೯

# 'ಗಂಗವ್ವ ಗಂಗಾಮಾಯಿ' ಮತ್ತು 'ಹಳ್ಳ ಬಂತು ಹಳ್ಳ' ಕಾದಂಬರಿಗಳ ತೌಲನಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕರು
ಕುಲಕರ್ಣಿ ಗೀತಾ

ಮಾರ್ಗದರ್ಶಕರು
ಡಾ. ಸುಚೇತ ನವರತ್ನ
ಅಧ್ಯಾಪಕರು





ಭಾಷಾನಿಕಾಯ
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೯

# ದೃಢೀಕರಣ ಪತ್ರ

'ಗಂಗವ್ವ ಗಂಗಾಮಾಯಿ ಮತ್ತು ಹಳ್ಳ ಬಂತು ಹಳ್ಳ ಕಾದಂಬರಿಗಳ ತೌಲನಿಕ ಅಧ್ಯಯನ' ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಕುಲಕರ್ಣಿ ಗೀತಾ., ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೮|೧೦|೨೦೦೯

(ಡಾ. ಸುಚೇತಾ ನವರತ್ನ)
ಮಾರ್ಗದರ್ಶಕರು ಮತ್ತು ಅಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

‘ಗಂಗವ್ವ ಗಂಗಾಮಾಯಿ ಮತ್ತು ಹಳ್ಳ ಬಂತು ಹಳ್ಳ ಕಾದಂಬರಿಗಳ ತೌಲನಿಕ ಅಧ್ಯಯನ’ ಎಂಬ ನಿಬಂಧವನ್ನು ಡಾ.ಸುಚೇತಾ ನವರತ್ನ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಭಾಷಾ ನಿಕಾಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೮/೧೦/೨೦೦೯

(ಕುಲಕರ್ಣಿ ಗೀತಾ)

ಸಂಶೋಧಕಿ

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ



• • •

## ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಪ್ರಸ್ತುತ ಅಧ್ಯಯನಕ್ಕಾಗಿ ಆಯ್ದುಕೊಂಡಿರುವ ಕೃತಿಗಳಾದ ಗಂಗವ್ವ ಗಂಗಾಮಾಯಿ ಮತ್ತು ಹಳ್ಳಬಂತುಹಳ್ಳ ಇವು ಒಂದೇ ಪರಿಸರದ ವಸ್ತು ಹಾಗೂ ಒಂದೇ ಪರಿಸರ ಜೀವಿಗಳಾದ ಕೃತಿಕಾರರನ್ನು ಒಳಗೊಂಡಿವೆ. ಈ ಹಿನ್ನೆಲೆಯಲ್ಲಿ ಸಮಾನ ವೇದಿಕೆಯ ಈ ಎರಡು ಕೃತಿಗಳಲ್ಲಿನ ಸಾಮ್ಯ. ವೈದೃಶ್ಯ, ಪ್ರಭಾವ ಮೂಲ ಇತ್ಯಾದಿಗಳನ್ನು ಕೂಲಂಕಷವಾಗಿ ಚರ್ಚಿಸುವುದು ಪ್ರಮುಖ ಧ್ಯೇಯ.

**ಅಧ್ಯಯನದ ಉದ್ದೇಶ**

ಶ್ರೇಷ್ಠ ಚಲನಚಿತ್ರ ಪ್ರಶಸ್ತಿ ಪಡೆದ ಗಂಗವ್ವ ಗಂಗಾಮಾಯಿ ಮತ್ತು ರಾಜ್ಯ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಹಳ್ಳ ಬಂತು ಹಳ್ಳ ತೌಲನಿಕ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಒಂದೇ ಸಂಸ್ಕೃತಿ ಪರಸರದ ಕಾದಂಬರಿಗಳೆರಡೂ ಸಾಹಿತ್ಯ ಲೋಕದಲ್ಲಿ ಹುಟ್ಟು ಹಾಕಿದ ಚಲನ ಶೀಲತೆಯನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡುವ ಉದ್ದೇಶ. ಅಲ್ಲದೇ ಪ್ರಶಸ್ತಿ ವಿಜೇತ ಕಾದಂಬರಿಗಳಾಗಿ ಸಾಹಿತ್ಯಕ, ಸಾಂಸ್ಕೃತಿಕ ಲೋಕದ ಪ್ರಾಧಾನ್ಯತೆ ಪಡೆದವುಗಳಾಗಿ ಸಮಾಜಕ್ಕೆ ಅವುಗಳ ಸಂದೇಶ ಕೊಡುಗೆ ತಿಳಿಯ ಪಡಿಸುವುದು, ಕೃತಿಯ ವಸ್ತು ಒಂದೇ ಯಾದರೂ, ಪರಿಸರ ಒಂದೇಯಾದರೂ ಸಮಕಾಲೀನ ಸಂದರ್ಭಗಳು ಹಾಗೂ ಕೃತಿಕಾರನ ನಿಲುವುಗಳು ಸೃಷ್ಟಿಯಾಗುವ ರೀತಿಯನ್ನು ತಿಳಿಯುವುದು. ಹಾಗೂ ಸಮಕಾಲೀನತೆ ಪಡೆದು ಕೊಳ್ಳುವ ಸಾರ್ವಕಾಲಿಕತೆ ಹಾಗೂ ಸಮಗ್ರದರ್ಶಿತ್ವದ ಹಂತಗಳಲ್ಲಿ ಚರ್ಚಿಸುವುದು ಮುಖ್ಯ ಉದ್ದೇಶವಾಗಿದೆ.

**ಅಧ್ಯಯನದ ವ್ಯಾಪ್ತಿ:** ಶಂಕರ ಮೊಕಾಶಿ ಪುಣೇಕರವರ 'ಗಂಗವ್ವ ಗಂಗಾಮಾಯಿ' ಮತ್ತು ಶ್ರೀನಿವಾಸ ವೈದ್ಯರಿಂದ ರಚಿತವಾದ 'ಹಳ್ಳ ಬಂತು ಹಳ್ಳ' ಎಂಬ ಕೃತಿಗಳನ್ನು ಮಾತ್ರ ತೌಲನಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಎರಡು ಕಾದಂಬರಿಯಲ್ಲಿ ಮೂಡಿ ಬಂದಿರುವ ಸಾಹಿತ್ಯಿಕ ಸಾಂಸ್ಕೃತಿಕ ಅಂಶಗಳನ್ನು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ಸ್ವರೂಪ:** ಪ್ರಸ್ತುತ ಅಧ್ಯಯನಕ್ಕಾಗಿ ಆಯ್ದುಕೊಂಡಿರುವ ಒಂದೇ ಸಾಂಸ್ಕೃತಿಕ ಪರಿಸರ ಎರಡು ಕೃತಿಗಳ ಅಧ್ಯಯನದ ಉದ್ದೇಶವನ್ನು ಕುರಿತು ಒಂದನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಶ್ರೇಷ್ಠ ಕಾದಂಬರಿಯಾದ 'ಗಂಗವ್ವ ಗಂಗಾಮಾಯಿ'ಯನ್ನು ಬರೆದಂತಹ ಪುಣೇಕರರ ಜೀವನ ಮತ್ತು ಸಾಹಿತ್ಯ ಕುರಿತು ಸಮಕಾಲೀನ ನೋಟವನ್ನು ಇಲ್ಲಿ ವಿವರಿಸಲಾಗಿದೆ. ಪುಣೇಕರರು ಮೂಲತಃ ಧಾರವಾಡದವರಾಗಿದ್ದು ಇವರು ಕಥೆ, ಕಾದಂಬರಿ, ವಿಮರ್ಶೆ ಕಾವ್ಯ ಮುಂತಾದವುಗಳು ಸಾಹಿತ್ಯಕ್ಕೆ ನೀಡಿ ಚಿರಪರಿಚಿತರಾಗಿರುವರು ಇವರ ಸಾಹಿತ್ಯ ಕೊಡುಗೆಯನ್ನು ವಿಮರ್ಶೆ ಲೇಖನಗಳ ಸವಿವರವನ್ನು ಹಾಗೂ ಕ್ರಿ.ಶ. ೨೦೦೪ ಮತ್ತು ೨೦೦೮ರಲ್ಲಿ ಪ್ರಶಸ್ತಿ ಪಡೆದುಕೊಂಡ ಶ್ರೀನಿವಾಸ ವೈದ್ಯರ ಜೀವನ ಮತ್ತು ಸಾಹಿತ್ಯಕ ಕೊಡುಗೆಯನ್ನು ಗಮನಿಸಲಾಗಿದೆ. ಇವರ ಹಳ್ಳಬಂತು ಹಳ್ಳ ಕಾದಂಬರಿ ಬಗ್ಗೆ ಪತ್ರಿಕೆಯಲ್ಲಿ ಮತ್ತು ವಾರಪತ್ರಿಕೆಯಲ್ಲಿ ಬಂದಿರುವ ಲೇಖನವನ್ನು ಹಿರಿಯ ವಿಮರ್ಶಕರ ನುಡಿಗಳನ್ನು ಇವರ ಕಥೆ, ಕಾದಂಬರಿ ಕುರಿತಾದ ವಿವರಗಳನ್ನು ಒದಗಿಸಲಾಗಿದೆ.

ಧಾರವಾಡ ಸಾಂಸ್ಕೃತಿಕ ಪರಿಸರದಿಂದ ಮೂಡಿ ಬಂದ ಈ ಕಾದಂಬರಿಗಳಲ್ಲಿ ದಟ್ಟ ಮಣ್ಣಿನ ವಾಸನೆ ಸಮಕಾಲೀನ ಸಂದರ್ಭ ಮತ್ತು ವಸಾಹತು ಶಾಹಿಯ ಪ್ರಜ್ಞೆ, ಉತ್ತರ ಕರ್ನಾಟಕದ ಭಾಷೆ ಬ್ರಾಹ್ಮಣ ಸಮುದಾಯದ ಆಚಾರ ವಿಚಾರ, ಸಂಕೋಲೆ ಪರಿವರ್ತನೆ, ಈ ಅಂಶಗಳ ಮುಖೇನ 'ಪ್ರಾದೇಶಿಕತೆ ಪರಿಕಲ್ಪನೆ ಬಿಚ್ಚಿಕೊಳ್ಳುವ ಪರಿಯನ್ನು ಸಮಾನ ವೇದಿಕೆಯ ವಿಭಿನ್ನ ಪಾತ್ರಗಳಂತಿರುವ ಈ ಎರಡು ಕಾದಂಬರಿಗಳ ಮೂಲಕ ಕೂಲಂಕಷವಾಗಿ ಮೂರನೇಯ ಅಧ್ಯಾಯನದಲ್ಲಿ ಅಧ್ಯಯನ ಮಾಡಲಾಗಿದೆ.

ಮುಂದಿನ ಅಧ್ಯಯನದಲ್ಲಿ 'ಗಂಗವ್ವ ಗಂಗಾಮಾಯಿ ಕಾದಂಬರಿಯಲ್ಲಿಯ ಸಮಕಾಲೀನ ಪರಿಸರ ಅಂದರೆ ಸ್ವತಂತ್ರ ಸಂಗ್ರಾಮ ಮತ್ತು ವಸಾಹತುಶಾಹಿ ಪ್ರಭಾವದಿಂದುಂಟಾದ ಬದುಕಿನ ಸ್ಥಿತ್ಯಂತರಗಳ ಅಧ್ಯಯನವನ್ನು ಕೈಕೊಳ್ಳಲಾಗಿದೆ. ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯವಾಗಿ ಈ ಕಾಂದಬರಿಯಲ್ಲಾದ ಸಮಕಾಲಿನ ಪರಿಸರದ ಸ್ಥಿತ್ಯಂತರಗಳನ್ನು ಸಂದರ್ಭಗಳ ಮೂಲಕ ಸ್ಪಷ್ಟಪಡಿಸಲಾಗಿದೆ. ಇಲ್ಲಿಯೂ ಬ್ರಾಹ್ಮಣ ಕುಟುಂಬವೊಂದರ ಸ್ಥಿತ್ಯಂತರದ ಮೂಲಕ ವಿವರಿಸಲಾಗಿದೆ.

ಅದೇ ರೀತಿಯಾಗಿ ನಂತರದ ಅಧ್ಯಯನದಲ್ಲಿ 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿನ ಮೂರು ತಲೆಮಾರಿನ ಜೀವನ ವಿಕಾಸದ ಸ್ವತಂತ್ರ ಸಂಗ್ರಾಮದೊಂದಿಗೆ ಪ್ರವಹಿಸುತ್ತ ಕೊನೆಯಲ್ಲಿ ವಸಾಹತುಶಾಹಿಯು ಉಂಟಾದ ಬದುಕಿನ ಸ್ಥಿತ್ಯಂತರಗಳ ಸ್ಥೂಲ ನೋಟವನ್ನಿಲ್ಲಿ ನಿರೂಪಿಸಲಾಗಿದೆ. ಅದರಲ್ಲೂ ಒಂದು ಬ್ರಾಹ್ಮಣ ಸಮುದಾಯದ ಆಚಾರ-ವಿಚಾರ, ಮಡಿ-ಮೈಲಿಗೆ, ಸಂಪ್ರದಾಯ ಮುಂತಾದವುಗಳಲ್ಲಾದ ಸ್ಥಿತ್ಯಂತರವನ್ನು ಗಮನಿಸಲಾಗಿದೆ.

ಈ ಎರಡು ಕಾಂದಬರಿಗಳಲ್ಲಿ ಹೊರ ನೋಟಕ್ಕೆ ವಸ್ತು, ಭಾಷೆ, ಶೈಲಿಗಳಲ್ಲಿ ಒಂದೇ ರೀತಿಯಾಗಿ ಕಾಣುವ ಇವು, ಕಾದಂಬರಿಗಳ ಅಂತರಂಗದಲ್ಲಿ ಹೊಮ್ಮಿಸುವ ವಿಭಿನ್ನ ದೃಷ್ಟಿ ಕೋನವನ್ನು ನಿರೂಪಿಸಲಾಗಿದೆ. ತೌಲನಿಕ ವಿಚಾರವಾಗಿ ಮೂಡಿ ಬಂದಿರುವ ಕಾದಂಬರಿಗಳ ಸಾದೃಶ್ಯ ಮತ್ತು ವೈದೃಶ್ಯದ ಅಂಶಗಳನ್ನು

ಗಮನಿಸಲಾಗಿದೆ. ವಸ್ತು ಭಾಷೆ, ಶೈಲಿಗಳಲ್ಲಿ ಕಾಣುವ ಹೋಲಿಕೆಯ ಅಂಶಗಳು ಮತ್ತು ಭಿನ್ನವೆಂದು ಗೋಚರಿಸುವ ಅಂಶಗಳು ಆರನೇ ಅಧ್ಯಾಯದಲ್ಲಿ ಚರ್ಚಿತವಾಗಿವೆ.

ಕೊನೆಯ ಸಮಾಪನದ ಅಧ್ಯಯನದಲ್ಲಿ ಅಧ್ಯಯನದ ಒಟ್ಟಾರೆ ಫಲಿತಗಳನ್ನು ಕ್ರೋಢೀಕರಿಸಲಾಗಿದೆ. ಅನುಬಂಧದಲ್ಲಿ ಬಳಸಿಕೊಂಡ ಗ್ರಂಥಸೂಚಿ, ಶಂಕರಮೊಕಾಶಿ ಪುಣೇಕರ ಕೃತಿ ವಿವರ ಮತ್ತು ಶ್ರೀನಿವಾಸ ವೈದ್ಯರ ಸಾಹಿತ್ಯ ನೋಟ.

**ಅಧ್ಯಯನದ ಸಮೀಕ್ಷೆ:** ಈಗಾಗಲೇ ಎರಡು ಕಾದಂಬರಿಗಳ ಬಗ್ಗೆ ಚರ್ಚೆ, ವಿಮರ್ಶೆ, ಲೇಖನಗಳು ಆಗಿರುವುದು ಕಂಡುಬರುತ್ತವೆ. ಜಿ.ಎಂ. ಹೆಗಡೆ ತಮ್ಮ ಸಾಹಿತ್ಯ ಮತ್ತು ಸಹೃದಯತೆ ಎಂಬ ಸಂಪಾದನ ಕೃತಿಯಲ್ಲಿ ಶಂಕರ ಮೊಕಾಶಿ ಪುಣೇಕರ ಅವರ ಗಂಗವ್ವ ಗಂಗಾಮಾಯಿ ಲೇಖನದಲ್ಲಿ, ದೇಶಪಾಂಡೆ ಸುಬ್ಬುರಾಯ 'ಶಂಕರ ಮೊಕಾಶಿ ಪುಣೇಕರ ಗಂಗವ್ವ ಗಂಗಾಮಾಯಿ' ಎಂಬ ಬಿಡಿ ಲೇಖನ, ಸಾಹಿತ್ಯ ವಿಮರ್ಶೆ ೧೯೯೮ರಲ್ಲಿ ಹಾ.ಮಾ.ನಾಯಕರು 'ಅನನ್ಯ ಲೇಖಕ ಮೊಕಾಶಿ ಪುಣೇಕರ' ಎಂಬ ಶೀರ್ಷಿಕೆಯಲ್ಲಿ ಜಿ.ಎಸ್. ಅಮೂರವರು ತಮ್ಮ ಕೃತಿಯಾದ 'ಕನ್ನಡ ಕಥನ ಸಾಹಿತ್ಯ; ಕಾದಂಬರಿಯಲ್ಲಿ ಗಂಗವ್ವ ಗಂಗಾಮಾಯಿ ದ್ವಿಮುಖ ವಸ್ತು ಎಂಬ ಲೇಖನವನ್ನು, ಸಾಹಿತ್ಯ ವಿಮರ್ಶೆ ೧೯೯೮ರಲ್ಲಿ ನಿ.ಮುರಾರಿ ಬಲ್ಲಾಳು 'ಶಂಕರ ಮೊಕಾಶಿ ಪುಣೇಕರ ನವ್ಯರೊಲ್ಲೊಂದು ಭಿನ್ನಧ್ವನಿ' ಕುರಿತು ಲೇಖನವನ್ನು ಮತ್ತು ಶಂಕರ ಮೊಕಾಶಿ ಪುಣೇಕರ ಕಾಂದಬರಿಯ ''ಸಂಪ್ರದಾಯ ಮತ್ತು ಆಧುನಿಕತೆ ನಡುವಿನ ಸಂಘರ್ಷ'' ಎಂಬ ಎಂ.ಫಿಲ್ ಅಧ್ಯಯನವನ್ನು (ಎಚ್.ಕೆ.ಅಶೋಕರವರು ಡಾ.ವೆಂಕಟೇಶ ಇಂದ್ವಾಡಿಯವರ) ಗಮನಿಸಬಹುದಾಗಿದೆ.

ಅದೇ ರೀತಿಯಾಗಿ ಹಳ್ಳ ಬಂತು ಹಳ್ಳ ಕಾದಂಬರಿ ಇತ್ತೀಚಿನ ಶ್ರೀನಿವಾಸಾವೈದ್ಯರ ರಚಿತ ಕೃತಿಯಾಗಿದೆ. ಕಾದಂಬರಿ ಬಗ್ಗೆ ಜಿ.ಎಸ್. ಆಮೂರ, ಗಿರಡ್ಡಿ ಗೋವಿಂದರಾಜು, ನರಹಳ್ಳಿ ಬಾಲಸುಬ್ರಹ್ಮಣ್ಯ, ಕುರ್ತುಕೋಟಿ, ಮುಂತಾದ ಹಿರಿಯ ಲೇಖಕರಿಂದ ಮೆಚ್ಚುಗೆಯ ನುಡಿಗಳು ಮತ್ತು 'ಹೊಸತು' ಎಂಬ ವಾರಪತ್ರಿಕೆಯಲ್ಲಿ ಮಾಲತಿ ಪಟ್ಟಣಶೆಟ್ಟಿಯವರು 'ಹಳ್ಳ ಬಂತು ಹಳ್ಳ ಕೆಲವು ಟಿಪ್ಪಣಿಗಳು' ಎಂಬ ಲೇಖನವನ್ನು (ಮಾರ್ಚ್ ೯ರ ೨೦೦೯ರಲ್ಲಿ) ಗಮನಿಸಲಾಗಿದೆ. ಅದೇ ರೀತಿ, ಪ್ರಜಾವಾಣಿ ಪತ್ರಿಕೆಯಲ್ಲಿ (ಫೆಬ್ರುವರಿ ೧೭.೨೦೦೮ರಲ್ಲಿ) ಶಂಕರ ಮೊಕಾಶಿ ಪುಣೇಕರ ಎಂಬ ಲೇಖನವನ್ನು ಗಮನಿಸಲಾಗಿದೆ.

• • •

ಅಧ್ಯಾಯ ಎರಡು

# ಪ್ರಸ್ತಾವನೆ ವಿಷಯ ಪ್ರವೇಶ

೨.೧. ಶಂಕರ ಮೊಕಾಶಿ ಪುಣೇಕರರ ಜೀವನ ಮತ್ತು ಸಾಹಿತ್ಯ ಸ್ಥೂಲ ನೋಟ

೨.೨. ಶ್ರೀನಿವಾಸ ವೈದ್ಯರ ಜೀವನ ಮತ್ತು ಸಾಹಿತ್ಯ ಸ್ಥೂಲ ನೋಟ

೨.೩. ಇದುವರೆಗಿನ ಅಧ್ಯಯನ ಸಮೀಕ್ಷೆ

# ಅಧ್ಯಾಯ ಎರಡು

## ಪ್ರಸ್ತಾವನೆ ವಿಷಯ ಪ್ರವೇಶ

### ೨.೧. ಶಂಕರ ಮೊಕಾಶಿ ಪುಣೇಕರ ಜೀವನ ಮತ್ತು ಸಾಹಿತ್ಯ ಸ್ಥೂಲ ನೋಟ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸೃಜನಶೀಲ ಸ್ವೋಪಜ್ಞ ಬರಹಗಾರರಾದ ಶಂಕರ ಮೊಕಾಶಿ ಪುಣೇಕರ ಅವರು ನವ್ಯಪಂಥದ ಸಾಲಿಗೆ ಸೇರಿದವರು. ಇವರು ೧೯೨೮ರಲ್ಲಿ ಧಾರವಾಡದಲ್ಲಿ ಜನಿಸಿದರು. ಇವರ ತಂದೆ ರಾವ್‌ಜಿರಾವ್, ತಾಯಿ ಸುಂದರಿಬಾಯಿ, ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡ ಇವರು ತಾತನಾದ ದಿವಂಗತ ರಾಮಚಂದ್ರ ಬಾಪೂಜಿ ಮತ್ತು ಅಜ್ಜಿ ಸೀತಬಾಯಿ ರಾಮಚಂದ್ರ ಪುಣೇಕರವರ ಆಶ್ರಯದಲ್ಲಿ ಬೆಳೆದು ವಿದ್ಯಾಭ್ಯಾಸವನ್ನು ಪಡೆದರು. ಪುಣೇಕರರು ಇಂಗ್ಲೀಷ್ ಸಾಹಿತ್ಯದಲ್ಲಿ ಎಂ.ಎ. ಪದವಿಯನ್ನು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪಡೆದುಕೊಂಡರು.

ಆರಂಭದಲ್ಲಿ ಶಾಲಾಶಿಕ್ಷಕರಾಗಿ ಐದು ವರ್ಷ ವಿಜಾಪುರ, ಕಾರವಾರ ಮತ್ತು ಧಾರವಾಡದಲ್ಲಿ ಸೇವೆ, ಸಲ್ಲಿಸಿ ಅನಂತರ ಆರ್.ಪಿ.ಡಿ ಕಾಲೇಜು, ಬೆಳಗಾವಿಯ ಲಿಂಗರಾಜ ಕಾಲೇಜುಗಳಲ್ಲಿ ಉಪನ್ಯಾಸರಾಗಿ ಸೇವೆ ಸಲ್ಲಿಸಿದರು. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ್ ಪ್ರವಾಚಕರಾಗಿ ಹತ್ತು ವರ್ಷ ಸೇವೆಸಲ್ಲಿಸಿದರು.

ಪುಣೇಕರರು ಶಾಲಾಕಾಲೇಜುಗಳಲ್ಲಿ ಅಧ್ಯಯನ ಮಾಡುವ ಸಂದರ್ಭದಲ್ಲಿ ಅಧ್ಯಾಪಕರಾಗಿದ್ದ ಎನ್.ಜಿ.ನಾಡಗೀರ್, ಎನ್.ಕೆ.ಕುಲಕರ್ಣಿ, ಬಿ.ಎಂ.ಶ್ರೀ, ವಿ.ಕೃ.ಗೋಕಾಕ, ಆರ್ಮೊಂಡೊ ಮೆನಜಿಸ್ ಮೊದಲಾದವರ ಪ್ರಭಾವ, ಸ್ಫೂರ್ತಿ ಇವರ ಮೇಲಾಯಿತು. "ದಿ ಲೇಟರ್ ಫ್ಲೇಸ್ ಇನ್‌ದ ಡೆವಲಪ್‌ಮೆಂಟ್ ಆಫ್ ಡಬ್ಲೂವಿ ಯೋಟ್ಸ್" ಇವರ ಸಂಶೋಧನ ಪ್ರಬಂಧಕ್ಕೆ ೧೯೬೫ರಲ್ಲಿ ಪಿಎಚ್.ಡಿ ಪದವಿ ದೊರೆಯಿತು.

ಪುಣೇಕರರು 'ಕನಸಿಗ' ಎಂಬ ಕಾವ್ಯ ನಾಮದಿಂದ ಆರಂಭದಲ್ಲಿ ಬರೆಯಿತ್ತಿದ್ದರು. ಇಂಗ್ಲೀಷ್ ಕನ್ನಡ ಎರಡು ಭಾಷೆಗಳಲ್ಲಿ ಪುಸ್ತಕಗಳನ್ನು ಪ್ರಕಟಿಸುತ್ತಿದ್ದರು. ಉಭಯ ಭಾಷಾ ಲೇಖಕರಾಗಿದ್ದು, ಸಂಸ್ಕೃತ, ಮರಾಠಿ ಮತ್ತು ಹಿಂದಿ ಭಾಷೆಗಳನ್ನು ಬಲ್ಲವರಾಗಿದ್ದರು. ಇವರು ಕೇವಲ ಸಾಹಿತ್ಯದ ಆಸಕ್ತರಲ್ಲದೇ ಇತರ ಶಾಸ್ತ್ರಗಳಾದ ಅರ್ಥಶಾಸ್ತ್ರ, ಸಂಗೀತ ಇತಿಹಾಸ, ಸಾಂಸ್ಕೃತಿಕ ಇತಿಹಾಸ ಮೊದಲಾಗಿ ಹಲವು ಕ್ಷೇತ್ರಗಳಲ್ಲಿ ಗ್ರಂಥರಚನೆ ಮಾಡಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ರೀಡರ್ ಎಂದು ಕೆಲಸ ಮಾಡಿ, ಅನಂತರ ಉಡುಪಿಯಲ್ಲಿ ಪೂರ್ಣ ಪ್ರಜ್ಞ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದರು. ಟಾಟ ಕಂಪನಿಯಲ್ಲಿ ಟೆಕ್ನಿಕಲ್ ಎಡಿಟರ್ ಆಗಿ ಸೇವೆ ಸಲ್ಲಿಸಿದರು. ೧೯೮೦ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿ ನೇಮಕಗೊಂಡು ೧೯೮೮ರಲ್ಲಿ ನಿವೃತ್ತರಾದರು. ಎರಡು ವರ್ಷಗಳ ಕಾಲ ಶ್ರೀ ಸತ್ಯಸಾಯಿ ಉನ್ನತ ಶಿಕ್ಷಣ ಸಂಸ್ಥೆಯಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿದ್ದು, ಕಾಳಿದಾಸನ ಋತು ಸಂಹಾರವನ್ನು ಇಂಗ್ಲೀಷ್‌ನಲ್ಲಿ ಭಾಷಾಂತರಿಸಿದರು. ನಾಟಕ, ಕಾವ್ಯಮೀಮಾಂಸೆ ಬರೆದ ಇವರು ಮೂರು ಪ್ರಸಿದ್ಧ ಕಾದಂಬರಿಗಳನ್ನು ಬರೆದಿರುವರು. 'ಸಾಹಿತ್ಯ ಅಭಿರುಚಿ' ೧೯೮೨ರಲ್ಲಿ ಬರೆದರೆ 'ಯೂರೋಪಿನ ವಿಮರ್ಶೆಯ ಇತಿಹಾಸ' ೧೯೮೩ರಲ್ಲಿ ಡಿರಿಕ್ ಡಿಸೋಜಾ ಮತ್ತು ಇತರ ಕಥೆಗಳು ಮತ್ತು ಅಪೂರ್ಣವರ್ತಮಾನ ಕಾಲವೆಂಬ ಕೃತಿಯನ್ನು ಹೊರತಂದರು. ಪಾಶ್ಚಾತ್ಯ ಸಾಹಿತ್ಯವು ಇವರ ಜೀವನದ ಮೇಲೆ ಪ್ರಭಾವವಾಗಿದ್ದು, ಹೋಮರ ಶೇಕ್ಸ್‌ಪಿಯರ್, ವ್ಯಾಸ, ಟಾಲ್‌ಸ್ಟಾಯ್ ದಾಸ್ತೋವಸ್ಕಿ. ಇವರ ಬಗ್ಗೆ ಆಸಕ್ತಿ ವಹಿಸಿ ಇವರ ಸಾಹಿತ್ಯ ವಿಷಯದ ಪ್ರಸ್ತಾಪ ಮಾಡಿದ್ದು ಗಮನಿಸಿಬಹುದು.

ಇವರ ಒಂದು ರಾಜಕೀಯ ಕಾದಂಬರಿಯಾದ 'ಅವಧೇಶ್ವರಿ' ೧೯೮೮ರಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದು ಒಂದು ಶ್ರೇಷ್ಠ ಕಾದಂಬರಿಯಾಗಿ ಗುರುತಿಸಿಕೊಂಡಿತು. ಇವರದೇ ಆದ ಮತ್ತೊಂದು ಕಾದಂಬರಿ 'ನಟನಾರಾಯಣಿ' ಇದು 'ಸುಧಾ' ಎಂಬ ವಾರಪತ್ರಿಕೆಯಲ್ಲಿ ಕಾದಂಬರಿಯ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆಯಿತು. ಪುಣೇಕರರ ಮೂರು ಮಹತ್ವದ ಕಾದಂಬರಿಗಳಲ್ಲಿ ಗಂಗವ್ವ ಗಂಗಾಮಾಯಿ ತುಂಬಾ ಪ್ರಸಿದ್ಧಿಯನ್ನು ಪಡೆದು, ಅದು ಭಾರತದ ಎಲ್ಲ ಭಾಷೆಗಳಲ್ಲಿ ಅನುವಾದಗೊಳ್ಳುವ ಅದೃಷ್ಟ ಪಡೆಯಿತು.

ಪುಣೇಕರವರನ್ನು ಸಂದರ್ಶಿಸಿದ ರಹಮತ್ ತರೀಕೆರೆಯವರು ಅವರ ಬಗ್ಗೆ ಕನ್ನಡ ಶಕ್ತಿಶಾಲಿ ಲೇಖಕರಾಗಿದ್ದರೂ ಅವರು ಇಂಗ್ಲೀಷಿನಲ್ಲಿ ಬರೆದಿರುವುದೇ ಹೆಚ್ಚು ಅದರಲ್ಲಿ ಕಾವ್ಯ ಮತ್ತು ಸಂಶೋಧನೆಗಳು ಹೆಚ್ಚಾಗಿ ಇಂಗ್ಲೀಷಿನಲ್ಲಿವೆ. ಇಂಗ್ಲೀಷ್‌ನ ಅಧ್ಯಾಪನೆ, ಕನ್ನಡದಲ್ಲಿ ಬರಹ, ಸಂಸ್ಕೃತದಲ್ಲಿ ಪಾಂಡಿತ್ಯ, ಹಿಂದೂಸ್ಥಾನಿ ಸಂಗೀತದಲ್ಲಿ ಪರಿಣಿತ. ಅನುಭಾವಿ ಪಂಥಗಳಲ್ಲಿ ಒಲವು, ಮೊಹೆಂಜೊದಾರೊ ಮುದ್ರೆಗಳ

ರಹಸ್ಯ ಭೇದಿಸುವ ಕುತೂಹಲ, ಆರ್ಥಿಕ ಸಿದ್ಧಾಂತಗಳನ್ನು ರೂಪಿಸುವ ಒಲವು ಹೀಗೆ ಹಲವು ಆಸಕ್ತಿಗಳಲ್ಲಿ ಹಂಚಿಹೋದಂತೆ ಕಾದಂಬರಿ ತೋರುವ ಪುಣೇಕರ ಅಪರೂಪ ವ್ಯಕ್ತಿತ್ವವುಳ್ಳವರು ಸ್ತ್ರೀಯರನ್ನು ಕಾಣಿಸುವಾಗ ಪ್ರೇರಣೆ ದೊರತಿದ್ದು ಏನು? ಎಂದು ಪುಣೆಕರು ಪ್ರಶ್ನಿಸಿದಾಗ ಭಾರತೀಯ ಸ್ತ್ರೀಗೆ ಶಿಕ್ಷಣ ಇರುವುದಿಲ್ಲ. ಇಷ್ಟೇ ಹೊರತು ಎಲ್ಲ ರೀತಿಯಿಂದ ಗಂಡಸಿನಷ್ಟೇ ಗುಣ ಅವರಿಗೆ ಇರ್ತದೆ ಅವನಕ್ಕಿಂತ ದೊಡ್ಡಗುಣಗಳು ಇರ್ತಾವೆ ಅವರಿಗೆ ಮಾತಾಡ್ಲಿಕ್ಕೆ ಸ್ಕೂಪ ಇಲ್ಲಂತ ಸಣ್ಣಪಾತ್ರಗಳು ಆಗ್ತವೆ ಎಂದು ಹೇಳುತ್ತಾ ಸ್ತ್ರೀ ಬಗ್ಗೆ ಅಪಾರ ಅನುಕಂಪ ಪ್ರೀತಿಯನ್ನು ವಿಶೇಷ ಕಾಳಜಿ ವಹಿಸಿದ ಇವರು, ಅವರ ಅಜ್ಜಿಯು ಇವರ ಮೇಲೆ ಗಾಢವಾದ ಪ್ರಭಾವ ಬೀರಿರುವುದನ್ನು ಅವರ ಮಾತಿನಿಂದಲೇ ತಿಳಿಯಬಹುದು. 'ನಮ್ಮಜ್ಜಿ ಸಾಲಿಡ್ ಹೆಣಮಗಳು, ಕಟುಬಾಯಿಗೆ ತಿವೀತಿದ್ದಳು. ಅಜ್ಜನಕ್ಕಿಂತ ದೊಡ್ಡಾಕಿ. ನಮ್ಮ ಸ್ತ್ರೀಯರೆಲ್ಲರೂ ದೊಡ್ಡಗುವಿಜಡಂ ಇಂಟೆಲಿಜನ್ಸ್ ಅಲ್ಲ ಎಂಬುದು ಪುಣೇಕರರ ಅಭಿಮತ.

ಡಾಕ್ಟರ್ ಪುಣೇಕರರು ಅನೇಕ ಕ್ಷೇತ್ರಗಳಲ್ಲಿ ಪ್ರಥಮರೆಂದು ಗುರುತಿಸುವಲ್ಲಿ ಅವರ ಕೃತಿಗಳು.

೧. ಪ್ರಪ್ರಥಮ ನವ್ಯಕವನ 'ಬಂಡಾಯ' ೧೯೪೭.

೨. ಪ್ರಪ್ರಥಮ ವ್ಯಂಗ ಖಂಡಕಾವ್ಯ ಸೀಮಂತಿನಿಕೋಪಾಖ್ಯಾನ ೧೯೬೩.

೩. ಪ್ರಪ್ರಥಮ ನವ್ಯಕಾದಂಬರಿ 'ಗಂಗವ್ವ ಗಂಗಮಾಯಿ' ೧೯೫೬.

೪. ಪ್ರಪ್ರಥಮ ಗಝಲ್ 'ಅಭಿಮಾನ ಅಭಿಲಾಷೆ' ೧೯೪೬.

೫. ಪ್ರಪ್ರಥಮ ವಿಪರ್ಯಾಸ ಹಾಸ್ಯನಾಟಕ ೧೯೮೭.

೬. ಪ್ರಪ್ರಥಮ ವಸ್ತುನಿಷ್ಠ ವೇದಕಾಲಿನ ಕಾದಂಬರಿ ಅವಧೇಶ್ವರಿ ೧೯೮೭.

ಹೀಗೆ ಸಾಹಿತ್ಯದ ಸೃಜನಶೀಲ ಬರಹಗಾರರಾದ ಪುಣೇಕರರ ಕಾವ್ಯ, ಕಾದಂಬರಿ, ವಿಮರ್ಶೆ, ಸಣ್ಣಕಥೆ, ಮೊದಲಾದ ಪ್ರಕಾರಗಳಲ್ಲಿ ಸಾಧನೆ ಮಾಡಿದ್ದಾರೆ. ಅವರ ಸಾಹಿತ್ಯಕ್ಕೆ ಗೋಕಾಕರ ಪ್ರಭಾವ ಪ್ರೇರಣೆಗಳು ಇದ್ದವುವೆಂಬುದನ್ನು ಲೇಖನಗಳಿಂದ ಕಂಡು ಕೊಂಡರೆ, ಸರಳ ಸುಂದರ ಜೀವಿಯಾಗಿದ್ದ, ವಿನಯ ನಡಾವಳಿಕೆ ಉಳ್ಳವರಾಗಿದ್ದಾರೆ. ದಿನದ ಬಹುಭಾಗವೆಲ್ಲ ಅಧ್ಯಯನ ಚಿಂತನೆಯಲ್ಲೆ ಕಳೆಯುತ್ತಿದ್ದ ಅಪ್ಪಟ ಜ್ಞಾನ ಪಕ್ಷಪಾತಿಯಾಗಿದ್ದ ಇವರು ೨೦೦೪ರಲ್ಲಿ ಧಾರವಾಡದಲ್ಲಿ ನಿಧನರಾದರು.

ಕನ್ನಡದಲ್ಲಿ ಸಣ್ಣಕಥೆ, ನಾಟಕ, ಕಾವ್ಯ, ಕಾದಂಬರಿಯನ್ನು ರಚಿಸಿರುವ ಪುಣೇಕರರು ಇಂಗ್ಲೀಷನಲ್ಲೂ ಕೃತಿ ರಚನೆ ಮಾಡಿರುವರು. ಇಂಗ್ಲೀಷನಲ್ಲಿಯೂ ಕವನ, ವಿಮರ್ಶೆ, ಸಂಶೋಧನೆ ಕೈಗೊಂಡವರು. ಇಂಗ್ಲೀಷ ಕವಿತೆಗಳ ಸಂಗ್ರಹ 'ದ ಕ್ಯಾಪ್ಟೆವ್' ಇದಕ್ಕೆ ಸುಪ್ರಸಿದ್ಧ ವಿಮರ್ಶಕ ಸರ್ ಹರ್ಬರ್ಟರೀಡ್ ಮುನ್ನುಡಿ ಬರೆದಿದ್ದಾರೆ. ಅದಲ್ಲದೇ ಪುಣೇಕರರು ಬೇಂದ್ರೆ ಮತ್ತು ಗೋಕಾಕ್‌ರ ಅನೇಕ ಕವನಗಳನ್ನು, ಶ್ರೀ ಕೃತಿಯನ್ನು ಕುವೆಂಪುರವರ 'ಶ್ರೀ ರಾಮಯಾಣದರ್ಶನಂ'ನ್ನೂ ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ.

ಮೊಕಾಶಿಯವರು ಮೊದಲನೆಯ ಕೃತಿ ಗಾನಕೇಳಿ ಎಂಬ ಕವಿತಾ ಸಂಕಲನ. ಕುರ್ತುಕೋಟಿ ಹಾಗೂ ರಸೊಕಲ್ಲಿರೊಡನೆ ಕೂಡಿ ಪ್ರಕಟದ ಸಂಕಲನ ಅದು ೧೯೪೪ರಲ್ಲಿ ಅಲ್ಲಿಂದ ಮುಂದೆ ಗಂಗವ್ವ ಗಂಗಾಮಾಯಿ ೧೯೫೬ರಲ್ಲಿ. ವಿಪರ್ಯಾಸ ವಿನೋದ ನಾಟಕ ೧೯೬೦. ಕಾವ್ಯ ಮೀಮಾಂಸೆ ೧೯೬೨, ಮಾಯಿಯ ಮೂರು ಮುಖಗಳು ೧೯೭೦, ಸಾಹಿತ್ಯ ಮತ್ತು ಅಭಿರುಚಿ ೧೯೮೨, ಯುರೋಪಿಯನ್ ವಿಮರ್ಶೆಯ ಇತಿಹಾಸ ೧೯೮೩, ನಟನಾರಾಯಣ ೧೯೮೨, ಅವಧೇಶ್ವರಿ ೧೯೮೭, ಡೆರಿಕ್‌ಡಿಸೋಜಾ ಮತ್ತು ಇತರ ಕಥೆಗಳು ೧೯೯೦ ಮುಂತಾದಗಳನ್ನು ನೀಡುವುದರ ಮೂಲಕ ಸಾಹಿತ್ಯದಲ್ಲಿ ಗುರುತಿಸಿಕೊಂಡಿದ್ದಾರೆ.

ಮಾಯಿಯ ಮೂರು ಮುಖಗಳು ಎಂಬ ಕವಿತಾ ಸಂಗ್ರಹವು ಮೂವತ್ತೊಂಬತ್ತು ಕವಿತೆಗಳಿಂದ ಕೂಡಿದ್ದು, ಅದಕ್ಕೆ ಪ್ರಸಿದ್ಧ ನವ್ಯದ ಹರಿಕಾರರಾದ ಗೋಕಾಕರು ಮುನ್ನುಡಿಯನ್ನು ಬರೆದಿರುವುದು ಗಮನಾರ್ಹವಾಗಿದೆ. ಹಾಗೆಯೇ ಸ್ವತಃ ಮೊಕಾಶಿಯವರು ಆ ಕಾವ್ಯವನ್ನು ಗಜರ್ಭದ ಕಾವ್ಯವೆಂದು ಅದು ಸೂಲಗಿತ್ತಿಯ ಕಾಯಕದಿಂದಲೇ ಹೊರ ಬಂದಿದೆ ಎಂದು ಅವರು ಹೇಳುತ್ತಾರೆ.

ಕೇಂದ್ರ ಸಾಹಿತ್ಯ ಅಕಾಡೆಮಿಯ ೧೯೮೮ರ ಪ್ರಶಸ್ತಿ ಗಳಿಸಿದ ಅವಧೇಶ್ವರಿ ವೇದ ಕಾಲೀನ ರಾಜಕೀಯ ಕಾದಂಬರಿ ಎಂದು ವರ್ಣಿತವಾಗಿದೆ ಋಗ್ವೇದದ ಕೆಲವು ಪುಸ್ತಕಗಳಲ್ಲಿ ಉಲ್ಲೇಖಗೊಂಡ ಮತ್ತು ಹರಪ್ಪದ ಕೆಲವು ಸಾಲುಗಳಲ್ಲಿ ಸಿಕ್ಕುವ ಸ್ಥೂಲ ಅಂಶಗಳನ್ನು ಸೇರಿಸಿ ಮೊಕಾಶಿಯವರು ಆಕರ್ಷಕ ಕಥೆಯನ್ನಾಗಿ ನೇಯ್ದಿದ್ದಾರೆ. ಧರ್ಮದ ಚರ್ಚೆ ನೋಟಗಳು ಓದುಗರಿಗೆ ನಮ್ಮ ಸಮಕಾಲೀನ ಜೀವನದ ಪ್ರತಿಬಿಂಬದಂತೆ ಕಾಣಿಸುತ್ತವೆ.

'ಡೆರಿಕ್ ಡಿಸೋಜಾ ಮತ್ತು ಇತರ ಕಥೆಗಳು ಎಂಬ ಪುಸ್ತಕದಲ್ಲಿ ಮೊಕಾಶಿಯವರು ಎಂದೋ ಬರೆದ ಎಂಟು ಕಥೆಗಳು ಸಂಕಲನಗೊಂಡಿವೆ. ಸರಳವಾದ ಕಥಾಶೈಲಿಯನ್ನು ಹೊಂದಿದ್ದು, ಅವುಗಳ ವಸ್ತುವಿನ ಸ್ವಾರಸ್ಯ ಎದ್ದು ತೋರುತ್ತದೆ' ಎಂದು ಮುರಾರಿ ಬಲ್ಲಾಳರ ಮಾತನ್ನು ಪ್ರಸ್ತುತಪಡಿಸಬಹುದು.

ಪುಣೇಕರರ ವೈವಿಧ್ಯಮಯ ಸಾಹಿತ್ಯ ಪ್ರಕಾರವನ್ನು ನೀಡಿರುವರು. ಕೇವಲ ಕಥೆ, ಕಾದಂಬರಿ ಅಲ್ಲದೆ ಸಾಹಿತ್ಯ ವಿಮರ್ಶೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು ಅವರ 'ಯುರೋಪಿಯನ್ ವಿಮರ್ಶೆಯ ಇತಿಹಾಸ' ಎಂಬ ಪುಸ್ತಕದಿಂದ ಕಂಡುಕೊಳ್ಳಬಹುದು. ಮೊದಲಿನಿಂದಲೂ ಮೊಕಾಶಿಯವರು ನವ್ಯಪಂಥದವರನ್ನು ಗೇಲಿ ಮಾಡುತ್ತಲೇ ಬಂದಿದ್ದಾರೆ. ಪಾಶ್ಚಾತ್ಯ ಪ್ರಭಾವದಿಂದ ಹುಟ್ಟಿದ ಇತ್ತೀಚಿನ ವಿಮರ್ಶೆಯ ರೀತಿ ನೀತಿಗಳನ್ನು ಅವರು ಕಟುವಾಗಿ ಖಂಡಿಸುತ್ತಾರೆ. ಅವರ ಮಾತಲ್ಲೆ ಗ್ರಹಿಸುವುದಾರೆ "ಸಂದರ್ಭವರಿಯದೆ ಮಾಡಿದ ಒಳ್ಳೆ ಕೆಲಸವೂ ಕೆಟ್ಟ ಪರಿಣಾಮ ಬೀರಬಲ್ಲದು ವಿಮರ್ಶೆಯ ಇದ್ದ ಪ್ರತಿಭೆಯನ್ನು ಮುಂದುವರಿಸುವ ಯತ್ನ ಮಾಡಬಾರದು. ಕನ್ನಡದಲ್ಲಿ ಸ್ವಾತಂತ್ರ್ಯ ಪೂರ್ವಯುಗದಲ್ಲಿ ಇದ್ದ ಸಮತೋಲನ ಈಗ ಉಳಿದಿಲ್ಲ. ಸೃಜನಶೀಲರಲ್ಲಿ ಪಾಶ್ಚಾತ್ಯ ಶ್ರೇಷ್ಠ ಕೃತಿಗಳನ್ನು ಅನುಕರಿಸುವ ಹವ್ಯಾಸ ಹುಟ್ಟಿಸುವಲ್ಲಿ,

ಓದುಗರಲ್ಲಿ ಗೀಳು ಹುಟ್ಟಿಸುವಲ್ಲಿ ಇತ್ತೀಚಿನ ವಿಮರ್ಶೆ ದೊಡ್ಡ ಪಾತ್ರವಹಿಸಿದೆ" ಎಂದು ನನ್ನ ಭಾವನೆ, ಎಂದು ಹೇಳುತ್ತಾರೆ.

ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾದ ಪುಣೇಕರ ಮಹಾಪ್ರಬಂಧ 'ಲೇಟರ್ ಆಫೇಸ್ ಇನ್ ದಿ ಡೆವಲಪ್‌ಮೆಂಟ್ ಆಫ್ ಡಬ್ಲ್ಯೂ.ಬಿ.ಏಟ್ಸ್, ಮತ್ತು ದ ಲೇಟರ್ ಪೊಯೆಮ್ಸ್ ಆಫ್ ಡಬ್ಲ್ಯೂ.ಬಿ.ಏಟ್ಸ್' ಎಂಬ ಇನ್ನೊಂದು ಪುಸ್ತಕವು ಮೊಕಾಶಿಯವರು ಏಟ್ಸ್ ಪಾಂಡಿತ್ಯಕ್ಕೆ ಹಿಡಿದ ಕನ್ನಡಿಯಾಗಿದೆ.

೧೯೬೫ರಲ್ಲಿ 'ಅಪೂರ್ಣವರ್ತಮಾನ ಕಾಲ' ಎಂಬ ಇನ್ನೊಂದು ಜನಪ್ರಿಯ ಪುಸ್ತಕಮಾಲೆ ಹೊರ ಬಂದಿತು. ಜನಪ್ರಿಯತೆಯನ್ನು ಗಳಿಸಿದ ಚದುರಂಗರ ವೈಶಾಖ, ಟಿ.ಪಿ.ಕೈಲಾಸಂರ ಟೊಳ್ಳು ಗಟ್ಟಿ, ಗೋವಿಂದಪೈಗಳ ವೈಶಾಖಿ, ಕಣವಿಯವರ ಎರಡು ದಡ, ಕಾರಂತರ ಕಾದಂಬರಿಗಳು, ಗೋಕಾಕ ಇಂಗ್ಲಿಷ್ ಕವನಗಳು, ಕುವೆಂಪು ಮತ್ತು ಇಂಗ್ಲೀಷ ರೋಮ್ಯಾಂಟಿಕ್ ಕಾವ್ಯ ಮುಂತಾದ ಮೌಖಿಕವಾದ ಕೃತಿಗಳನ್ನು 'ಅಪೂರ್ಣವರ್ತಮಾನ ಕಾಲ'ದಲ್ಲಿ ಓದುಗರಿಗೆ ನೀಡಿದ್ದಾರೆ.

'ನಟನಾರಾಯಣಿ' ಇವರ ಮೂರು ಕಾದಂಬರಿಗಳಲ್ಲಿ ಒಂದಾಗಿದ್ದು, ಭಾರತದ ಸಾಂಸ್ಕೃತಿಕ ಪರಂಪರೆಯಲ್ಲಿ ಹೆಣದ ಕಾದಂಬರಿಯಾಗಿದೆ. ಹಿಂದೂಸ್ಥಾನಿ ಗಾಯನದಲ್ಲಿ ತೀವ್ರ ಆಸಕ್ತಿ ಇರುವ ಮೊಕಾಶಿಯವರು ಆ ಹಿಂದೂಸ್ಥಾನಿ ಸಂಗೀತವನ್ನು ತಮ್ಮ ಕೃತಿ ನಟನಾರಾಯಣಿ ಪಾತ್ರದ ಮೂಲಕ ಎತ್ತಿ ತೋರಿಸಿದ್ದಾರೆ.

ಕ್ರಿ.ಶ.೧೯೫೭ರಲ್ಲಿ ಪುಣೇಕರರಿಂದ ಮೊಟ್ಟಮೊದಲ ರಚಿತವಾದ 'ಗಂಗವ್ವ ಗಂಗಾಮಾಯಿ' ಕನ್ನಡದಲ್ಲಿ ಒಂದು ಅನನ್ಯ ಕೃತಿ ಎಂದು ಗುರುತಿಸಲಾಗಿದೆ. ಭಾರತದ ೧೪ ಭಾಷೆಗಳಲ್ಲಿ ಅನುವಾದಗೊಳ್ಳುವ ಅದೃಷ್ಟ ಪಡೆದುಕೊಂಡೆ. ಅನೇಕ ಹಿರಿಯ ಲೇಖಕರಾದ ಗಿರಡ್ಡಿ ಗೋವಿಂದರಾಜ ಕುರ್ತುಕೋಟಿ, ಮುರಾರಿ ಬಲ್ಲಾಳ, ಹಾ.ಮಾ.ನಾಯಕ, ಡಾ.ಜಿ.ಎಂ.ಹೆಗಡೆ, ಜಿ.ಎಸ್.ಆಮೂರ, ಎಲ್.ಎಸ್.ಶೇಷಗಿರಿರಾವ್ ಮುಂತಾದವರ ಮೆಚ್ಚುಗೆಯನ್ನು ಗಳಿಸಿದ ಇದು ನೀತಿಪರವಾದ ಕಾದಂಬರಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇದು ಮೇಲು ನೋಟಕ್ಕೆ ಸರಳವಾದ ಸುಂದರವಾದ ರೋಚಕ ಕಥೆ ಎನಿಸಿದರೂ ಅಂತರ್ಯದಲ್ಲಿ ಅಸಮಾನತೆಯನ್ನು ಹುದುಗಿಸಿಕೊಂಡಿದೆ.

೨೦ನೇ ಶತಮಾನದ ಆರಂಭದ ಆಸುಪಾಸಿನ ಸಂಪ್ರದಾಯಿಕ ನೆಲೆಗಟ್ಟಿನ ಉತ್ತರ ಕರ್ನಾಟಕದ ಈ ಸಣ್ಣ ಪಟ್ಟಣವು ಆಧುನಿಕತೆಯ ಆಘಾತಕ್ಕೆ ಒಡ್ಡಿಕೊಂಡಾಗ ಉಂಟಾದ ಸೂಕ್ಷ್ಮ ಪಲ್ಲಟಗಳು ಹಾಗೂ ತಲ್ಲಣಗಳು ಚಿತ್ರಣವಿದೆ. ವಿನೂತನ ಪ್ರಯೋಗವಾಗಿ ಮೂಡಿಬಂದದ್ದನ್ನು ವಿಮರ್ಶಕರು ಗುರುತಿಸಿದ್ದಾರೆ. ಕನ್ನಡದ ಹತ್ತು ಶ್ರೇಷ್ಠ ಕಾದಂಬರಿಗಳಲ್ಲಿ ಗಂಗವ್ವ ಗಂಗಾಮಾಯಿ ಒಂದೆಂದು ಪ್ರಸಿದ್ಧ ವಿಮರ್ಶಕ ಡಾ.ಜಿ.ಎಸ್.ಆಮೂರ ಅವರು ವಿಶ್ಲೇಷಿಸಿದ್ದಾರೆ. ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂದರ್ಭಗಳ ಮಹತ್ವ ಕಾದಂಬರಿಯಲ್ಲಿ ಮೌಲ್ಯಪ್ರಜ್ಞೆ, ನೈತಿಕತೆ, ಪಾತ್ರಗಳ ನಿರ್ಮಾಣ, ಪರಿಸರದ ಸೃಷ್ಟಿ. ಧಾರವಾಡದ ಸೊಗಡಿನ

ಭಾಷೆಗಳಿಂದ ನಿರ್ಮಿತವಾದ ಈ ಕಾದಂಬರಿ ಸಹೃದಯರಿಗೆ ಪುನಃ ಓದುವಂತೆ ಮಾಡಿದೆ. ಮೊಕಾಶಿಯವರು ಸಂಪ್ರದಾಯ ಶರಣ ಲೇಖಕ ಎನಿಸಿದರೂ ಆಧುನಿಕತೆ ಸಂಕೀರ್ಣ ಹಾಗೂ ವಿಭಿನ್ನ ವಿಚಾರಧಾರೆ ಉಳ್ಳ ಸಮೃದ್ಧವಾದ ಭಾವನೆಗಳ ಲೇಖಕರಾಗಿದ್ದರು ಎಂಬುದು ಕೃತಿಗಳ ಮೂಲಕ ಸ್ಪಷ್ಟವಾಗುತ್ತದೆ.

ಕನ್ನಡ ಸಾಹಿತ್ಯಕ್ಕೆ ಪುಣೇಕರರು ನೀಡದ ಕಥೆ, ಕಾವ್ಯ, ಕಾದಂಬರಿಗಳು ವಿಮರ್ಶೆ, ಬರಹಗಳು ಇಂಗ್ಲೀಷ್‌ಗಿಂತ ಕಡಿಮೆ ಎನ್ನಬಹುದು. ಎನೇ ಸಾಹಿತ್ಯಕ್ಕೆ ನೀಡಿದರೂ ಹಲವಾರು ಲೇಖಕರನ್ನು ಓದುಗರನ್ನು ಮೆಚ್ಚುಕೊಳ್ಳುವಂತೆ ಮಾಡಿವೆ. ತಮ್ಮ ಮೂವತ್ತಾರು ವಯಸ್ಸಿನಲ್ಲಿ ಪುಣೇಕರ ಇಂಗ್ಲೀಷ್ ಕವಿತೆಗಳ ಸಂಗ್ರಹ `ದ ಕ್ಯಾಪ್ಟೆವ್` ಪ್ರಕಟವಾಯಿತು. ಆ ಕವಿತೆ ಸಂಗ್ರಹಕ್ಕೆ ಸುಪ್ರಸಿದ್ಧ ವಿಮರ್ಶಕ ಸರ್ ಹರ್ಬರ್ಟರೀಡ್ ಮುನ್ನುಡಿ ಬರೆದಿದ್ದಾರೆ. ಆ ಪುಟ್ಟ ಮುನ್ನುಡಿಯಲ್ಲಿ ರೀಡ್ ಅವರು ಮೊಕಾಶಿಯವರ ಕವಿತೆಗಳನ್ನು ತುಂಬಾ ಸೂಕ್ಷ್ಮವಾಗಿ ಅವಲೋಕಿಸಿದ್ದಾರೆ. ಅದರಲ್ಲಿ ರೀಡ ಹೇಳಿದ ಹೇಳಿಕೆಯನ್ನು ಯಥಾವತ್ತಾಗಿ ಅವರ ಮಾತನಲ್ಲೆ ಗ್ರಹಿಸಲಾಗಿದೆ. 'ಶ್ರೀ ಮೊಕಾಶಿಯವರು ಇನ್ನೂ ತರುಣ ವಯಸ್ಸಿವರು ಅವರ ಕವಿತೆಗಳು ಇಂಗ್ಲೀಷ ಸಂಸ್ಕೃತಿಯ ಪಾರಂಪರಿಕ ಮೂಲದಿಂದ ಬಹುದೂರದಲ್ಲಿರುವ ಮುಂಬಾಯಿಯಲ್ಲಿ ಪ್ರಕಟವಾಗಿದೆ. ಒಂದು ದಿನ ಮೊಕಾಶಿಯವರ ಕಾವ್ಯ ಇಂಗ್ಲೀಷ ಬಲ್ಲ ಪ್ರಪಂಚದ ಎಲ್ಲೆಡೆಯಲ್ಲಿಯೂ ಪರಿಚಯಗೊಳ್ಳುತ್ತವೆ ಎಂದು ನಾನು ಭವಿಷ್ಯ ಹೇಳಬಲ್ಲೆ".೧

ಸರ್ ಹರ್ಬರ್ಟ್ ರೀಡ ಅವರ ಮುನ್ನುಡಿಯ ಮಾತುಗಳು ಅನೇಕರನ್ನು ಆ ಮಾತುಗಳ ಸಫಲತೆಗಾಗಿ ಕಾಯುವಂತೆ ಮಾಡಿದರು. ಮೊಕಾಶಿಯವರು ರೀಡರ್ ಭವಿಷ್ಯವಾಣಿಯನ್ನು ನಿಜವಾಗಿಸಲಿಲ್ಲ. ಅವರ ಇಂಗ್ಲೀಷ ಕಾವ್ಯಕ್ಕಿಂತ ಸ್ವಂತ ಭಾಷೆಯಲ್ಲಿ ಅರಳಿದರು. ಆ ಭಾಷೆಯಲ್ಲಿ ಮೂರು ಕಾದಂಬರಿಗಳನ್ನು ಕತೆ ಕವಿತೆ ವಿಮರ್ಶೆಗಳನ್ನು ಬರೆದು ಪ್ರಸಿದ್ಧರಾದರೆಂದು ಹಾ.ಮಾ.ನಾಯಕರು (ಸಾಹಿತ್ಯ ವಿಮರ್ಶೆ ೧೯೯೮ರಲ್ಲಿ) ಹೇಳಿರುವರು.

ಮೊಕಾಶಿಯವರು ಜನಪ್ರಿಯ ವೈಚಾರಿಕ ಪ್ರಭಾವಗಳ ಧ್ವನಿಯೆತ್ತುವ ಘೋಷಿತ ಚಳುವಳಿ ಸಿದ್ಧಾಂತಗಳನ್ನು ಲೆಕ್ಕಿಸದೆ ಬರೆಯುವ ನೈತಿಕ ಸ್ಥೈರ್ಯವಿದ್ದ ಅಪರೂಪ ವ್ಯಕ್ತಿ. ನವ್ಯದ ಉತ್ತುಂಗ ಕಾಲದಲ್ಲಿ ತಮಗೆ ನವ್ಯದ ಬಗೆಗಿದ್ದ ಅನುಮಾನಗಳನ್ನು ಸ್ಪಷ್ಟವಾಗಿ ಮೊನಚು ಶೈಲಿಯಲ್ಲಿ ಉಲ್ಲೇಖಿಸುತ್ತಾರೆ.

ಹಾ.ಮಾ.ನಾಯಕ, ಪುಣೇಕರರನ್ನು ಬಹಳ ಹತ್ತಿರದಿಂದ ಕಂಡವರು. ಅವರ ಬಗ್ಗೆ ಹಾ.ಮಾ.ನಾಯಕರ ಒಂದು ಗ್ರಹಿಕೆ ಈ ರೀತಿಯಾಗಿದೆ. 'ಮೊಕಾಶಿಯವರು ಇಂಗ್ಲೀಷ್‌ನಲ್ಲಿಯೂ ಕೃತಿ ಬರೆದು ಹೆಸರಾದ ಕನ್ನಡ ಲೇಖಕರಲ್ಲಿ ಒಬ್ಬರು. ಡಬ್ಲ್ಯೂ.ಬಿ.ಏಡ್ಸ್‌ನನ್ನು ಕುರಿತು ಅಧಿಕೃತವಾಗಿ ಮಾತನಾಡಬಲ್ಲ ಭಾರತೀಯರಲ್ಲಿ ಮೊಕಾಶಿಯವರು ಸೇರುತ್ತಾರೆ. ಪುಣೇಕರರು ನವ್ಯವಾದಿಗಳನ್ನು ಪದೇ ಪದೇ ಕೆಣುಕುತ್ತಾರೆ. ಆದರೆ ತಮ್ಮ ಪುಸ್ತಕಗಳನ್ನು ಕುರಿತು ಇದೇ ನವ್ಯವಾದಿಗಳು ಮಾತನಾಡಬೇಕೆಂದು ಅವರು ಬಯಸುತ್ತಾರೆ. ಇದೊಂದೇ

ಅವರ ವ್ಯಕ್ತಿತ್ವದ ಧ್ವಂದ್ವ'.[೨] ಸಾಂಸ್ಕೃತಿಕ ಮಂದಿ ಹೊಸಕಾಲದ ಆಶಯಗಳಿಗೆ ಸ್ಪಂದಿಸಲಾರರು ಎಂಬ ಆಧುನಿಕ ಲೇಖಕರ ಅನುಮಾನವನ್ನು ತಮ್ಮ ನವಿರು ನವಿರಾದ ಹಾಸ್ಯದ ಮೂಲಕ ಲೇವಡಿ ಮಾಡುತ್ತಾರೆ. ವಿಮರ್ಶೆಗಳಲ್ಲಿ ಮಾತ್ರವಲ್ಲದೆ ಕಾದಂಬರಿಗಳಲ್ಲೂ ಅವರ ಈ ಧೋರಣೆ ವ್ಯಕ್ತವಾಗುತ್ತವೆಂದು ಹೇಳಬಹುದು.

ಇನ್ನೊಬ್ಬ ಹಿರಿಯ ಲೇಖಕರಾದ ಮುರಾರಿ ಬಲ್ಲಾಳರವರು ಪುಣೇಕರ ಸಾಹಿತ್ಯದ ಕುರುತಾಗಿ ಈ ರೀತಿ ತಮ್ಮ ನಿಲುವನ್ನು ತಳೆದಿದ್ದಾರೆ. ''ಆಂಗ್ಲ ಸಾಹಿತ್ಯದ ವಿದ್ವಾಂಸರಾಗಿದ್ದರೂ ಕೂಡ ಮೊಕಾಶಿಯವರು ಆ ಪಾಶ್ಚಾತ್ಯ ಸಾಹಿತ್ಯದ ಮತಿದಾಸ್ಯದಲ್ಲಿ ಬೀಳದೆ, ತನ್ನೊಳಗಿನ ಗಟ್ಟಿಯಾದ ಆರ್ವೇಯ ದೃಷ್ಟಿಕೋನವನ್ನು ಕಾಪಾಡಿಕೊಂಡವರು ಮಾತ್ರವಲ್ಲ ತನ್ನ ಈ ಪೌರ್ವಾತ್ಯ ದೃಷ್ಟಿಕೋನದಲ್ಲಿ ಪಾಶ್ಚಾತ್ಯ ನವ್ಯರ ವ್ಯಕ್ತಿನಿಷ್ಠ ದೃಷ್ಠಿಕೋನವನ್ನು ಮತ್ತು ಮೂಲಗ್ರಹಿಕೆಗಳನ್ನು ಅನುಮಾನದಿಂದ ಪ್ರಶ್ನಿಸುತ್ತಾ ಬಂದವರು''.[೩]

''ಗೋಕಾಕರ ಕಾವ್ಯ ಮತ್ತು ಸಾಹಿತ್ಯದ ಚಿಂತನದ ಪ್ರಭಾವಕ್ಕೆ ಒಳಗಾಗಿ ತಮ್ಮ ಧ್ವನಿ ವಿಶಿಷ್ಟತೆಯನ್ನು ಬೆಳಸಿಕೊಂಡವರಲ್ಲಿ ಮುಖ್ಯರಾದವರು ಗಂಗಾಧರ ಚಿತ್ತಾಲ. ಸು.ರಂ.ಎಕ್ಕುಂಡಿ, ಶಂಕರಮೊಕಾಶಿ, ಪುಣೇಕರ ಮತ್ತು ಅಕಬರ ಅಲಿ. ಇದರಿಂದ ಮೊಕಾಶಿಯವರು ಬೇಂದ್ರೆ, ಕುವೆಂಪು ಹಿರಿಯ ಸಾಹಿತಿಗಳ ಬಗ್ಗೆ ಒಲವು ಇದ್ದಂತೆ ಗೋಕಾಕರ ಕಾವ್ಯ ಸಾಹಿತ್ಯವು ಇವರ ಪ್ರಭಾವಕ್ಕೆ ಒಳಗಾಗಿತ್ತು''[೪] ಎಂಬುದು ಅವರ ಕಾವ್ಯ ಕೃತಿಗಳಿಂದ ಕಂಡುಕೊಳ್ಳಬಹುದಾಗಿದೆ.

ಶಂಕರ ಮೊಕಾಶಿಯವರ ಕಾದಂಬರಿ ಗಂಗವ್ವ ಗಂಗಾಮಾಯಿ ಬಗ್ಗೆ ಕುರ್ತುಕೋಟಿಯ ವಿಶೇಷವಾದ ಆಸಕ್ತಿ ವಹಿಸಿ ಕೈಗೊಂಡ ಇವರು ಆ ಕಾದಂಬರಿ ಕುರಿತು ''ಕನ್ನಡದ ಒಂದು ಅನನ್ಯಕೃತಿ ಪಾತ್ರದಲ್ಲಿ ಒಂದು ಹೊಸತನ ಪಾತ್ರ ಸೃಷ್ಠಿಯೇ ಕಾದಂಬರಿಯ ಜೀವಾಳ. ಕೃತಿಗಳು ಜಗತ್ತಿನೊಡನೆ ನಮ್ಮ 'ಂಬಂಧವನ್ನು ಜೋಡಿಸುವ ಸೇತುವೆಗಳಾಗಿವೆ. ಮೊಕಾಶಿಯವರು ಈ ಸೇತುವೆಯ ಮೇಲಿನಿಂದ ನಡೆದು ಹೋಗಿ ಪಾತ್ರಗಳ ವ್ಯಕ್ತಿತ್ವವನ್ನು ಮುಟ್ಟಿದ್ದಾರೆ. ಅದಕ್ಕಾಗಿ ಈ ಕಾದಂಬರಿಯ ಪಾತ್ರ ರಚನೆ ತೀರ ಮಹತ್ವದಾಗಿದೆ. ಎಂದು ಹೇಳುವುದರ ಮೂಲಕ ಕಾದಂಬರಿ ಬಗ್ಗೆ ಮೆಚ್ಚುಗೆಯನ್ನು ಸೂಚಿಸಿದ್ದಾರೆ.''[೫]

ಗಂಗವ್ವ ಗಂಗಾಮಾಯಿ ಕನ್ನಡದ ಹತ್ತು ಶ್ರೇಷ್ಠ ಕಾದಂಬರಿಗಳಲ್ಲಿ ಒಂದೆಂದು ಪ್ರಸಿದ್ಧ ವಿಮರ್ಶಕ ಜಿ.ಎಸ್.ಆಮೂರ ವಿಶ್ಲೇಷಿಸಿದ್ದಾರೆ. ಜಿ.ಎಂ.ಹೆಗಡೆ ಹೇಳುವಂತೆ ''ಲೇಖಿನ ಸೃಜನಶೀಲತೆ ಮತ್ತು ಸ್ವೋಪೊಜ್ಞತೆಯ ಗುಣ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂದರ್ಭದಲ್ಲಿ ಮಹತ್ವ, ಕಾದಂಬರಿಯಲ್ಲಿ ಅವ್ಯಕ್ತವಾದ ಮೌಲ್ಯಪ್ರಜ್ಞೆ ಮತ್ತು ನೈತಿಕತೆ, ಪಾತ್ರಗಳ ಜೀವಂತ ಪರಿಸದ ಸೃಷ್ಟಿ, ಅನುಭವಕ್ಕೆ ಮೂರ್ತರೂಪ ಕೊಡುವ ಭಾಷೆ, ಪರಂಪರೆಯ ಅರಿವು ಮತ್ತು ಮಾರ್ಗಪ್ರರ್ತಕ ಶಕ್ತಿ ಈ ಮೊದಲಾದ ಗುಣಗಳಿಂದ 'ಗಂಗವ್ವ ಮತ್ತು ಗಂಗಾಮಾಯಿ' ಕನ್ನಡದ ವಿಶಿಷ್ಟ ಕಲಾಕೃತಿಯೆಂಬುದು ಸತ್ಯ ನಿಷ್ಠ ವಿಚಾರವಾಗಿದೆ.''[೬] ಎಂದು ತಮ್ಮ ಸಾಹಿತ್ಯ ಮತ್ತು ಸಹೃದಯತೆ ಕೃತಿಯಲ್ಲಿ ಪುಣೇಕರರ ಗಂಗವ್ವ ಗಂಗಾಮಾಯಿ ಕಾದಂಬರಿಯನ್ನು ವಿಮರ್ಶಿಸಿದ್ದಾರೆ.

ಸಾಹಿತ್ಯ ನೋಟ ಎಂಬ ಕೃತಿಯಲ್ಲಿ ಡಿ.ನಾಗಣ್ಣನವರು ಈ ರೀತಿಯಾಗಿ ಪ್ರತಿಕ್ರಿಯಿಸುತ್ತಾರೆ. ''ಗೋಕಾಕರ ಪ್ರಭಾವಕ್ಕೆ ಒಳಗಾಗಿ ತಮ್ಮದೇ ಆದ ಸ್ವಂತ ಧ್ವನಿಯನ್ನು ರೂಡಿಸಿಕೊಂಡ ಕವಿಗಳಲ್ಲಿ ಗಂಗಾಧರ ಚಿತ್ತಾಲ, ಶಂಕರಮೊಕಾಶಿ ಪುಣೇಕರ, ಎಕ್ಕುಂಡಿ, ಅಕಬರ ಅಲಿ ಮುಂತಾದವರಿದ್ದಾರೆಂದು ನುಡಿದಿರುತ್ತಾರೆ.''[೭]

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟವಾದ 'ಕನ್ನಡ ವಿಷಯ ವಿಶ್ವಕೋಶ ಸಂಪುಟ ೨ರಲ್ಲಿ ''ಗಂಗಮ್ಮ ಗಂಗಾಮಾಯಿ ಕಾದಂಬರಿಯು ನವ್ಯವನ್ನು ದಿಕ್ಕರಿಸುವ ಮತ್ತು ಸಂಪ್ರದಾಯವನ್ನು ಬೇಕೆಂದೇ ಎತ್ತಿ ಹಿಡಿದಿರುವ ಕೃತಿಯಾಗಿದೆ. ಎಂದು ನಿರೂಪಿಸಿರುವರು.''[೮]

ಭಾರತೀಯ ಸಾಹಿತ್ಯ ಸಮೀಕ್ಷೆಯಲ್ಲಿ ಕೆಲವು ನವ್ಯ ವಿಮರ್ಶಕರನ್ನು ಕುರಿತು ಪ್ರಸ್ತಾಪಿಸುತ್ತಾ ಹೊಸಯುಗದ ಹರಿಕಾರರೆಂದು ಹೆಸರಿಸುವ ಎರಡು ಕಾದಂಬರಿಗಳು ೧೯೫೬-೬೭ರಲ್ಲಿ ಪ್ರಕಟವಾದವು. ಮೊದಲನೆಯದು ಶಂಕರ ಮೊಕಾಶಿ ಪುಣೇಕರ ಗಂಗವ್ವ ಗಂಗಾಮಾಯಿ ಉದ್ದೇಶ ಪೂರ್ವಕವಾಗಿಯೇ ಹಳೆಯ ಕಾಲದ ರೂಡಿಗಳಿಗೆ ಅಂಟಿಕೊಂಡರು.''[೯] ಉದಾಹರಣೆಗೆ ಕಾದಂಬರಿಕಾರರು ಓದುಗರನ್ನು ಪ್ರಿಯವಾಚಕರೇ ಎಂದು ಸಂಭೋದಿಸುತ್ತಾರೆ. ಮತ್ತೆ ಮತ್ತೆ ನೇರವಾಗಿ ಪ್ರವೇಶಿಸುತ್ತಾರೆ. ಕಾದಂಬರಿಯು ಕೇಂದ್ರ ವ್ಯಕ್ತಿ ಕಿಟ್ಟಿ ಅವನೇನು ಕೆಟ್ಟವನಲ್ಲ ಆದರೆ ಅವನದು ಬಹು ದುರ್ಬಲ ಮನಸ್ಸು ಹೇಗೋ ತಳ್ಳಿಕೊಂಡು ಹೋಗುವ ಸ್ವಭಾವ, ಅವನ ದೌರ್ಬಲ್ಯವು ಇತರರ ಬಾಳುಗಳಲ್ಲಿ ತೊಡಕನ್ನುಂಟು ಮಾಡುತ್ತದೆ. ಮತ್ತು ಅವನನ್ನು ಅಸನ್ಮುಖಿಯನ್ನಾಗಿ ಮಾಡುತ್ತದೆ ಅವನ ಬದುಕಿನಲ್ಲಿ ಇತರರ ಮನಸ್ಸುಗಳು ಆಕರ್ಷಿಸುತ್ತವೆ. ತೀರ್ಮಾನಿಸುವುದಕ್ಕಾಗಲಿ ಕಾರ್ಯ ಪ್ರವೃತ್ತನಾಗುವುದಕ್ಕಾಗಲಿ ದುರ್ಬಲನೂ ಜಡನೂ ಆದ ಅವನಿಂದ ಸಾದ್ಯವಾಗುವುದಿಲ್ಲ.

ಜಿ.ಎಸ್.ಆಮೂರ 'ಕನ್ನಡ ಕಥನ ಸಾಹಿತ್ಯ: ಕಾದಂಬರಿ'ಯಲ್ಲಿ ಗಂಗವ್ವ ಗಂಗಾಮಾಯಿ ಕಾದಂಬರಿ ಕುರಿತು ಈ ರೀತಿ ಗ್ರಹಿಸಿದ್ದಾರೆ. ''ಗ್ರಾಮಾಯಣಕ್ಕಿಂತ ಒಂದು ವರ್ಷ ಮೊದಲೇ ಪ್ರಕಟವಾದ ಗಂಗವ್ವ ಗಂಗಾಮಾಯಿಯಲ್ಲಿಯೂ 'ಸಂಪ್ರದಾಯ ಶರಣ' ಕಾದಂಬರಿಯೆಂದು ಕರೆದು ಮೊಕಾಶಿಯವರು ಅದರ ಒಂದುಮುಖವನ್ನು ಮಾತ್ರ ತೋರಿಸಿದ್ದಾರೆ. ಈ ಕಾದಂಬರಿ ನಮಗೆ ಮಹತ್ವವಾಗುವುದು ಸಂಪ್ರದಾಯ ಆಧುನಿಕತೆಗಳನ್ನು ಒಟ್ಟಿಗೆ ಹಿಡಿಯುವುದರಿಂದ ಇಲ್ಲಿ ಕ್ರಿಯೆ ಎರಡು ಸ್ತರಗಳಲ್ಲಿ ನಡೆಯುತ್ತದೆ. ಮೊದಲನೆಯದು ಗಂಗವ್ವ ಮತ್ತು ರಾಘುಪ್ಪರಂಥ ಪ್ರಚಂಡ ವ್ಯಕ್ತಿಗಳ ನಡುವೆ ನಡೆಯುವ ಸಂಘರ್ಷದ ಸ್ತರ ಎರಡನೆಯದು ತಾಯಿಯ ಪ್ರಭಾವದಲ್ಲಿಯೇ ಬೆಳೆದ ದುರ್ಬಲ ಕಿಟ್ಟಿ ತನ್ನ ಪರಧಿಯಲ್ಲಿಯೇ ತನ್ನತನದ ಅರವಿನಿಂದ ಗಟ್ಟಿಯಾಗುವ ಕ್ರಿಯೆಯ ಸ್ತರ, ಮೂಲಭೂತ ಪ್ರವೃತ್ತಿಗಳಲ್ಲಿ ನಡೆಯುವ ಮೊದಲನೆಯ ಕ್ರಿಯೆ ಸಂಪ್ರದಾಯಿಕವಾದರೆ ವ್ಯಕ್ತಿತ್ವದ ಬೆಳವಣಿಗೆಗೆ ಸಂಬಂಧ ಪಟ್ಟ ಎರಡನೆ ಕ್ರಿಯೆ ಆಧುನಿಕವಾದದ್ದು''.[೧೦]

ಗಂಗವ್ವ ಗಂಗಾಮಾಯಿಯಲ್ಲಿ ಮೊಕಾಶಿಯವರ ಮುಖ್ಯ ಸಾಧನೆ ಟ್ರಾಜಿಕ್ ಹಾಗೂ ಕಾಮಿಕ್ ಸ್ತರಗಳ್ ಸಾಧಿಸುವ ತಕ್ಷಣ ಇಲ್ಲಿ ಕಾಮಿಕ್ ವಸ್ತು ಕೇವಲ ರಿಲೀಫ್ ಕೊಡುವ ಉದ್ದೇಶಕ್ಕಾಗಿ ಬರೆದ ಕಾದಂಬರಿಯ ವಸ್ತುವಿನ ಅವಿಭಾಜ್ಯ ಅಂಗವಾಗಿದೆ ಎನ್ನುವುದು ಗಮನಾರ್ಹ.

''ಕಾದಂಬರಿಯ ಬರಿಯ ಮೇಲ್ಪದರುಗಳಲ್ಲಿ ಗಮನಿಸಿದರೆ ಒಂದು ಸರಳ ಕಥೆಯೆ ಇಲ್ಲಿದೆ. ಆದರೆ ಕಥೆಯ ಈ ಸರಳತನ ಕಥೆಗಾರ ಒಂದು ಕುಶಲ ನೆಯ್ಗೆಯ ಒಂದು ವಿಜಯ ಮಾತ್ರ ಅರಕ್ಕೇರದ ಮೂರಕ್ಕಿಳಿಯದ ಈ ಸರಳ ಕಥೆ ತನ್ನ ಸರಳ ಕಥಾನಕದ ಚೌಕಟ್ಟಿಗೆ ಎಷ್ಟೋ ಪಟ್ಟು ವೀರಿದ ಬದುಕಿನ ಹರವನ್ನೂ ಜೀವನ ಮೌಲ್ಯಗಳ ಹಾಸನ್ನೂ ತನ್ನ ತೆಕ್ಕೆಯಲ್ಲಿ ಭದ್ರವಾಗಿ ಬಚ್ಚಿಟ್ಟುಕೊಂಡಿದೆ ಎಂಬುದು ತುಂಬಾ ಮುಖ್ಯವಾದ ಅಂಶ. ಬಿಚ್ಚಿದರೆ ಸಾಕು ನಮ್ಮ ಸಮಗ್ರ ಮಧ್ಯಮ ವರ್ಗದ ಬದುಕನ್ನೆಲ್ಲ ಆವರಿಸಿ ಪ್ರತಿನಿಧಿಕವಾಗಿ ನಿಂತುಬಿಡುವ ದಟ್ಟ ಜೀವನ ಸಾಂದ್ರತೆಯನ್ನೇ ಇದು ತನ್ನಲ್ಲಿ ಅಡಕವಾಗಿಟ್ಟುಕೊಂಡಿದೆ. ಇದು ಹೇಗೆ ಎಂಬುದನ್ನರಿಯಲು ಕಾದಂಬರಿಯ ಒಂದೊಂದೇ ಪದರಗಳನ್ನ ಬಿಚ್ಚಿನೋಡಿದರೆ ಸಾಕು.[೧೧] ಎಂದು ದೇಶಪಾಂಡೆ ಸುಬ್ಬುರಾವ್ ಪ್ರತಿಪಾದಿಸಿದ್ದಾರೆ.

ನರಹಳ್ಳಿ ಬಾಲಸುಬ್ರಹ್ಮಣ್ಯರವರು ''ಮೊಕಾಶಿಯವರು ಕಾವ್ಯಕ್ಕಿಂತಲೂ ಕಾದಂಬರಿಗಳ ಮೂಲಕ ಪ್ರಸಿದ್ಧರಾಗಿದ್ದರು. 'ಗಂಗವ್ವ ಗಂಗಾಮಾಯಿ' ನವ್ಯ ಸಾಹಿತ್ಯದ ಒಂದು ವಿಶಿಷ್ಟ ಪ್ರಯೋಗ'ವೆಂದು ಹೇಳಿದ್ದಾರೆ.''[೧೨]

ಶ್ರೇಷ್ಠ ವಿಮರ್ಶಕರಾದ ಗಿರಡ್ಡಿಗೋವಿಂದರಾಜ, ಮೊಕಾಶಿಯವರನ್ನು ಮತ್ತು ಅವರ ಕೃತಿಯನ್ನು ಕುರಿತು ಅವರ ಮಾತಲ್ಲೆ ಗ್ರಹಿಸುವುದಾರೆ ''ಗಂಗವ್ವ ಗಂಗಾಮಾಯಿ ನವ್ಯ ಕಾದಂಬರಿಗಳ ಪರಂಪರೆಯಲ್ಲಿ ಒಂದು ವಿಪರೀತ ಪ್ರಯೋಗ ಮೊಕಾಶಿಯವರು ಎಂದಿನಿಂದಲೂ ನವ್ಯ ಲೇಖಕರ ಪ್ಯಾಶನೆಬಲ್ ರೀತಿ-ನೀತಿಗಳನ್ನು ಖಂಡಿಸುತ್ತಾ ಬಂದಿದ್ದಾರೆ. ಅವರದು ಒಂದು ರೀತಿಯ ವಿಪರೀತ ಪ್ರತಿಭೆ. ನಾಲ್ಕು ಜನ ಹಳೆದೆಂದು ಕಡೆಗಣಿಸಿದರಲ್ಲೇ ಅವರು ಹೊಸ ಅವಕಾಶಗಳನ್ನು ಕಾಣಿಸಬಲ್ಲರು 'ಗಂಗವ್ವ ಗಂಗಾಮಾಯಿ'ಯಲ್ಲಿ ಅವರು ಹಟದಿಂದ ಸಂಪ್ರದಾಯಿಕ ಬರವಣಿಗೆಯ ರೀತಿಗಳನ್ನು ಅನುಸರಿಸಿದ್ದಾರೆ ಪ್ರಿಯ ವಾಚಕರೇ ಎಂದು ಸಂಭೋದಿಸುವ ಮಟ್ಟಿಗೆ ಅವರು ತಮ್ಮ ಹಟ ಸಾಧಿಸಿದ್ದಾರೆ.''[೧೩]

ಸಿ.ಆರ್. ಎರವೀನ ತೆಲಿಮಠ ತಮ್ಮ ಕೃತಿ 'ಪಾಶ್ಚಾತ್ಯ ಸಾಹಿತ್ಯವಾದಗಳು ಸಾಹಿತ್ಯ ಸಂದರ್ಭ'ದಲ್ಲಿ ''ಗಂಗವ್ವ ಗಂಗಾಮಾಯಿ' ಒಂದು ವಾಸ್ತವಾದಿ ಪರಂಪರೆಯ ಪ್ರಧಾನ ಧಾರಣೆಗೆ ಸೇರುವ ಕೃತಿಯಾಗಿದೆ''[೧೪] ಎಂದು ಅವರ ಅಭಿಮತ

ಅರವಿನ ಕಥನ ಎಂಬ ಕೃತಿಯಲ್ಲಿ ಮಲ್ಲೇಪುರಂ ಜಿ. ವೆಂಕಟೇಶರವರು, ಮೊಕಾಶಿಯವರ ಬಹುಮುಖ ಪ್ರತಿಭೆಯನ್ನು ಕೊಂಡಾಡುತ್ತಾ ಅವರ ಕಾದಂಬರಿ ಕುರಿತು ಈ ರೀತಿ ಹೇಳುತ್ತಾರೆ. ''ಗಂಗವ್ವ ಗಂಗಾಮಾಯಿ

ಒಂದು ನೀತಿ ಕಾದಂಬರಿ, ಎರಡನೆಯ್ಯ ಕಾದಂಬರಿ 'ನಟನಾರಾಯಣಿ' ಪತ್ತೆದಾರಿ ಕಾದಂಬರಿ, ಮೂರನೇ 'ಅವದೇಶ್ವರಿ'ಗೆ ವೇದಕಾಲಿನ ರಾಜಕೀಯ ಕಾದಂಬರಿ, ಮೊಕಾಶಿಯವರು ಇಂತಹ ಉಪಶೀರ್ಷಿಕೆಗಳಲ್ಲಿ ಸೂಚಿಸಿ ಬಿಡುತ್ತಾರೆ''[೧೫] ಎಂದಿರುವರು.

ರಹಮತ್ ತರೀಕೆರೆಯವರು ಮೊಕಾಶಿಯವರನ್ನು ಸಂದರ್ಶಿಸಿ ತರೀಕೆರೆಯವರು ಮೊಕಾಶಿಯವರಿಗೆ ಕೇಳಿದ ಪ್ರಶ್ನೆ ಈ ರೀತಿಯಾಗಿತ್ತು. ನಿಮ್ಮ ಮೂರು ಕಾಂದಬರಿಗಳು ಸ್ತ್ರೀಯರ ಹೆಸರಲ್ಲಿವೆ. ನಿಮ್ಮ ಕತೆಗಳಲ್ಲಿ ಕೂಡ ಸ್ತ್ರೀಯರು ಬರ್‍ತಾರೆ. ಇವರೆಲ್ಲ ಬದುಕನ್ನು ಎದರು ಹಾಕ್ಕೊಂಡು ಸಣಸಾಟ ಮಾಡುವ ಧೀಮಂತ ಸ್ತ್ರೀಯರು ಗಂಗವ್ವ ಗಂಗಾಮಾಯಿಯ ಗಂಗವ್ವ, ಅವಧೇಶ್ವರಿಯ ಪುರಕತ್ಸಾನಿ 'ನಟನಾರಾಯಣಿ'ಯ ಝುಬೇದ ಇವರೆಲ್ಲ ಈ ಸ್ತ್ರೀಯರನ್ನು ಕಾಣಿಸುವಾಗ ನಿಮಗೆ ಏನು ಪ್ರೇರಣೆ? ಪುಣೇಕರ್‌ರವರು ಈ ಪ್ರಶ್ನೆಗೆ ತಮ್ಮ ಉತ್ತರವನ್ನು ಈ ರೀತಿಯಾಗಿ ವ್ಯಕ್ತಪಡಿಸಿದ್ದಾರೆ. ಈ ಕ್ವಾಲಿಟಿ ಅಂತಂಬೋದು ಎದರಲ್ಲಿದೆ? ನಮ್ಮ ಭಾರತೀಯ ಸ್ತ್ರೀ ಬಗ್ಗೆ ೧೯ನೇ ಶತಮಾನದ ಮೆಕಾಲೆ ಬರದಂಥ ಮಾತುಗಳು ನೆನಪಿಗೆ ಬರ್‍ತಾವ 'ಪಿಪೊಸಿಶನ್ ಆಫ್ ಇಂಡಿಯನ್ ವುಮನ್ ಆಫ್ ಹೊಂ, ಬೇರೆ ಕಡೆಗೆ ಎಲ್ಲೂ ಸಿಗೋದಿಲ್ಲ ಅಂತ ತಿಳಕೊಂಡು ಬರದಾನ. ಅವರಿಗೆ ಶಿಕ್ಷಣ ಇರೋದಿಲ್ಲ ಇಷ್ಟೇ ಹೊರತು ಎಲ್ಲ ರೀತಿಂದ ಗಂಡಸಿನಷ್ಟೆ ಗುಣ ಅವರಿಗೆ ಇರ್ತದೆ. ಒಮ್ಮೊಮ್ಮೆ ಅವನಿಕ್ಕಂತ ದೊಡ್ಡಗುಣಗಳೂ ಇರ್ತಾವೆ. ಅವರಿಗೆ ಮಾತಾಡ್ಲಿಕ್ಕೆ ಸ್ಕೋಪ ಇಲ್ಲಾಂತ ಸಣ್ಣಪಾತ್ರಗಳು ಆಗ್ತವೆ.''[೧೬]

'ಕನ್ನಡ ಸಾಹಿತ್ಯ ಮೀಮಾಂಸೆ' ಎಂಬ ಕೃತಿಯ ಸಂಪಾದಕರಾದ ಎಲ್.ಎಸ್. ಶೇಷಗಿರಿಯವರು ''ಗಂಗವ್ವಗಂಗಾಮಾಯಿ'ಯಂತಹ ಕಾದಂಬರಿ ಬರೆದ ಮೊಕಾಶಿಯವರ ಚಿಂತನ ಪರಿಯೇ ಬೇರೆ, ಅವರನ್ನು ಕನ್ನಡದ ಹುಚ್ಚು ಪ್ರತಿಭೆಯ ಚಿಂತಕರೆನ್ನಬಹುದು. ಅವರ ಆಲೋಚನೆ ಹೇಗೆ ಭಿನ್ನವಾಗಿ ದಿಟವಾಗಿ ಆಳವಾಗಿ ಇರುತ್ತವೆ. ನವ್ಯ ಪಂಥದ ಕಡುವಿರೋಧಿಯೂ ನವೋದಯ ಸಂಪ್ರದಾಯದ ಮಹಾಸಮರ್ಥಕರೂ ಆಗಿದ್ದ ಪುಣೇಕರರು. ಹಠಪೂರ್ವಕವಾಗಿ ಎರಡು ಸಂಗತಿಗಳನ್ನು ಸ್ಥಾಪಿಸಿದ್ದಾರೆ. ಒಂದು ವಸಾಹತು ಆಕ್ರಮಣ ನಮ್ಮ ಸಂಸ್ಕೃತಿ ಕೊಚ್ಚಿ ಹೋಗದಂತೆ ತಡೆದ ಅಂತಃ ಸತ್ವವು ಪರಂಪರೆಯೊಳಗೇ ಇದೆ ಎರಡು ಈ ಅಂತಸತ್ವದ ಅರಿವಿಲ್ಲದಕ್ಕಾಗಿಯೇ ರಕ್ತ ಹೀನವಾಗಿರುವ ನವ್ಯ ಸಾಹಿತ್ಯವು ಮೂಲತಃ ವಸಾಹತುಶಾಹಿ ಉತ್ಪನ್ನವಾಗಿದೆ.''[೧೭]

ಹೀಗೆ ಪುಣೇಕರ ಮತ್ತು ಅವರ ಕಾದಂಬರಿಯನ್ನು ಕುರಿತು ಅನೇಕ ಲೇಖಕರ, ವಿಮರ್ಶಕರ, ಸಾಹಿತಿಗಳಿಂದ ಲೇಖನಗಳು ಮೂಡಿಬಂದಿರುವುದನ್ನು ಕಾಣುತ್ತೇವೆ. ಇಷ್ಟೆಲ್ಲ ವಿಮರ್ಶೆ ಲೇಖನಗಳನ್ನು ನೋಡಿದಾಗ ವಿಭಿನ್ನ ಅಭಿಪ್ರಾಯಗಳು ಕಂಡುಬಂದಿವೆ. ಅವರ ಮೊದಲ ಕಾದಂಬರಿ ಗಂಗವ್ವ ಗಂಗಾಮಾಯಿ ಸಂಪ್ರದಾಯ ಶರಣ ಕಾದಂಬರಿಯೆಂದರೆ ಇನ್ನೊಬ್ಬರೋ ನೀತಿಪರ ಕಾದಂಬರಿವೆಂದು ಕರೆಯುವುದರ ಮೂಲಕ ಕಾದಂಬರಿಯ ಮಹತ್ವವನ್ನು ಎತ್ತಿಹಿಡಿದಿರುವರು. ಹಾಗೆಯೇ ಪಾತ್ರರಚನೆ ವಿಶಿಷ್ಟರೀತಿಯೂ

ವಿನೂತ ಶೈಲಿಯಿಂದ ಕೂಡಿದ್ದು, ಪ್ರತಿಯೊಂದು ಪಾತ್ರವು ಜೀವಂತ ಪಾತ್ರ ಚಿತ್ರಗಳ ಕಟ್ಟಿಕೊಟ್ಟಂತೆ ಭಾಸವಾಗುತ್ತದೆ.

**೨.೨. ಶ್ರೀನಿವಾಸ ವೈದ್ಯರ ಜೀವನ ಮತ್ತು ಸಾಹಿತ್ಯ ಸ್ಥೂಲನೋಟ**

ನಮ್ಮ ದೇಶದ ಚರಿತ್ರೆಯ ಸ್ವಾತಂತ್ರ್ಯ ಹೋರಾಟದ ಕತೆ, ನೋವು, ತಳಮಳ, ಸ್ಫೂರ್ತಿ, ಪ್ರೇರಣೆಗಳನ್ನು ನೂರು ವರ್ಷಗಳ ಕಾಲದ ಹಿಂದಕ್ಕೆ ಕರೆದುಕೊಂಡು ಹೋಗಿ ಸಹೃದಯಗಳಿಗೆ ಸಾಹಿತ್ಯದ ವಿಭಿನ್ನ ರುಚಿವೈವಿಧ್ಯತೆಯನ್ನು ಉಣಬಡಿಸಿದ ಇತ್ತೀಚಿನ ಲೇಖಕರಾದ ಶ್ರೀನಿವಾಸ ವೈದ್ಯರು ತಮ್ಮ ಕೃತಿಯಾದ 'ಹಳ್ಳ ಬಂತು ಹಳ್ಳ'ವನ್ನು ಕನ್ನಡಕ್ಕೆ ಕೊಡ ಮಾಡಿದ್ದಾರೆ. ಇವರು ಬರೆದ ಒಂದೇ ಒಂದು ಕಾದಂಬರಿಯಾದರೂ ಅದು ಸತ್ವಯುತವಾಗಿ ಎಲ್ಲರ ಗಮನ ಸೆಳೆಯುವಂತೆ ಮಾಡಿದೆ. ಕಥೆ, ಪ್ರಬಂಧ, ಕಾದಂಬರಿಯ ಮೂಲಕ ಜನರಿಗೆ ಚಿರಪರಿಚಿತರಾಗಿದ್ದಾರೆ. 'ಹಳ್ಳ ಬಂತು ಹಳ್ಳ'ಕಾದಂಬರಿಗೆ ರಾಜ್ಯ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಆಯ್ಕೆಯಾಗಿ ಮಹತ್ವದ ಲೇಖಕರ ಸಾಲಿಗೆ ವೈದ್ಯರು ಸೇರಿದ್ದಾರೆ.

ಮೂಲತಃ ಧಾರವಾಡದವರಾದ ವೈದ್ಯ ಅವರು ಓದಿದ್ದು ಎಲ್ಲ ಧಾರವಾಡದ ಸಾಹಿತ್ಯ ಪರಿಸರದಲ್ಲಿ ಎಂ.ಎ. ಪದವಿಯ ಬಳಿಕ ಉದ್ಯೋಗದ ನಿಮಿತ್ತವಾಗಿ ಮುಂಬೈಯಲ್ಲಿ ವಾಸವಾದರು. ಅವರು ಕೆನರಾ ಬ್ಯಾಂಕ್‌ನ ಸೇವೆ ಸಲ್ಲಿಸಿ ಅಲ್ಲಲ್ಲಿ ಪ್ರಧಾನ ವ್ಯವಸ್ಥಾಪಕರಾಗಿ ನಿವೃತ್ತರಾದರು. ನಂತರ ಇವರು ೧೯೯೬ರಿಂದ ಬೆಂಗಳೂರಿನ ಜಯನಗರದಲ್ಲಿ ವಾಸವಾಗಿದ್ದಾರೆ. ಹಾಸ್ಯ ಪ್ರಧಾನವಾಗಿದ್ದ 'ಅಪರಂಜಿ' ಪತ್ರಿಕೆಯಲ್ಲಿ ಹಾಸ್ಯ ಲೇಖನಗಳನ್ನು ಬರೆಯುತ್ತಾ ಸಾಹಿತ್ಯ ಕೃಷಿ ಪ್ರಾರಂಭಿಸಿದರು. ಹಾಸ್ಯಕ್ಕಿಂತ ವಿಸ್ತಾರವಾದ ಗಂಭೀರ ಸಾಹಿತ್ಯದ ಕಡೆಗೆ, ವಾಲಿದರು. ಪ್ರಬಂಧ ಸಣ್ಣಕಥೆ, ಕಾದಂಬರಿ ರಚಿಸುತ್ತಾ ಎಲ್ಲರ ಗಮನ ಸೆಳೆದರು. ಶ್ರೀನಿವಾಸ ವೈದ್ಯರು ಪ್ರಜಾವಾಣಿ ಪತ್ರಿಕೆಯೊಂದಿಗೆ ಮಾತನಾಡುತಾ 'ವೃತ್ತಿ ಹಾಗೂ ಪ್ರವೃತ್ತಿಯ ನಡುವೆ ಒದ್ದಾಡಿದ ನಾನು ಕೊನೆಗೂ ಪ್ರವೃತ್ತಿಯನ್ನು ಇಂದಿಗೂ ಕಾಪಾಡಿಕೊಂಡು ಬಂದಿದ್ದು ಸಮಾಧಾನ ನೀಡುತ್ತಿದೆ'. ಎನ್ನುವ ವೈದ್ಯರು ಈ ವರೆಗೆ ಒಟ್ಟು ಐದು ಪುಸ್ತಕವನ್ನು ಪ್ರಕಟಿಸಿದ್ದಾರೆ. ತಲೆಗೊಂದು ಥರಾ ಥರಾ ಮತ್ತು ಮನಸುಬರಾಯನ ಮನಸ್ಸು (ಹರಟೆ ಮತ್ತು ಸಣ್ಣಕಥೆಗಳ ಸಂಕಲನ) ವೈದ್ಯರು ಅಪರಂಜಿ ಹಾಸ್ಯ ಪತ್ರಿಕೆಗೆ 'ಸೀನು' ಎಂಬ ಕಾವ್ಯನಾಮದಿಂದ ಹಾಸ್ಯ ಲೇಖನಗಳನ್ನು ಬರೆಯುತ್ತಿರುತ್ತಾರೆ. ಅಗ್ನಿಕಾರ್ಯ, ಹುಳಿಯಾರು ಇವರ ಕಥೆಗಳಾಗಿವೆ.

ಧಾರವಾಡ ಜಿಲ್ಲೆಯವರಾದ ಶ್ರೀನಿವಾಸ ವೈದ್ಯರು ತಮ್ಮ ೬೦ನೇ ವಯಸ್ಸಿನಲ್ಲಿ ಸಾಹಿತ್ಯ ಕೃಷಿಗೆ ಇಳಿದರು. ಹಳ್ಳ ಬಂತು ಹಳ್ಳ ಅವರ ಚೊಚ್ಚಲ ಕಾದಂಬರಿಯು ರಾಜ್ಯ ಮತ್ತು ದೇಶ ಗುರುತಿಸುವಂತಾಯಿತು. ನರಗುಂದ ನವಲಗುಂದ ತಾಲೂಕುಗಳ ಹಳೆಯ ತಲೆಮಾರಿನ ಬ್ರಾಹ್ಮಣ ಕುಟುಂಬದ ನೋವು-ನಲಿವು ತಲ್ಲಣಗಳನ್ನೊಳಗೊಂಡ ಈ ಕಾದಂಬರಿಯನ್ನು ಧಾರವಾಡದ ಮನೋಹರ ಗ್ರಂಥಮಾಲಾ ಪ್ರಕಟಿಸಿದೆ.

ಆಗಸ್ಟ್ ೨೦೦೪ರಲ್ಲಿ ಈ ಕಾದಂಬರಿಯು ಮೊದಲು 'ಹರಿಯುವ ನೀರು' ಎಂಬ ಹೆಸನ್ನಿಟ್ಟುಕೊಂಡು ಪ್ರಾರಂಭವಾದ ಕಾದಂಬರಿ ಮುಕ್ತಾಯ ಹಂತದಲ್ಲಿ 'ಹಳ್ಳ ಬಂತು ಹಳ್ಳ' ಎಂಬ ಹೆಸರನ್ನು ಹೊತ್ತುಕೊಂಡು ಪ್ರಕಟವಾಗಿದೆ. ಶ್ರೀನಿವಾಸ ವೈದ್ಯರ ದಶಕಗಳ ಚಿಂತನೆಯ ಫಲ ಹಾಗೂ ಎರಡು, ಮೂರು ವರ್ಷಗಳ ಬರವಣಿಗೆಯ ಪ್ರತಿಫಲ, ಇದರಿಂದಾಗಿ ಅವರಿಗೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ೨೦೦೪ನೇ ಸಾಲಿನ ಕಾದಂಬರಿ ಪ್ರಕಾರದಲ್ಲಿ ಪ್ರಥಮ ಪ್ರಶಸ್ತಿಗಳಿಸಿತು. ಅದೇ ರಿತೀಯಾಗಿ ಮುಂದೆ ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಅತ್ತುತ್ತಮ ಕನ್ನಡ ಕೃತಿಯೆಂದು ಬಹುಮಾನಿತ ಕಾದಂಬರಿಯಾಯಿತು.

'ಹಳ್ಳ ಬಂತು ಹಳ್ಳ' ಕಾದಂಬರಿಯ ಕುರಿತು ಅನೇಕ ಹಿರಿಯ ಲೇಖಕರು ಇದು ಒಂದು ವಾಸ್ತವ ಕಾದಂಬರಿಯಂತಲೇ ಗುರುತಿಸಿರುವರು. ಡಾ.ಜಿ.ಎಸ್.ಆಮೂರ, ಡಾ.ಗಿರಡ್ಡಿಗೋವಿಂದರಾಜು, ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಮುಂತಾದವರು ಕಾದಂಬರಿಯ ಶ್ರೇಷ್ಠತೆ ಕುರಿತು ಹೇಳಿರುವರು ಅದೇ ರೀತಿ ಈ ಕಾದಂಬರಿಯ ಪ್ರೋತ್ಸಾಹಕ್ಕೆ ಕಾರಣರಾದ ಕುರ್ತುಕೋಟಿಯವರನ್ನು ವೈದ್ಯರು ತುಂಬು ಹೃದಯದಿಂದ ನೆನೆಯುತ್ತಾರೆ. ಕಾದಂಬರಿ ಎರಡನೇ ಆವೃತ್ತಿಗೆ ವಿಚಾರ ಪೂರ್ಣ ಮುನ್ನುಡಿಯನ್ನು ಶ್ರೀ.ಕೆ.ವಿ.ಅಕ್ಷರ ಅವರ ನೀಡುತ್ತಾ ಈ ಕೃತಿಯ ಬಗ್ಗೆ ಅಲ್ಲೆ ಕೆಲವು ಹೇಳಿಕೆಗಳು ನೋಡಬಹುದೇ ಹೊರತು ಗಟ್ಟಿಯಾದ ಪ್ರತಿಕ್ರಿಯ ಸಾಹಿತ್ಯ ಲೋಕದಲ್ಲಿ ಬಂದಿಲ್ಲವೆನ್ನಬಹುದು ಎಂದು ನಿರಾಶೆಯನ್ನು ವ್ಯಕ್ತಪಡಿಸಿರುವರು.

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಭಾಜನರಾಗಿರುವ ಶ್ರೀನಿವಾಸ ವೈದ್ಯ ಅವರನ್ನು ಸಾಹಿತಿ ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಅಭಿನಂದಿಸಿದ್ದಾರೆ. ನರಗುಂದ ನವಲಗುಂದ ಕಡೆಯ ಸೊಗಸಾದ ಕನ್ನಡದಲ್ಲಿ ಕಾದಂಬರಿಯನ್ನು ಬರೆದಿರುವ ವೈದ್ಯ ಅವರಿಂದ ಇನ್ನಷ್ಟು ಕೃತಿಗಳು ಹೊರಬರಲಿ ಎಂದು ಹಾರೈಸಿದ್ದಾರೆ.

ಮುನ್ನುಡಿಯಲ್ಲಿ 'ಕೆ.ವಿ.ಅಕ್ಷರ' ಅವರು ಸಮಕಾಲೀನ ಸಮಾಜಿಕ, ರಾಜಕೀಯ ದೃಷ್ಟಿ ಕೋನಗಳಿಗೆ ತುಂಬ ಭಿನ್ನರೀತಿಯಲ್ಲಿ ಚಿಕಿತ್ಸೆಗೆ ತೊಡಗುವ ಇಂಥ ವೈದ್ಯಗುಣ ಇರುವ ಕಾರಣದಿಂದಲೇ ನಾನು ಶ್ರೀನಿವಾಸ ವೈದ್ಯರ ಸಾಹಿತ್ಯದ ಬಗ್ಗೆ ತುಂಬಾ ಉತ್ಸಾಹಕನಾಗಿದ್ದೇನೆ ಎಂದು ಅಭಿಪ್ರಾಯ ಪಡುವರು.

ಡಾ.ಜಿ.ಎಸ್.ಆಮೂರ ಬಗ್ಗೆ ಅವರ ಮಾತಿನಲ್ಲಿ ಗ್ರಹಿಸುವುದಾದರೆ 'ಒಂದು ವಾಸ್ತವ ಮಾರ್ಗದ ಕಾದಂಬರಿ ಇವರ ಹಿಂದೆ ಸಾಕಷ್ಟು ಚಿಂತನನೆಗಳಿವೆ. ಅನುಭವಗಳ ನೆನಪುಗಳಿವೆ. ಇಲ್ಲಿನ ಪಾತ್ರ ವೈವಿಧ್ಯ ಕಥನಕಲೆ ಬದುಕಿನ ಅರ್ಥವಂತಿಕೆ ಶೈಲಿಯ ಹೊಸತನ ಇವುಗಳಿಂದಾಗಿ ಈ ಕಾದಂಬರಿಯ ಅನುಭವ ನನಗೆ ತುಂಬಾ ಸುಖ ಕೊಟ್ಟಿದೆ'. ಎಂದು ನುಡಿದರು.

ನಿಮ್ಮ 'ಹಳ್ಳ ಬಂತು ಹಳ್ಳ' ಓದಿದೆ. ನನಗೆ ಬಹಳ ಹಿಡಿಸಿತು. ಇತ್ತೀಚೆಗೆ ಬಂದ ಮಹತ್ವದ ಕಾದಂಬರಿಗಳಲ್ಲಿ ಇದೊಂದು ಎಂಬುದರಲ್ಲಿ ಅನುಮಾನವೇ ಇಲ್ಲ. ಇಲ್ಲಿಯ ಗಟ್ಟಿ ಜೀವನಾನುಭವ ಬೆರಗುಗೊಳಿಸುವಂತಿದೆ. ಉತ್ತರ ಕರ್ನಾಟಕದ ಬ್ರಾಹ್ಮಣ ಉಪಭಾಷೆಯ ಬಳಕೆಯೂ ಅಷ್ಟೇ

ಪರಿಣಾಮಕಾರಿಯಾಗಿದೆ. ನಾರಾಯಣನ ಪಾತ್ರ ವಿಶೇಷ ಎದ್ದು ಕಾಣುವಂತಿದೆ ವಾಸುದೇವಾಚಾರ್ಯರು, ತುಳಸಕ್ಕ, ಅಂಬಕ್ಕ, ರುಕುಮಾ ಎಲ್ಲರೂ ಸದಾ ನೆನಪಿನಲ್ಲಿ ಉಳಿಯುವಂತವರು ಎಂದು ಡಾ.ಗಿರಡ್ಡಿ ಗೋವಿಂದರಾಜರ ಅಭಿಮತವಾಗಿದೆ.

ಪ್ರೊ.ಮಾಲತಿ ಪಟ್ಟಣ್ಣಶೆಟ್ಟಿಯವರು ೧೮೫೭ರ ಪ್ರಥಮ ಸ್ವತಂತ್ರ ಸಮರದಿಂದ ೧೯೪೭ರ ವರೆಗಿನ ಸುಮಾರು ಒಂದು ನೂರು ವರ್ಷಗಳ ಕಾಲಾವಧಿಯಲ್ಲಿ ಒಂದು ಮನೆತನದ ಮೂರು ತಲೆಮಾರಿನ ಕತೆಯನ್ನು ಬರೆಯುವ ಮೂಲಕ ಒಂದು ವಿಸ್ತೃತವಾದ ಕಥಾಹಂದರವನ್ನು ರಚಿಸಿದ್ದಾರೆ. ಒಂದು ಸಮುದಾಯದ ಜನರ ಸಂಪ್ರದಾಯಿಕತೆ, ಜೀವನ ಪದ್ಧತಿ, ರೀತಿ ನೀತಿ ಒಟ್ಟಾರೆ ಈ ಭಾಗದ ಒಂದು ವಿಶಿಷ್ಟ ಸಂಸ್ಕೃತಿಯನ್ನು ಸಂರಕ್ಷಿಸಿ ದಾಖಲು ಮಾಡಬೇಕಾದದ್ದರ ಅವಶ್ಯಕತೆಯೂ ಸಹ ಈ ಕಾದಂಬರಿಯ ಇನ್ನೊಂದು ಉದ್ದೇಶವಾಗಿರಬಹುದು. ಎಂದು ಕಾದಂಬರಿಯ ಬಗ್ಗೆ ಮೆಚ್ಚುಗೆಯನ್ನು ಸೂಚಿಸಿರುವರು.

ಇನ್ನೊಬ್ಬ ಹಿರಿಯ ಲೇಖಕರಾದ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ತಮ್ಮದೇಯಾದ ನಿಲುವನ್ನು ಈ ಕಾದಂಬರಿ ಬಗ್ಗೆ ತಳೆದಿದ್ದಾರೆ. ಓದು ಒಂದು ತ್ರಾಸದಾಯಕ ಅನುಭವವೆನ್ನೇ ಸಾರುವ ಇತ್ತೀಚಿನ ದಿನಗಳಲ್ಲಿ ಶ್ರೀನಿವಾಸ ವೈದ್ಯರ ಕಾದಂಬರಿ 'ಹಳ್ಳ ಬಂತು ಹಳ್ಳ' ಭಿನ್ನವಾಗಿದ್ದ ಉಲ್ಲಾಸಕರ ಓದಿನ ಅನುಭವ ನೀಡುತ್ತದೆ. ವೈದ್ಯರು ಸೊಗಸಾದ ಕಥೆ ಹೇಳುತ್ತಾರೆ. ಅವರ ಕಥನ ಶಕ್ತಿ ವಾಸ್ತವವಾದಿ ಪರಂಪರೆಯ ಉತ್ತಮ ಕೃತಿಗಳನ್ನು ನೆನಪಿಗೆ ತರುತ್ತದೆ.

ಹಳ್ಳ ಬಂತು ಹಳ್ಳ ಕಮಲಾಚಾರ್ಯರ ಕುಟುಂಬದ ಕತೆ ಹೇಳಿದರೂ, ಈ ಕುಟುಂಬದ ಕತೆಯ ಜೊತೆ ದೇಶದ ಕತೆಯೂ ಸೇರಿ ಕೊಳ್ಳುತ್ತದೆ. ಇದು ಸಾಮಾಜಿಕ ಪಲ್ಲಟದ ಸಂಕಲವೂ ಆಗುವುದರ ಮೂಲಕ ಕಾದಂಬರಿ ಬಹುಮುಖ ಆಯಮ ಪಡೆದುಕೊಳ್ಳುತ್ತದೆ. ಸಂಪ್ರದಾಯದ ಪ್ರಧಾನ ದಾಟಿಯು ಬದಕು ದುರ್ಬಲಗೊಂಡು ನಂತರದ ಬದುಕಿನ ಸಾಧ್ಯತೆಗಳನ್ನು ಅನ್ವೇಷಿಸುವ ಕಾದಂಬರಿ, ಸಾರ್ಥಕ ಬದುಕಿನ ಧಾರಾಳ ಶಕ್ತಿಯನ್ನು ಕುರಿತಂತೆ ನಮ್ಮನ್ನು ಗಂಭೀರ ಚಿಂತನೆಗೆ ಹಚ್ಚುತ್ತದೆ.

ಈ ಕಾದಂಬರಿಗೆ ಮುನ್ನುಡಿಯನ್ನು ಬರೆದ ಕೆ.ವಿ.ಅಕ್ಷರ ಅವರು ಈ ಕಾದಂಬರಿ ಕುರಿತಾಗಿ ಇನ್ನೊಂದು ಸಂಪ್ರದಾಯಿಕ ಗ್ರಹಿಕೆಗಳಿಗೊಂದು ಹೊಸ ದಿಕ್ಸೂಚಿ ಎಂದಿದ್ದಾರೆ. ಹಳ್ಳ ಬಂತು ಹಳ್ಳ ಕಾದಂಬರಿಯಲ್ಲಿ ಸಾದ್ಯಂತವಾಗಿ ಬರುವ ಒಂದು ಪ್ರತಿಮೆ ನದಿಯದು. ಇಡಿ ಕಾದಂಬರಿಯು ವಿಭಜಿತವಾಗಿರುವುದು ನದಿಯ ವಿವಿಧ ಅವಸ್ಥೆಗಳನ್ನು ಸೂಚಿಸುವ ನುಡಿ ಗಟ್ಟುಗಳನ್ನೊಳಗೊಂಡ ಅಧ್ಯಾಯ ಶೀರ್ಷಿಕೆಗಳ ಮೂಲಕ ಇದು 'ನದಿಮೂಲ'ದಿಂದ ಆರಂಭವಾಗಿ ನಾನಾ ರೀತಿಯ ವ್ಯಕ್ತ ಅವ್ಯಕ್ತ ಪ್ರವಾಹಗಳಲ್ಲಿ ಹರಿದು 'ಸಾಗರಮ್ ಪ್ರತಿ'ಯಲ್ಲಿ ಪರ್ಯಾವ್ಯಸನಗೊಳ್ಳುತ್ತದೆ.

ಧಾರವಾಡ ಜಿಲ್ಲೆಯವರಾದ ವೈದ್ಯ, ತಮ್ಮ ೬೦ನೇ ವಯಸ್ಸಿನಲ್ಲಿ ಸಾಹಿತ್ಯ ಕೃಷಿಗೆ ಇಳಿದಿರುವುದು ನಿಜಕ್ಕೂ ಅವರಲ್ಲಿರುವ ಸಾಹಿತ್ಯದ ಬಗ್ಗೆ ಇರುವ ಆಸಕ್ತಿ, ಇಳಿವಯಸ್ಸಿನಲ್ಲಿ ಇವರಲ್ಲಿರುವ ಉತ್ಸಾಹ, ಕನ್ನಡದ ಬಗ್ಗೆ ಇರುವ ಅಭಿಮಾನವು ಇವರ ಮೊದಲ ಕಾದಂಬರಿಗೆ ಪ್ರಶಸ್ತಿ ಪಡೆದುಕೊಳ್ಳುವಂತೆ ಮಾಡಿವೆ. ಕಥೆ, ಕಾದಂಬರಿ, ಪ್ರಬಂಧ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಕೊಟ್ಟಿರುವುದು ಅಲ್ಪವಾದರೂ ಅದರಲ್ಲಿರುವ ವಿಷಯ ನೂರು ವರ್ಷದ ಭಾರತದ ಇತಿಹಾಸವನ್ನು ಸಹೃದಯರಿಗೆ ಪರಿಚಯಿಸಿರುವರು ಮತ್ತು ಒಂದು ಬ್ರಾಹ್ಮಣ ಸಮುದಾಯದ ಮೂರು ತಲೆಮಾರಿನ ಕುಟುಂಬದ ಕಥೆಯನ್ನು ಹೇಳಿದ ಕಥಾ ಹಂದರ 'ಹಳ್ಳ ಬಂತು ಹಳ್ಳ' ಕಾದಂಬರಿಯಾಗಿದೆ.

**೨.೩. ಇದುವರೆಗಿನ ಅಧ್ಯಯನ ಸಮೀಕ್ಷೆ**

ಯಾವುದೇ ಒಂದು ಕಾದಂಬರಿ ಶ್ರೇಷ್ಠತೆಯನ್ನು ಪಡೆದುಕೊಳ್ಳಬೇಕಾದರೆ ಕೇವಲ ಭಾಷೆ ಶೈಲಿ ಇದ್ದರೆ ಸಾಕಾಗದು, ಲೇಖಕನು ತಾನು ಕಂಡ ವಾಸ್ತವ ಜಗತ್ತಿನ ಕಲ್ಪನೆಯ ಮೂಲಕ ಚಿತ್ರಿಸುವುದರ ಜೊತೆಗೆ ಒಂದು ನೈತಿಕ ಮೌಲ್ಯಗಳನ್ನು ಕಟ್ಟಿಕೊಡುವಂತದ್ದು. ಸುಂದರ ಸಮಾಜವನ್ನು ನಿರ್ಮಾಣ ಮಾಡುವಲ್ಲಿ ಅವನ ವೈಚಾರಿಕ ಮನೋಭಾವ ಅತಿ ಮುಖ್ಯವಾಗುತ್ತದೆ. ಅಂದಾಗ ಮಾತ್ರ ಆ ಕಾದಂಬರಿ ಒಂದು ಅತ್ಯುತ್ತಮ ಕಾದಂಬರಿಯಾಗಿ ಎಲ್ಲರ ಗಮನ ಸೆಳೆಯುತ್ತದೆ. ಹಾಗೆಯೇ ಅನೇಕ ವಿಮರ್ಶಕರು, ಲೇಖಕರಿಂದ ಕಾದಂಬರಿ ಬಗ್ಗೆ ಸಾಕಷ್ಟು ಬರವಣಿಗೆಗಳೂ ಹೊರ ಹೊಮ್ಮುತ್ತವೆ. ಅದೇ ರೀತಿಯಾಗಿ ಪುಣೇಕರ ಕಾದಂಬರಿಯಾದ ಗಂಗವ್ವ ಗಂಗಾಮಾಯಿ ಕುರಿತು ಅನೇಕ ಬಿಡಿ ಲೇಖನಗಳು ವಿಮರ್ಶೆಗಳು ಬಂದಿರುವುದು ಅವುಗಳ ಅಧ್ಯಯನ ಚರ್ಚೆ, ವಿಮರ್ಶೆ, ಒಳನೋಟಗಳನ್ನೊಳಗೊಂಡ ವಿವರಗಳು ಈ ರೀತಿಯಾಗಿವೆ.

ಜಿ.ಎಂ.ಹೆಗಡೆ ತಮ್ಮ 'ಸಾಹಿತ್ಯ ಮತ್ತು ಸಹೃದಯತೆ'ಎಂಬ ಸಂಪಾದನಾ ಕೃತಿಯಲಿ 'ಶಂಕರ ಮೊಕಾಶಿ ಪುಣೇಕರ ಅವರ ಗಂಗವ್ವ ಗಂಗಾಮಾಯಿ' ಲೇಖನದಲ್ಲಿ, ಹಾ.ಮಾ.ನಾಯಕ ಸಂಪಾದನಾ ಕೃತಿಯಾದ 'ಸ್ವಸ್ತಿಯಲ್ಲಿ ದೇಶಪಾಂಡೆ ಸುಬ್ಬುರಾಯ ಶಂಕರ ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಎಂಬ ಬಿಡಿ ಲೇಖನ ಪ್ರಸ್ತುತ ಪಡಿಸಿರುವರು. 'ಸಾಹಿತ್ಯ ವಿಮರ್ಶೆ ೧೯೯೮'ರಲ್ಲಿ ಹಾ.ಮಾ.ನಾಯಕರು 'ಅನನ್ಯ ಲೇಖಕ ಮೊಕಾಶಿ ಪುಣೇಕರ' ಎಂಬ ಶೀರ್ಷಿಕೆಯಲ್ಲಿ, ಜಿ.ಎಸ್.ಅಮೂರವರು ತಮ್ಮ ಕೃತಿಯಾದ 'ಕನ್ನಡ ಕಥನ ಸಾಹಿತ್ಯ: ಕಾದಂಬರಿ'ಯಲ್ಲಿ, 'ಗಂಗವ್ವ ಗಂಗಾಮಾಯಿ ದ್ವಿಮುಖ ವಸ್ತು' ಎಂಬ ಲೇಖನವನ್ನು, 'ಸಾಹಿತ್ಯ ವಿಮರ್ಶೆ-೧೯೯೮ರ'ಲ್ಲಿ ನಿ.ಮುರಾರಿ ಬಲ್ಲಾಳರು 'ಶಂಕರ ಮೊಕಾಶಿ ಪುಣೇಕರ ನವ್ಯರಲ್ಲೊಂದು ಭಿನ್ನಧ್ವನಿ' ಕುರಿತ ಲೇಖನದಲ್ಲಿ, ಭಾರತೀಯ ಸಾಹಿತ್ಯ ಸಮೀಕ್ಷೆಯಲ್ಲಿ 'ನವ್ಯದತ್ತ' ಎಂಬ ಲೇಖನದಲ್ಲಿ, ಕನ್ನಡ ವಿಷಯ ವಿಶ್ವಕೋಶ ಸಂಪುಟ-೨ರಲ್ಲಿ ಶಂಕರ ಮೊಕಾಶಿ ಪುಣೇಖರ ಎಂಬ ಲೇಖನ ಅದೇರೀತಿಯಾಗಿ

ಕನ್ನಡ ವಿಷಯ ವಿಶ್ವಕೋಶ ಸಂಪುಟ-೧ರಲ್ಲಿ ಪುಣೇಕರ ಶಂಕರ ಮೊಕಾಶಿ, ಕನ್ನಡ ಕವಿ ಪರಿಚಯ ಎಂಬ ಪುಸ್ತಕದಲ್ಲಿ 'ಶಂಕರ ಮೊಕಾಶಿ ಪುಣೇಖರ' ಎಂಬ ಬರಹಗಳನ್ನು ಕುರಿತು ಗಮನಿಸಲಾಗಿದೆ.

ಸಿ.ಆರ್ ಯರವಿನತೆಲಿಮಠರು ತಮ್ಮ ಕೃತಿಯಾದ 'ಪಾಶ್ಚಾತ್ಯ ಸಾಹಿತ್ಯವಾದಗಳ ಸಾಹಿತ್ಯ ಸಂದರ್ಭ'ದಲ್ಲಿನ 'ವಾಸ್ತವಾದ' ಎಂಬ ಲೇಖನ, ಜಿ.ಬಿ. ಜೋಶಿ ಮತ್ತು ಕುರ್ತುಕೋಟಿಯವರ ಸಂಪಾದನ ಕೃತಿಯಾದ 'ಪುಟ ಬಂಗಾರ'ದಲ್ಲಿ 'ಗಂಗವ್ವಗಂಗಾಮಾಯಿ' ಎಂಬ ಲೇಖನ, ಅವದೇಶ್ವರಿಯನ್ನು ರಚಿಸಿದ ಪುಣೇಕರ ಕಾದಂಬರಿಯಲ್ಲಿನ ಲೇಖಕನ ಪರಿಚಯವಾಗಿ ಮೂಡಿದ 'ಮೊಕಾಶಿಪುಣೇಕರ' ಎಂಬ ಲೇಖನ, ರಾಘವೇಂದ್ರರ 'ಶತಮಾನದ ಸಾಹಿತ್ಯ ವಿಮರ್ಶೆ'ಯಲ್ಲಿ ಹಾ.ಮಾ ನಾಯಕರ 'ಕಾದಂಬರಿಯಲ್ಲಿನ ಆಧುನಿಕ ಮತ್ತು ನೂನ್ಯತೆ' ಎಂಬ ಲೇಖನ, ಗಿರಡ್ಡಿ ಗೋವಿಂದರಾಜರ ಕಾದಂಬರಿ 'ವಸ್ತು ಮತ್ತು ತಂತ್ರ' ಎಂಬ ಕೃತಿಯಲ್ಲಿ, 'ಕನ್ನಡ ಕಾದಂಬರಿಯಲ್ಲಿನ ನವ್ಯತೆ' ಎಂದು ಕುರಿತ ಲೇಖನ, ರಹಮತ್ ತರಿಕೇರಿ ಅವರ ಸಂಪಾದನ ಕೃತಿಯಾದ 'ಕನ್ನಡ ಅಧ್ಯಯನ'ದಲ್ಲಿ ಡಾ. ಶಂಕರ ಮೊಕಾಶಿ ಪುಣೇಕರ್ ಅವರ ಜತೆ' ಎಂಬ ಲೇಖನವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಶಂಕರಮೊಕಾಶಿ ಪುಣೇಕರ ಕಾದಂಬರಿಯ 'ಸಂಪ್ರದಾಯ ಮತ್ತು ಆಧುನಿಕತೆ ನಡುವಿನ ಸಂಘರ್ಷ' ಎಂಬ ಎಂ.ಫಿಲ್ ಪ್ರಬಂಧ ಸಾರವನ್ನು ಡಾ.ವೆಂಕಟೇಶ ಇಂದ್ವಾಡಿ ಮಾರ್ಗದರ್ಶಕರ ಮೂಲಕ ಸಂಶೋಧಕ ಎಚ್.ಕೆ.ಅಶೋಕ ಅವರ ಪ್ರಬಂಧವನ್ನು ಗಮನಿಸಲಾಗಿದೆ. ಇನ್ನೂ ಪುಸ್ತಕದಲ್ಲಿ ನಮೂದಿತವಾದ ವಿಮರ್ಶೆಗಳು ಅಲ್ಲಲ್ಲಿ ಬಂದಿರುವ ಬಿಡಿ ಲೇಖನಗಳು ಗಂಗವ್ವಗಂಗಾಮಾಯಿ ಕಾದಂಬರಿ ಕುರಿತು ವಿವೇಚಿಸುತ್ತವೆ.

ಅದೇ ರೀತಿಯಾಗಿ ಇತ್ತೀಚಿನ ಕಾದಂಬರಿಯಾದ 'ಹಳ್ಳ ಬಂತುಹಳ್ಳ' ಕಾದಂಬರಿಯನ್ನು ರಚಿಸುವ ಶ್ರೀನಿವಾಸ ವೈದ್ಯರು ಶ್ರೇಷ್ಠ ಕಾದಂಬರಿಕಾರರಾಗಿರುವರು. ಇವರ ಚೊಚ್ಚಲ ಕಾದಂಬರಿ ಕುರಿತ ಅನೇಕ ಚರ್ಚೆಗಳು ನಡೆದಿವೆ ಈ ಕೃತಿ ಕುರಿತಾಗಿ ವಿಮರ್ಶೆ, ಚರ್ಚೆ, ಬಿಡಿ ಲೇಖನ, ಒಳನೋಟಗಳನ್ನೊಳಗೊಂಡ ವಿವರಗಳು ಈ ರೀತಿಯಾಗಿವೆ.

'ಹೊಸತು' ಎಂಬ ವಾರ ಪತ್ರಿಕೆ (ಮಾರ್ಚ ೯, ೨೦೦೯) ಯಲ್ಲಿ ಮಾಲತಿ ಪಟ್ಟಣಶೆಟ್ಟಿಯವರು 'ಹಳ್ಳ ಬಂತು ಹಳ್ಳ - ಕೆಲವು ಟಿಪ್ಪಣಿಗಳು' ಎಂಬ ಲೇಖನ, ಪ್ರಜಾವಾಣಿ ಪತ್ರಿಕೆಯಲ್ಲಿ ಶ್ರೀನಿವಾಸ ವೈದ್ಯರಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಎಂಬ ಕುರಿತಾದ ಲೇಖನ, ಮತ್ತು ಪ್ರಜಾವಾಣಿ ಪತ್ರಿಕೆಯಲ್ಲಿ 'ಮೊದಲ ಕಾದಂಬರಿಗೆ ಪ್ರಶಸ್ತಿ' ಎಂಬ ಲೇಖನ ಇಲ್ಲಿ ಗಮನಾರ್ಹವೆನಿಸಿದೆ. ಇನ್ನೂ ಕಾದಂಬರಿ ಕುರಿತ ಪುಸ್ತಕದಲ್ಲಿ ನಮೂದಿತವಾದ ವಿಮರ್ಶೆಗಳು ಅಲ್ಲಲ್ಲಿ ಬಂದಿರುವ ಬಿಡಿಲೇಖನಗಳ ಹಳ್ಳ ಬಂತ ಹಳ್ಳ ಕಾದಂಬರಿಯನ್ನು ಕುರಿತು ವಿವೇಚಿಸುತ್ತವೆ.

**ಅಡಿಟಿಪ್ಪಣಿಗಳು**

೦೧. ಜಿ.ಎಂ.ಹೆಗಡೆ, (ಸಂ) ಸಾಹಿತ್ಯ ವಿಮರ್ಶೆ, ೧೯೯೮, ಪುಟ.೨೦೨-೨೦೩

೦೨. ಜಿ.ಎಂ.ಹೆಗಡೆ, (ಸಂ) ಸಾಹಿತ್ಯ ವಿಮರ್ಶೆ, ೧೯೯೮, ಪುಟ.೨೦೮-೨೦೯

೦೩. ಮುರಾರಿ, ನಿ.ಬಲ್ಲಾಳ, ಸಾಹಿತ್ಯ ಸಮ್ಮುಖಿ, ಪುಟ.೧೦೬-೧೧೩

೦೪. ಕನ್ನಡ ವಿಶಯ ವಿಶ್ವಕೋಶ ಸಂಪುಟ-೨, ಪುಟ. ೨೫೮-೨೮೧

೦೫. ಕುರ್ತಕೋಟಿ ಯುಗಧರ್ಮ ಸಾಹಿತ್ಯ ದರ್ಶನ, ಪುಟ. ೨೬೦-೨೬೧

೦೬. ಜಿ.ಎಂ.ಹೆಗಡೆ, 'ಸಾಹಿತ್ಯ ಮತ್ತು ಸಹೃದಯತೆ' ಪುಟ.೨೭೭-೨೭೮

೦೭. ಡಿ.ನಾಗಣ್ಣ ಸಾಹಿತ್ಯ ನೋಟ, ಪುಟ.೧೫೮-೧೬೦

೦೮. ಕನ್ನಡ ವಿಷಯ ವಿಶ್ವಕೋಶ ಸಂಪುಟ-೨, ಮೈಸೂರು ವಿಶ್ವವಿದ್ಯಾಲಯ, ಪುಟ.೧೦೧೫

೦೯. ಭಾರತೀಯ ಸಾಹಿತ್ಯ ಸಮೀಕ್ಷೆ, ಪುಟ.೬೫೦-೬೫೧

೧೦. ಜಿ.ಎಸ್.ಅಮೂರ 'ಕನ್ನಡ ಕಥನ ಸಾಹಿತ್ಯ ಕಾದಂಬರಿ' ಪುಟ.೨೦೩-೨೦೯

೧೧. ಹಾ.ಮಾ.ನಾಯಕ (ಸಂ) ಸ್ವಸ್ತಿ ಪುಟ.೭೦೯-೭೧೦

೧೨. ಬಾಲಸುಬ್ರಹ್ಮಣ ನರಹಳ್ಳಿ ನವ್ಯತೆ, ಪುಟ.೧೫೧-೧೫೨

೧೩. ಗಿರಡ್ಡಿಗೋವಿಂದರಾಜ ಕಾದಂಬರಿ ವಸ್ತು ಮತ್ತು ತಂತ್ರ ಪುಟ. ೧೭೨-೧೭೩

೧೪. ಸಿ.ಡಿಆರ್.ಯರವಿನ ತೆಲಿಮಠ ಪಾಶ್ಚಾತ್ಯ ಸಾಹಿತ್ಯವಾದಗಳ ಸಾಹಿತ್ಯ ಸಂದರ್ಭ ಪುಟ.೮೬-೮೬

೧೫. ವೆಂಕಟೇಶ ಜಿ. ಮಲ್ಲೇಪುರಂ, ಅರವಿನ ಕಥನ ಪುಟ.೧೮೦-೧೮೧

೧೬. ರಹಮತ್ ತರೀಕೆರೆ (ಸಂ), ಕನ್ನಡ ಅಧ್ಯಯನ ಪುಟ.೧೦೮-೧೨೭

೧೭. ಹೆಚ್.ಎಸ್.ಶೇಷಗಿರಿರಾವ್ ಕನ್ನಡ ಸಾಹಿತ್ಯ ಮೀಮಾಂಸೆ ಪುಟ.೨೦೦-೨೦೧

**ನಿಯತಕಾಲಿಕೆಗಳು**

೦೧. ಪ್ರಜಾವಾಣಿ ದಿನಪತ್ರಿಕೆ, ೨೦೦೮

೦೨. ಹೊಸತು ವಾರಪತ್ರಿಕೆ, ಮಾರ್ಚ್ ೯, ೨೦೦೯

೦೩. 'ಹಳ್ಳ ಬಂತು ಹಳ್ಳ' ಶ್ರೀನಿವಾಸ ವೈದ್ಯ

• • •

## ಅಧ್ಯಾಯ ಮೂರು

## ಪ್ರಾದೇಶಿಕ ಸಾಹಿತ್ಯ ಪರಿಕಲ್ಪನೆ ಹಿನ್ನೆಲೆಯಲ್ಲಿ ಗಂಗವ್ವ ಗಂಗಾಮಾಯಿ ಮತ್ತು ಹಳ್ಳ ಬಂತುಹಳ್ಳ

ಕನ್ನಡ ನವೋದಯ ಸಾಹಿತಿಗಳು ತಮ್ಮ ಕಥೆ ಕಾದಂಬರಿ ಹಾಗೂ ಪ್ರಬಂಧಗಳಲ್ಲಿ ಪ್ರಾದೇಶಿಕತೆಯನ್ನು ಬಹುಮಟ್ಟಿಗೆ ಪ್ರತಿ ಬಿಂಬಿಸಿರುವರು. ಕವಿ ಸಾಹಿತಿ ತನ್ನ ಕಾಲದ ತಾನು ಬದುಕಿ ಬಾಳಿದ ಪರಿಸರ ಚಿತ್ರವನ್ನು ತನ್ನ ಸಾಹಿತ್ಯದ ಹಿನ್ನೆಲೆಯಲ್ಲಿ ಉಳಿಸಿಕೊಂಡಾಗ ಆ ಸಾಹಿತ್ಯ ಕೃತಿಗೆ ಪ್ರಾದೇಶಿಕ ಮತ್ತು ವಾಸ್ತವ ಹಿನ್ನೆಲೆಯ ಸ್ವರೂಪ ಮೇಲ್ಮೈ ಉಂಟಾಗುತ್ತದೆ. ವರ್ತಮಾನ ಸ್ಥಿತಿ ಚಿತ್ರ ಸಾಹಿತ್ಯ ಕೃತಿಗೆ ನೈಜತೆಯನ್ನು ತಂದು ಕೊಟ್ಟಂತೆ ಪ್ರಾದೇಶಿಕ ಚಿತ್ರಣವು ಸಹ ಕೃತಿಯ ವಾಸ್ತವತೆಗೆ ಸಹಕಾರಿಯಾಗುತ್ತದೆ. ಸಾಹಿತ್ಯ ಸಾಹಿತಿ, ಸಹೃದಯ ಈ ಮೂರು ಅಂಶದಲ್ಲಿ ಒಂದಾಗಿ ಅನ್ಯೋನ್ಯವಾಗಿ ಉಳಿಯುತ್ತದೆ. ಮತ್ತು ಪರಸ್ಪರ ಸಾಫಲ್ಯವನ್ನು ಹೊಂದುತ್ತದೆ.

ಪ್ರಾದೇಶಿಕ ಕಾದಂಬರಿಗಳಲ್ಲಿ ಒಂದು ನಿರ್ಧಿಷ್ಟ ಪರಿಸರದ ಭೌಗೋಳಿಕ ವರ್ಣನೆ, ಸಾಂಸ್ಕೃತಿಕ ಹಿನ್ನಲೆ, ಜನರ ಜೀವನ ರೀತಿ, ಅವರ ಬದುಕಿನ ಸಂಪ್ರದಾಯಗಳ ಅನುಸರಣೆ, ಕಲಾವಂತಿಕೆ ಜೀವನ ಮೌಲ್ಯಗಳು ಹಾಗೂ ಆಸೆ ಆಕಾಂಕ್ಷೆಗಳು ಚಿತ್ರಿತವಾಗಿರುತ್ತದೆ. ಗೊರುರವರ ಸಾಹಿತ್ಯವನ್ನು ನೋಡುವಾಗ ಬಹುಮಟ್ಟಿಗೆ ಪ್ರಾದೇಶಿಕ ಹಿನ್ನೆಲೆ ಒಳಗೊಂಡಿದೆ. ಗೊರುರ ಸಾಹಿತ್ಯದಲ್ಲಿ ಹೇಮಾವತಿ ತೀರದ ಗೊರೂರಿನ ಪರಿಸರ ಮೂರ್ತರೂಪತಾಳದೆ. ಕುವೆಂಪು ಅವರ ಗದ್ಯ ಸಾಹಿತ್ಯದಲ್ಲಿ ಮತ್ತು ಕಾರಂತರ ಕಾದಂಬರಿಗಳಲ್ಲಿ, ರಾವಬಹದ್ದೂರ ಅವರ ಕೃತಿಗಳಲ್ಲಿ, ಪ್ರಾದೇಶಿಕ ಚಿತ್ರಣವನ್ನು ಕಾಣುತ್ತೇವೆ. ಕುವೆಂಪು ಅವರ ಗದ್ಯಕೃತಿಗಳಾದ 'ಮಲೆಗಳಲ್ಲಿ ಮದುಮಗಳು' ಕಾನೂರು ಸುಬ್ಬಮ್ಮ ಹೆಗ್ಗಡತಿಗಳಲ್ಲಿ, ಮಲೆನಾಡಿನ ಚಿತ್ರಣಗಳಿವೆ. ಈ ಕೃತಿಗಳಲ್ಲಿ ಮಲೆನಾಡಿನ ಗ್ರಾಮೀಣ ಜೀವನವನ್ನು ಚಿತ್ರಿಸಿದ್ದಾರೆ. ಕುವೆಂಪು ಅವರ ಗದ್ಯ ಸಾಹಿತ್ಯ ಮಲೆನಾಡಿನ ಬದುಕಿಗೆ ಪ್ರಕೃತಿ ಚಿತ್ರಣಕ್ಕೆ ಅಮರಸಾಕ್ಷಿ ಎಂದು ಹೇಳುವುದರಲ್ಲಿ ಔಚಿತ್ಯವಿದೆ. ನಿಸರ್ಗ

ರಮ್ಯತೆ ಭವ್ಯತೆ ಆ ಪರಿಸರದ ಜನರ ಬದುಕಿನ ವೈವಿದ್ಯತೆ, ಕಾರಂತರ ಕಾದಂಬರಿಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕೋಟೆ ಸುತ್ತ ಮುತ್ತಲಿನ ಬ್ರಹ್ಮಣ ಜೀವನವನ್ನು ಹೆಚ್ಚಾಗಿ ಚಿತ್ರಿಸಿದ್ದಾರೆ. ಗ್ರಾಮ ಜೀವನ ಸಂಬಂಧಿಸಿದಂತ ಮರಳಿಮಣ್ಣಿಗೆ, ಬೆಟ್ಟದ ಜೀವ, ಚೋಮನದುಡಿ, ನಂಬಿದವರ ನಾಕನರಕ ಮತ್ತು ಮೂಕಜ್ಜಿಯ ಕನಸು ಕೃತಿಗಳಲ್ಲಿ ಪ್ರಾದೇಶಿಕ ಜೀವನ ಚಿತ್ರವಾಗಿದೆ. ರಾವ್‌ಬಹದ್ದೂರ ಅವರ ಗ್ರಾಮಾಯಣ ಕೃತಿಯಲ್ಲಿ ಪಾದಹಳ್ಳಿಯ ಕತೆಯನ್ನು ವಿವರವಾಗಿ ಗುರುತಿಸಬಹುದು. ಬಯಲು ಸೀಮೆಯ ಒಕ್ಕಲಿಗರ ಗ್ರಾಮ ಜೀವನದ ದಟ್ಟ ಬದುಕನ್ನು ಕೊಡುವಲ್ಲಿ ಸಫಲ ಪ್ರಯತ್ನ ನಡೆಯಿಸಿದ ಎಚ್.ಎಲ್. ನಾಗೇಗೌಡರ ನನ್ನೂರು ಮತ್ತು ದೊಡ್ಡಮನೆಗಳು ಮಹತ್ವದ ಪಾತ್ರವಹಿಸುತ್ತವೆ. ಗೊರುರಿನ ಪರಿಸರ ಮತ್ತು ಹೇಮಾವತಿಯ ಸಂಸ್ಕೃತಿ, ಅವರ ಚಿತ್ರಿಸಿರುವ ಸಮಾಜ ಹಾಸನ ಜಿಲ್ಲೆಯ ಒಂದು ಮೂಲೆಗೆ ಸೀಮಿತವಾದರೂ ಅದರಲ್ಲಿ ವಿಸೃತ ಜಾತಿಯವರ ರೀತಿ ನೀತಿಗಳನ್ನು ಗುರುತಿಸಬಹುದು. ಈ ಪ್ರಾದೇಶಿಕ ಕೃತಿಗಳೆಲ್ಲವು ಸಹೃದಯರ ಪಾಲಿಗೆ ವಿಶಿಷ್ಟ ಕೃತಿಗಳಾಗಿ ಉಳಿದಿವೆ.

ಪ್ರಾದೇಶಿಕತೆಯಲ್ಲಿ ವೈವಿದ್ಯತೆಯನ್ನು ಗುರುತಿಸುವಂತೆ ವಿಶಿಷ್ಟತೆಯನ್ನು ನೋಡಬಹುದು. ಈ ಕಾರಣದಿಂದಲೇ ಗೊರೂರವರ ಹಳ್ಳಿಯ ಚಿತ್ರಣಗಳನ್ನು ಓದುವ ನಮಗೆ ನಾವು ನಗರವಾಸಿಗಳಾಗಿದ್ದರೂ ಅಲ್ಲಿಯ ಚಿತ್ರಣಗಳ ಸಹಜ ಸ್ವಾರಸ್ಯದೊಂದಿಗೆ ಅತ್ಯಾಕರ್ಷಿತವಾಗಿದೆ. ಪ್ರಾದೇಶಿಕ ಕೃತಿಗಳಲ್ಲಿ ಕಂಡುಬರುವ ಒಂದೊಂದು ಪಾತ್ರವು ತನ್ನದೇ ಆದ ರೀತಿಯಲ್ಲಿ ಅನನ್ಯವೆನಿಸುತ್ತವೆ. ಹಾಗೂ ಅಷ್ಟೇ ಅವಿಸ್ಮರಣಿಯವಾಗಿ ಉಳಿಯುತ್ತವೆ. ಪ್ರಾದೇಶಿಕ ಕೃತಿಗಳಲ್ಲಿ ಕಾಣುವ ಭಾಷೆ ಆ ಪರಿಸರಕ್ಕೆ ಹೊಂದುವಂತಹ ಭಾಷೆಯಾಗಿರುತ್ತದೆ. ಭಾಷಾ ವಿಜ್ಞಾನದ ದೃಷ್ಟಿಯು ಪ್ರಾದೇಶಿಕ ಕೃತಿಗಳ ಅಧ್ಯಯನಕ್ಕೆ ಯೋಗ್ಯವಾಗಿದೆ.

ಕುರ್ತುಕೋಟಿಯವರು 'ಮರಳಿ ಮಣ್ಣಿಗೆ' ಬಗ್ಗೆ ಪ್ರಸ್ತಾಪಿಸುತ್ತಾ ಪ್ರಾದೇಶಿಕ ಕಾದಂಬರಿಗೂ ಜೀವನ ವಿನ್ಯಾಸದ ಗಹನತೆಗೂ ಒಂದು ಬಗೆಯ ವಿರೋಧವಿರುವ ಹಾಗೆ ಕಾಣುತ್ತದೆ. ಇನ್ನೊಂದೆಡೆ ಅವರೇ ಕಥೆಯ ಸರಳವಾದ ಸಾಮ್ಯತೆ ಭಾವನೆಗಳ ಅಪೂರ್ವ ಸಂಯಮ ಪಾತ್ರ ರಚನೆ ಸಹಜತೆ ಇವೆಲ್ಲವುಗಳಿಗೆ ಸತ್ವವನ್ನು ತೇಜಸ್ಸನ್ನು ಪ್ರಾಣವನ್ನು ನೀಡಿರುವ ಪ್ರಾದೇಶಿಕತೆ ಕಾದಂಬರಿಯ ಅವಿನಾಶದ ಗುಣಗಳಾಗಿವೆ.

ಪ್ರಾದೇಶಿಕ ಕಾದಂಬರಿ ಎಂದರೆ ಬಹುಶಃ ಯಾವುದೋ ಒಂದು ಪ್ರದೇಶದ ಜನ ಜೀವನದ ಚಿತ್ರವನ್ನು ಸವಿವರವಾಗಿ ಕೊಡುವ ಕಾದಂಬರಿ ಎಂದು ಭಾವಿಸಬಹುದು. ಇಡಿ ಒಂದು ಜನಾಂಗ ಚಿತ್ರವನ್ನು ಇದು ಕೊಡಬೇಕಾಗಿರುವುದರಿಂದ ಸಹಜವಾಗಿಯೇ ಇದರ ವಸ್ತುವಿನ ವೈವಿದ್ಯದ ಹರವು ಹೆಚ್ಚಾಗಿರುತ್ತದೆ.

ಅದೇ ರೀತಿಯಾಗಿ ಹಳ್ಳಬಂತುಹಳ್ಳ ಮತ್ತು ಗಂಗವ್ವಗಂಗಾಮಾಯಿಯ ಕಾಲಘಟ್ಟಗಳು ಬೇರೆಯಾದರೂ ಧಾರವಾಡ ಸುತ್ತಮುತ್ತಲಿನ ಪರಿಸರದ ಸಂಸ್ಕೃತಿಯನ್ನು ಕಟ್ಟಿಕೊಡುವುದರ ಜೊತೆಗೆ ಸ್ವತಂತ್ರ್ಯ ಹೋರಾಟದ ಕಲ್ಪನೆಕೊಡುತ್ತಲೇ ಜೊತೆಗೆ ಇಡೀ ಒಂದು ರಾಷ್ಟ್ರೀಯ ಭಾವನೆಯನ್ನು ಹುಟ್ಟುಹಾಕುತ್ತದೆ. ಭಾರತದ

ಸ್ವಾತಂತ್ರ್ಯಕ್ಕಾಗಿ ಧಾರವಾಡದ ನರಗುಂದ ಮತ್ತು ನವಲಗುಂದ ಬಂಡಾಯಗಳು ಯಾವ ರೀತಿಯಾಗಿ ಮುಖ್ಯ ಪಾತ್ರವಹಿಸಿ, ದೇಶಕ್ಕಾಗಿ ತಮ್ಮ ಪ್ರಾಣವನ್ನೆ ತೆತ್ತ ರಾಮುನ ಪಾತ್ರ ಸಾಕ್ಷಿಯಾಗಿ ಈ ಕಾಂದಬರಿಯಲ್ಲಿ ನಿಲ್ಲುತ್ತದೆ.

ಒಂದು ಪ್ರದೇಶದಲ್ಲಿ ವಾಸಿಸುವ ಜನರ ಭೌಗೋಳಿಕ ಮತ್ತು ಚಾರಿತ್ರಿಕ ರೀತಿ ನೀತಿ ಭಿನ್ನವಾಗಿರುತ್ತವೆ. ಉಡುಗೆ-ತೊಡುಗೆ ಉಟೋಪಚಾರ ರೂಢಿ ಸಂಪ್ರದಾಯಗಳು ಆಡುಮಾತಿನ ಭಾಷೆ ಪ್ರತಿಕ್ರಿಯೆ ಸಂವೇದನೆ ಮುಂತಾದ ವಿಷಯಗಳಲ್ಲಿ ವ್ಯತ್ಯಾಸಗಳನ್ನು ಕಾಣುತ್ತೇವೆ. ಇದನ್ನು ಸಾಮಾನ್ಯ ಅರ್ಥದಲ್ಲಿ Relgionlosm ಎನ್ನುತ್ತೇವೆ. ಇಲ್ಲಿ ಸೃಷ್ಟಿಗೊಂಡ ಸಾಹಿತ್ಯ ಪ್ರಾದೇಶಿಕ ಸಾಹಿತ್ಯ.

**ಉದಾಹರಣೆ:** ಮಿಲ್ಟನ್‌ನ ಪ್ಯಾರಡೈಸ್ ಲಾಸ್ಟ್ ಸೇಟನನಗೂ, ರಾಮಾಯಣದ ಹನುಮಂತನ ಸಮುದ್ರೋಲ್ಲಂಘನಕ್ಕೂ, ಕುವೆಂಪು ಅವರ ಶ್ರೀರಾಮಾಯಣ ದರ್ಶನಂ ಹನುಮಂತನಿಗೂ ಹಲವು ಭಿನ್ನತೆಗಳಿವೆ. ಇವು ವಸ್ತುಸ್ಥಿತಿ ಸಂವೇದನೆ ಒಂದೇ ಆಗಿದ್ದರೂ ಹಲವಾರು ವ್ಯತ್ಯಾಸಗಳಿರುತ್ತವೆ. ಅನಂತಮೂರ್ತಿಯವರು ಸಂಸ್ಕಾರ ಕಾದಂಬರಿಗೂ ಅಲ್ಬರ್ಟ್‌ರಮೂನ ದಿ ಪ್ಲೇಗ್ ಕಾದಂಬರಿಗೂ ಈ ಬಗೆಯ ವ್ಯತ್ಯಾಸವಿದ್ದಂತ ಪ್ರೇಮ ಚಂದರ ಕಥೆಗಳೂ ಬೆಸಗರ ಹಳ್ಳಿ ರಾಮಣ್ಣನವರ ಕಥೆಗಳಿಗೂ ವೈತ್ಯಾಸವಿದ್ದಂತೆ ಕಂಡರೂ ಒಟ್ಟು ಬಲ ಪ್ರಾದೇಶಿಕ ಸಾಹಿತ್ಯವೆನಿಸಿಕೊಳ್ಳುತ್ತವೆ. ಇದು ರಾಷ್ಟ್ರೀಯ ಸಾಹಿತ್ಯದ ಒಂದು ಭಾಗವಾಗಿರುತ್ತದೆ. ವಿಜಯ ತೊಂಡಲ್ಕರ ನಾಟಕಗಳೂ ಗಿರೀಶ ಕರ್ನಾಡರ ನಾಟಕಗಳಿಗೂ ಮರಾಠಿ ಆತ್ಮಕತೆಗಳಿಗೂ ಕನ್ನಡದ ಆತ್ಮಕತೆಗಳಿಗೂ ವ್ಯತ್ಯಾಸವಿರುತ್ತದೆ. ಆದ್ದರಿಂದಲೇ ರಾಷ್ಟ್ರೀಯ ಸಾಹಿತ್ಯ ವೆನ್ನುವುದು ಸುಮ್ಮನೆ ನಿರ್ಮಾಣವಾಗುವುದಿಲ್ಲ ಅದು ಇಂಥ ಉಪರಾಷ್ಟ್ರೀಯ ನೆಲೆಗಳ ಸಾಹಿತ್ಯದ ಒಟ್ಟುರೂಪ ಎಂಬುವ ಅಭಿಪ್ರಾಯವನ್ನು ರಾಜಪ್ಪ ದಳವಾಯಿರ ಸಂಪಾದನ ಕೃತಿಯಾದ ಕನ್ನಡ ಸಾಹಿತ್ಯ ಕೋಶದಲ್ಲಿ ಪ್ರಸ್ತಾಪಿಸಿರುವುದನ್ನು ನೆನೆಯಬಹುದು.

'ಬೆಟ್ಟದ ಜೀವ' ದಂಥ ಕಾದಂಬರಿಯ ವಸ್ತು 'ಮರಳಿ ಮಣ್ಣಿಗೆ' ಯಂಥ ಪ್ರದೇಶದಲ್ಲೇ ಸಂಭವಿಸಿದ್ದರೂ ಅದು ಒಂದು ಜನಾಂಗ ರೀತಿಯನ್ನು ಪ್ರತಿನಿಧಿಸುವುದಿಲ್ಲ. ಪ್ರಾದೇಶಿಕ ಕಾದಂಬರಿಯೇ ಪಾತ್ರಗಳು ಇಡಿಯ ಜನಾಂಗದ ಪ್ರತಿನಿದಿಗಳಾಗುತ್ತಾರೆ. ಆದರೆ ಈ ಪ್ರಾದೇಶಿಕ ವಿವರಗಳ ವೈವಿದ್ಯವಾಗಲಿ, ಸತ್ಯಸತೆಯಾಗಲಿ ವಿವರಗಳು ಸಮಾಜ ಶಾಸ್ತ್ರಜ್ಞರಿಗೆ ಉಪಯುಕ್ತವಾಗಬಹುದು. ಅವುಗಳ ಸಹಾಯದಿಂದ ಒಂದು ಜನಾಂಗದ ಜೀವನ ಕ್ರಮವನ್ನು ಪುನರ್ರಚಿಸಲು ಸಾಧ್ಯವಾಗಬಹುದು. ಆದರೆ ವಿಮರ್ಶೆಗೆ ಅದು ಮುಖ್ಯವಲ್ಲ ಈ ವಿವರಗಳಿಗೆ ಕಾದಂಬರಿಕಾರ ತನ್ನ ಕೃತಿಯಲ್ಲಿ ಏನು ಮಾಡುತ್ತಾನೆ ಎನ್ನುವುದು ಮುಖ್ಯ. ಉದಾಹರಣೆಗೆ ಮರಳಿ ಮಣ್ಣಿನಲ್ಲಿ ಚಿತ್ರಿಸಲ್ಪಟ್ಟಿರುವ ಪ್ರಕೃತಿಯೊಂದಿಗಿನ ಮಾನವ ಹೋರಾಟ ಈ ದೃಷ್ಟಿಯಿಂದ ಪಡುಕರಾವಳಿಯ ಜನ ಜೀವನದ ಒಟ್ಟು ಹೋರಾಟವನ್ನು ಪ್ರತಿನಿಧಿಸುತ್ತದೆ. ಈ ಹೋರಾಟ

ಈ ಜನಾಂಗಕ್ಕೆಲ್ಲ ಸಾಮಾನ್ಯವಾಗಿರುವಂತೆ, ಈ ಜನಾಂಗದ ಪ್ರಕೃತಿಕ, ಸಾಮಾಜಿಕ ಧಾರ್ಮಿಕ, ಜೀವನದ ಯಥಾವತ್ತಾದ ವಿವರಗಳನ್ನು ತಿಳಿಸುತ್ತವೆ. ಈ ದೃಷ್ಟಿಯಿಂದ 'ಮರಳಿ ಮಣ್ಣಿಗೆ' ಕಾದಂಬರಿ ಒಂದು ಪ್ರಾದೇಶಿಕ ಕಾದಂಬರಿ ಎನ್ನಬಹುದು.

ಹಲವು ಭಾಷಾ ಸಾಹಿತ್ಯದಿಂದ ಭಾರತೀಯ ಸಾಹಿತ್ಯ ನಿರ್ಮಾಣವಾಗಿದೆ. ಸಂಸ್ಕೃತ, ತೆಲುಗು, ಮಲೆಯಾಳಂ, ಕನ್ನಡ, ಹಿಂದಿ ಮುಂತಾದ ಭಾಷಾ ಸಾಹಿತ್ಯವನ್ನು ಪ್ರಾದೇಶಿಕ ಸಾಹಿತ್ಯವೆಂದು ಕರೆಯಲಾಗುತ್ತದೆ. ಒಬ್ಬ ಬರಹಗಾರ ಯಾವಾಗಲೂ ಹುಟ್ಟಿದ ಪರಿಸರಕ್ಕೆ ಒಂದಿಲ್ಲೊಂದು ಕಾರಣಕ್ಕಾಗಿ ಬದ್ಧನಾಗಿರುತ್ತಾನೆ. ಈ ಬಗೆಯ ಬದ್ಧತಿಯ ನೆಲೆಯಲ್ಲಿ ಆತ ತನ್ನ ಪರಿಸರದ ಬದುಕನ್ನು ಅಭಿವ್ಯಕ್ತಿಸುತ್ತಾನೆ. ಪ್ರತಿಯೊಂದು ಪ್ರದೇಶವು ತನ್ನದೇಯಾದ ಭಾಷೆ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುತ್ತದೆ. ಅದು ಅಲ್ಲಲ್ಲಿಗೆ ಜನಗಳ ಆಸಕ್ತಿ ಆಶೋತ್ತರಗಳನ್ನು ಅವುಗಳಿಗೆ ಒತ್ತುಕೊಡುವ ಪ್ರಾದೇಶಿಕ ಘಟನೆಗಳನ್ನು ಒಳಗೊಂಡು ಒಟ್ಟಾರೆಯಾಗಿ ರಾಷ್ಟ್ರೀಯ ಸಾಹಿತ್ಯದ ಭಾಗವಾಗಿ ಬೆಳೆಯುತ್ತದೆ. ''ನಿರ್ಧಿಷ್ಟ ರಾಜ್ಯದ ಜನಪದ ಮತ್ತು ಜಾನಪದಕ್ಕೆ ಸಂಬಂಧ ಪಟ್ಟ ಸಾಂಸ್ಕೃತಿಕ ವಿವರಗಳು ವ್ಯಾಪಕಾರ್ಥದಲ್ಲಿ ಪ್ರಾದೇಶಿಕತೆ ಎನಿಸುತ್ತದೆ'' ಎಂಬ ಕೆ.ಮಲ್ಲಮ್ಮರವರ ಸ್ಪಷ್ಟಪಡಿಸಿದ್ದು ಗಮನಿಸಬಹುದಾಗಿದೆ. ಅಧ್ಯಯನ ಯೋಗ್ಯವೆನಿಸಿದ ಆಚಾರ-ವಿಚಾರ-ನಂಬಿಕೆ ನಡವಳಿಕೆ, ಆಟ-ವಿನೋದ ಆಹಾರ ವಿಹಾರ ಉಡುಗೆ ತೊಡುಗೆ ಕುಟುಂಬ ಪದ್ಧತಿ ಜೀವನಾವರ್ತನ ಮತ್ತು ವಾರ್ಷಿಕಾವಾರ್ತದ ಆಚರಣೆಗಳು ಅಲ್ಲದೇ ಪ್ರದೆಶದ ಐತಿಹಾಸಿಕ ಹಾಗೂ ಪಾರಂಪರಿಕ ಸಂಗತಿಗಳೆಲ್ಲವೂ ಪ್ರಾದೇಶಿಕತೆಯ ಮಾನದಂಡಗಳಾಗುತ್ತವೆ.

ಗಂಗವ್ವ ಗಂಗಾಮಾಯಿ ಧಾರವಾಡ ಶಹರದ ಜನ ಜೀವನ ಚಿತ್ರಣವಾಗಿದೆ. ಸವಿವರವಾಗಿ ವಸ್ತುವಿನ ವೈವಿದ್ಯಮಯ ಹರವು ಹೆಚ್ಚಾಗಿ ಕಂಡುಬರುತ್ತದೆ. ಧಾರವಾಡ ಶಹರದವರದೇ ಒಂದು ರೀತಿಯಾದ ಗ್ರಾಮೀಣ ಭಾಗಗಳಲ್ಲಿ ತಮ್ಮ ಒಡನಾಟವಿಟ್ಟುಕೊಂಡು ಶಹರದಲ್ಲಿ ಜೀವಿಸುವವರ ಜೀವನ ಕ್ರಮವೊಂದು ವಿಭಿನ್ನವಾಗುರುತ್ತದೆ. ಆಯಾ ಪ್ರದೇಶಗಳ ಆಗು-ಹೋಗುಗಳ ಸಮೃದ್ಧವಿವರ ಹೊಂದಿರುವ ಕಥನ ಕ್ರಮದಿಂದಾಗಿ ಕೃತಿ ವಾಸ್ತವದ ಚಿತ್ರಣವನ್ನು ಅಷ್ಟೇ ಅಚ್ಚುಕಟ್ಟಾಗಿ ನಿಭಾಯಿಸುತ್ತದೆ. ಇಲ್ಲಿ ಕಥನಕಾರ ತಾನು ಕಂಡುಕೊಂಡು ಬೆಳೆದ ಪರಿಸರವನ್ನು ತಾನು ಕಂಡಂತೆ ಚಿತ್ರಿಸುವುದು ಪ್ರಾದೇಶಿಕತೆ ಸೊಗಡು ಎನಿಸಿಕೊಳ್ಳುತ್ತದೆ. ಅಲ್ಲಿನ ವರ್ಗವಾರು ಸಂಪ್ರದಾಯಿಕ ಆಚರಣೆಗಳು ಆಚರಣೆಗೆ ಕರೆಯಲಾಗುವ ಹೆಸರು ಶಿಷ್ಟ ಉಪಚಾರಗಳು, ಸಿರಿತನ-ಬಡತನ, ವರ್ಗವಾರು ಸಂಘರ್ಷಗಳನ್ನು ಪಾತ್ರಗಳೊಂದಿಗೆ ಹೆಣೆಯುವ ಕ್ರಮ ಒಂದೊಮ್ಮೆ ಭಾಷೆ ಶೈಲಿಗೆ ಉದಾಹರಣೆಗಳಾದರೂ ಆ ಕಥನಗಾರಿಕೆಯಲ್ಲಿನ ಅಂತರ್ಯ ಸಾಂಸ್ಕೃತಿಕ ಗುಟ್ಟು ಪ್ರಾದೇಶಿಕತೆಯ ಸ್ಪಷ್ಟ ವ್ಯಾಖ್ಯೆಯೆನಿಸುತ್ತವೆ. ಪ್ರತಿಯೊಂದು ಪ್ರದೇಶದ ಆಚಾರ-ವಿಚಾರಗಳು ಭಿನ್ನವಾಗಿರುವುದೇ ಪ್ರಾದೇಶಿಕ ಪರಿಕಲ್ಪನೆಯ ಮೂಲದ್ರವ್ಯವಾಗಿರುತ್ತದೆ. ಗಂಗವ್ವ ಗಂಗಾಮಾಯಿ ಮತ್ತು

ಹಳ್ಳ ಬಂತು ಹಳ್ಳ ಕಾದಂಬರಿಗಳ ಆಂತರ್ಯದ ಗುಟ್ಟನ್ನು ಹುಡುಕುವ ನೆಲೆಯೇ ಪ್ರಸ್ತುತ ಅಧ್ಯಯನದ ಪ್ರಾದೇಶಿಕ ಪರಿಕಲ್ಪನೆಯಾಗಿದೆ.

'ಗಂಗವ್ವ ಗಂಗಾಮಾಯಿ' ಎಂಬ ಹೆಸರೇ ಕಥನಕಾರರ ದಾರ್ಶನಿಕತೆಯ ಧ್ವನಿಯೆನಿಸಿದೆ. ಪಾತ್ರವಾದ ಗಂಗವ್ವ ಭಾರತೀಯ ಸನಾತನ ಸಂಸ್ಕೃತಿಯ ಪಾಪ ತೊಳೆದು ಸದ್ಗತಿ ದೊರಕಿಸುವ ಗಂಗಾಮಾಯಿ ಗಂಗಾಮಾತೆಯಲ್ಲಿ ಸಮುಕರಿಸಲ್ಪಟ್ಟಿದ್ದಾಳೆ. ಗಂಗೆ ಮೈಲಿಗೆಯಲ್ಲ ಪಾಪವಿಲ್ಲ ಎಂಬ ಸಂಸ್ಕೃತಿ ಸೂಚಕವಾದ ಪದವನ್ನು ಗಂಗವ್ವ ಎಂಬ ಅಂತಃಕರಣ ಪಾತ್ರವೊಂದಕ್ಕೆ ಹೊಂದಿಸಿದ್ದಾರೆ. ತಾಯಿ ತಪ್ಪನ್ನು ಮನ್ನಿಸಿ ಸ್ವೀಕರಿಸುವಂತೆ ಉದ್ಧಟತನವನ್ನು ದಂಡಿಸುವಂತೆ ಗಂಗಾಮಾಯಿಯು ಭಕ್ತರ ಪಾಪ ತೊಳೆದು ಉದ್ಧಟತನವನ್ನು ತನ್ನದೆ ನಿಲುವಿನಲ್ಲಿ ದಂಡಿಸುತ್ತಾಳೆ. ಗಂಗಾಮಾಯಿ ಶಬ್ದಕೂಡ ಮರಾಠಿ ಸಂಪರ್ಕದ ಧಾರವಾಡ ಪರಿಸರದ ಆಯಿ, ತಾಯಿ ಶಬ್ದಕ್ಕೆ ಸಮದೂಗಿಸಲ್ಪಟ್ಟಿದೆ. ಶಿರ್ಷಿಕೆಯೇ ಸ್ಪಷ್ಟವಾಗಿ ಪ್ರಾದೇಶಿಕ ಕುರುಹು ಎನಿಸುತ್ತದೆ. ಉತ್ತರ ಕರ್ನಾಟಕದ ಭೋಳೆ ಸ್ವಭಾವದ ಆದರೆ ಅಷ್ಟೇ ಘಾಟಿ ಮುದುಕಿಯಾಗಿ ಕಾಣುವ ಗಂಗವ್ವ ಸಂಪ್ರದಾಯ ಬದ್ಧ ಹೆಣ್ಣುಮಗಳಾಗಿ ತೋರುತ್ತಾಳೆ. ಕಿಟ್ಟಿಕೂಡ ಉತ್ತರ ಕರ್ನಾಟಕದ ಭೋಳೆ ಸ್ವಭಾವದ ಆದರೂ ಅಲ್ಲಲ್ಲಿ ದೇಸಾಯರು, ವೇಣುಬಾಯಿ, ಕಿಟ್ಟಣ, ಗಂಗವ್ವ ರಾಘುಪ್ಪ, ಪೋದ್ದಾರ ಲಕ್ಷ್ಮಿಂಬಾಯಿ ಜೋಶಿ ರಾಮಾರಾಯ..... ಇತ್ಯಾದಿ ಹೆಸರುಗಳಿವೆ. ಬಾಯಿ ಎನ್ನುವುದು ಮರಾಠಿ ಸಂಪರ್ಕದ ಪ್ರದೇಶವಾದ್ದರಿಂದ ಮರಾಠಿಯಿಂದ ಬಂದ ಪದವಾಗಿವೆ. ಜೋಶಿ, ಪೋದ್ದಾರ, ದೇಸಾಯಿ, ಇವೆಲ್ಲ ಧಾರವಾಡ ಪರಿಸರದ ಮನೆತನದ ಸೂಚಕವಾಗಿರುತ್ತವೆ. ವ್ಯವಹಾರಿಕವಾಗಿ ಇವುಗಳು ವೃತ್ತಿ ಹಾಗೂ ಪ್ರತಿಷ್ಠೆಯ ಗತ್ತುಗಳಾಗಿರುತ್ತವೆ. ವಸಂತರಾಯ ಅಚ್ಯುತರಾಯ ಎಂಬ ಪದಗಳು ರಾಯ, ರಾಜ ಎಂಬರ್ಥದಂತೆ ಗತ್ತುಗಾರಿಕೆಯನ್ನು ಪ್ರದರ್ಶಿಸುತ್ತವೆ. ಸಾಮಾನ್ಯವಾಗಿ ವತನದಾರ ಮನೆತನದವರೆಲ್ಲರಿಗೂ ರಾಯ ಎಂಬ ಹೆಸರುಗಳು ಇರುತ್ತವೆ.

ಧಾರವಾಡ ಪರಿಸರದ ಆತಿಥ್ಯದ ಕುರುಹುವಾಗಿ ಚಹಾದ ಬಳಕೆಯನ್ನು ಉಲ್ಲೇಖಿಸಿದ್ದಾರೆ. ಅತಿಥಿಗಳ ಮನೆಗೆ ಬಂದಾಗ ಚಹ, ಕಾಫೀ, ಪಾನಕ ಇತ್ಯಾದಿಗಳನ್ನು ಕೊಟ್ಟು ಸತ್ಕಾರ ಮಾಡುವ ಒಂದು ಸಂಪ್ರದಾಯ ಬಹುಕಾಲದಿಂದಲೂ ಉಳಿದು ಕೊಂಡು ಬಂದಿದೆ. ಮೈಸೂರು ಶಿವಮೊಗ್ಗ, ಬೆಂಗಳೂರು ಕಡೆಯವರು ಕಾಫೀಯನ್ನು ಹೆಚ್ಚು ಅತೀಥಿಗಳ ಸತ್ಕಾರಕ್ಕೆ ಪಾನೀಯವನ್ನು ಬಳಸಿದರೆ, ಧಾರವಾಡ ಹುಬ್ಬಳ್ಳಿಯ ಜನರಲ್ಲಿ 'ಚಹ'ವನ್ನು ನೀಡುವ ಒಂದು ಸಂಪ್ರದಾಯ ಬೆಳೆದುಕೊಂಡು ಬಂದಿದೆ. ಅದೆ ರೀತಿ ಕಿಟ್ಟಿಯ ಮನೆಗೆ ರಾಘುಪ್ಪನು ಮೊದಲ ಸಾರೆ ಬಂದಾಗ, ನಗುತ್ತಾ ಕಿಟ್ಟಿಯು ''ಅವ್ವ ಒಂದಿಷ್ಟು ಚಹನಾರ ಮಾಡು''[೧] ಎಂದು ಆಜ್ಞಾಪಿಸಿದನು. ಆಗ ಗಂಗವ್ವ ''ರಾಘೂ ಚಹದ ಮನಶ್ಯಾ ಅಲ್ಲ ಹೇಳಾಪಾ''[೨] ಎಂದು ನಿರುತ್ಸಾಹದಿಂದ ಹೇಳಿದಳು. ಈ ಸಂದರ್ಭ ಚಹದ ಆತಿಥ್ಯ ಮತ್ತು ಬಳಕೆಯ ಪಾನೀಯವಾಗಿ ಚಹ ಇವುಗಳ ಸಂಬಂಧವನ್ನು ಚೆನ್ನಾಗಿ ವಿವರಿಸುತ್ತದೆ.

ಇನ್ನೂ ಕೆಲವು ಸಂಭೋದನಾ ವಾಚಕ ಪದಗಳು ಮತ್ತು ಹಲವಾರು ಪ್ರಾದೇಶಿಕ ಪದಗಳನ್ನು ನುಡಿಗಟ್ಟುಗಳನ್ನು ಕೆಳಗಿನ ಉದಾಹರಣೆಯ ಮೂಲಕ ಕಾಣಬಹುದಾಗಿದೆ. ಮಾಮ, ಮಾಂಶಿ, ಎನ್ನುವ ಪದಗಳು ಅಲ್ಲಿನ ಪ್ರದೇಶದಲ್ಲಿ ಸಂಬೋಧನ ಪದಗಳು ಖರೇ ಕಲ್ಯಾಣ ನಿಜವಾಗಿಯೂ ಒಳ್ಳೆಯದು ಮಾಡಿದವರು ನಾವೆ. ಬಾಟ-ಮಹಾನ್ ಬಾಯ್ಬಿಡಕ, ರೊಕ್ಕ ಉಚ್ಚತ್ತಾನ-ದುಡ್ಡುಕೊಡುತ್ತಾನೆ ಎಂಬುದು ಧಾರವಾಡದ ಆಡು ಆಡುಭಾಷೆಯು ಓದುಗರನ್ನು ಆಕರ್ಷಿಸುತ್ತವೆ. ''ಕಿಟ್ಟಿ ಬೀದಿಯಿಂದ ಮರಳಿದಾಗ 'ರಾಘಪ್ಪಮಾಮ' ಎಂದು ತಾನೆ ರಚಿಸಿದ ಹೆಸರು ಅವನ ಕಿವಿಯಲ್ಲಿ ಸವಿನುಡಿಯುತ್ತಿತ್ತು.''[೩]

'ರಾಯರ ಈ ಹುಡುಗನ ಖರೇ ಕಲ್ಯಾಣಮಾಡಿದವರು ನೀವು!'[೪]

'ಈ ಭಾಟನ ಮಾತುಗಳನ್ನು ದಿಙ್ಮೂಢರಂತೆ ತನ್ನ ಪತಿದೇವರು ಕೇಳುತ್ತಾ ಕುಳಿತದ್ದು ವೇಣುಬಾಯಿಗೆ ಸಹನವಾಗಲಿಲ್ಲ.''[೫]

''ನಿಂದರ ಗಂಗಕ್ಕ; ತಿರುಗಿ ನಮ್ಮದು ನಿಮ್ಮದು ಬೆಟ್ಟಿ ಆದೀತು ಆಗಲಿಕ್ಕಿಲ್ಲ. ನಾನು ಬಹಳ ದಿವಸ ಆಯ್ತು ಈ ಮಾತು ಕೇಳಲಿಕ್ಕೆ ಹತ್ತಿ ಇಲ್ಲೇ ದೇಸಾಯಿರ ಸಾಕ್ಷಿ ಇದ್ದಾರೆ. ಮನಸ್ಸನ್ಯಾಗ ಹೊಲಸುಬ್ಯಾಡ ಒಂದನೇ ಮಾತು ಗಂಗಕ್ಕ, ವೆಂಕಟಿಗ ನಾನು ಜಾಮೀನ ಆಗಲಿಕ್ಕ ಒಲ್ಲೆ ಅಂದನೇನು? ನಾ ಹಿಂದ ಸರದು ಸ್ವಾಮಿರಾಯನ ಮುಂದ ನೂಕಿದನೇ ಅಲ್ಲಾ. ಮುಂದ ಆದದ್ದು ದೇವರ ಕೈಯಾಗಿನ ಮಾತುಬಿಡು. ಆದರ ನನ್ನ ತಪ್ಪು ಏನು. ನನ್ನ ಪದರಿನ್ಯಾಗ ಹಾಕು ಸ್ವೀಕರಿಸು ಎಂದನು.''[೬]

''ಹಂಗ ಕೇಳಿದರ ಗಂಗಕ್ಕ ವೆಂಕಟಿಗ ನನ್ನ ತಮ್ಮನು ಹೌದು, ನಿನ್ನ ತಮ್ಮನು ಹೌದು, ಆದರೆ ಸ್ವಾಮಿರಾಯ ಜಾಮೀನು ಆದದ್ದು ನಿನ್ನ ತಮ್ಮ ದಶಿಂನನ ಅಂತಗಾ ಅಂತೇನಿ ನೋಡು.......ಸ್ವಾಮಿರಾಯ ಏನು ನನ್ನ ಶತ್ರುನ್ನ?.....ನನ್ನ ಕಣ್ಣೆದುರಿಗೆ ಜಾಮೀನು ಪತ್ರಕ್ಕೆ ಸಹಿ ಹಾಕ್ಯಾನ ವೆಂಕನ್ನ ಓಡಿಸಿದರು. ಅವನ ಪೇಚಿನ್ಯಾಗ ಸಿಗತಾನ ನನಗ ತಿಳಿಯೋದಿಲ್ಲ?''[೭] ಎಂದ.

''ಮೆಹಬೂಜಾನಳು ಯಜಮಾನರಿಗೆ ತಾನು ಕೇವಲ ಅಕ್ಕಿ ಕಾಳಿಗೆ ಮಾತ್ರ ಬಂದು ಹೋಗುತ್ತಾನೆಂದು ಮೊದಲೇ ತಿಳಿಸಿದ್ದಳು. ಆದರೆ ರಾಘಪ್ಪ ಕೇಳಿಯಾನೆ? ಹಠಮಾಡಿ, ರೇಗಿದ್ದು, ವೀಳ್ಯವನ್ನು ಸ್ವೀಕರಿಸದೆ, ಶೆಡವು ಮಾಡಿ, ನಾಲ್ಕು ದಿವಸವಾದರೂ ಧಾರವಾಡಕ್ಕೆ ಬಂದು ಇರುವಂತೆ ಆಕೆಯನ್ನು ಒಪ್ಪಿಸಿದನು.''[೮]

ಒಂದು ಬ್ರಾಹ್ಮಣ ಸಮುದಾಯದ ಮದುವೆ ಎಂದರೆ ಅಲ್ಲಿ ಮಡಿ, ಮೈಲಿಗೆ, ವಾತಾವರಣ ತಾನು ಇತರ ಜಾತಿಯವಳು. ತನ್ನಿಂದ ಇತರರಿಗೆ ಸುಖವಿಲ್ಲ. ಇತರರಿಂದ ತನಗೂ ಇಲ್ಲ. ಆ ಒಂದು ಸಮುದಾಯದ ಜೊತೆ ಯಾವ ಕೆಲಸ ಕಾರ್ಯಗಳಲ್ಲಿ ತೊಡಗುವಂತಿಲ್ಲ ಎಂಬುದನ್ನು ಅರಿತ ಮೆಹಬೂಬುಳು ಮದುವೆ ನಾಲ್ಕು ದಿನ ಮುಂಚಿತವಾಗಿ ಬರಲು ಹಿಂಜರಿಯುತ್ತಾಳೆ. ರಾಘಪ್ಪನ ಒತ್ತಾಯದ ಮೇರೆಗೆ ಬರುತ್ತಾಳೆ. ರಾಘಪ್ಪನು ಹಟದಿಂದ ರೇಗಿದ್ದು, ವೀಳ್ಯವನ್ನು ಸ್ವೀಕರಿಸದೆ, ಶೆಡವುಮಾಡಿ ಹೊಗುತ್ತಾನೆ.

ಇದು ಧಾರವಾಡ ಪರಿಸರಕ್ಕೆ ತನ್ನದೇಯಾದ ರೂಢಿ ಸಂಪ್ರದಾಯ ಆಚರಣೆಗಳು ಇದ್ದ ಹಾಗೆ ಮದುವೆ ಬಂಧು ಬಳಗವನ್ನು ಕರೆಯಲಿಕ್ಕೆ ಹೋದಾಗ, ಮದುವೆ ಕರೆಯಲಿಕ್ಕೆ ಬಂದವರಿಗೆ ಆಧರ ಆತಿಥ್ಯಮಾಡಿ ವೀಳ್ಯವನ್ನು ಕೊಟ್ಟು ಕಳಿಸುವ ಒಂದು ಸಂಪ್ರದಾಯ ಧಾರವಾಡ ಪ್ರದೇಶದಲ್ಲಿ ರೂಢಿಯಲ್ಲಿದೆ.

''ಅವನ ವೈಭವ ನನಗೆ ಗೊತ್ತಿಲ್ಲೇನು ಗೋಪಣ್ಣ ಎಲ್ಲ ಅದ, ಮಾಡತಾನ ಮಟ್ಟತಾನ, ಬೇಕಾದರ ತನ್ನ ರಂಡಿಗೆ ರೊಕ್ಕ ಉಚ್ಚತಾನ''[೯]

ಗಂಗವ್ವನು ತನ್ನ ತಮ್ಮ ರಾಘುಪ್ಪನ ಸ್ವಭಾವ ಅರಿತ ಇವಳು ತನಗೂ ಸಾವಿರ ರೂಪಾಯಿ ವರದಕ್ಷಿಣೆ ಕೊಡುವಲ್ಲಿ ತಕರಾರು ಮಾಡುತ್ತಾನೆ. ಬೇಕಾದವರಿಗೆ ತನ್ನ ರಂಡಿಗೆ ದುಡ್ಡನ್ನು ಧಾರಾಳವಾಗಿ ನೀಡುತ್ತಾನೆ ಎಂದು ಸಿಟ್ಟಿನ ಮಾತಾದರೂ ಇದು ಪಕ್ಕಾ ಧಾರವಾಡದ ದೇಶಿಯ ಮಾತಾಗಿದೆ.

ಅದೇ ತಾನೆ ಮದುವೆಯಾಗಿ ಬಂದ ಸೊಸೆಗೆ ಗಂಗವ್ವ ಈ ರೀತಿಯಾಗಿ 'ರತ್ನ ಹೊಸ ಸೀರಿ ಉಟಗೊಂಡು ಮುಸರೀ ತಿಕ್ಕಬಾರದು.'

'ಬೈಲಾಗ ಹರಕ ಸೀರಿ ಉಟುಗೊಂಡು ಕೂಡಲೇನು ಆಯ್ತು ನಾಳಿಂದ ಹಂಗ ಆಗಲಿ'[೧೦]

'ರತ್ನ, ಉಪ್ಪ ಈ ಕಡೆ ಹಾಕಬಾರದು'

ನೀವು ಹೇಳಿದ ಕಡೆ ಹಾಕತೇನಿ ನಡುವ ಸರಸಲೇನು?

'ರತ್ನ ಅಡಗೀ ಮನ್ಯಾಗ ಹಿಕ್ಕೋ ಬ್ಯಾಡ; ಅಡಿಗ್ಯಾಗ ಕೂದಲ ಬರತಾವ.' ಪಡಸಾಲ್ಯಾಗ ಅವರಕೂತಾರ ಅಲ್ಲೇ ಹಿಕ್ಕೊ ಅಂದರ ಹಿಕ್ಕೊತೇನಿ.''[೧೧] ಇಬ್ಬರ ನಡುವಿನ ಮಾತಿನ ಚಕಮಕಿ ನಡೆಯುತ್ತದೆ.

ಹೀಗೆ ಅತ್ತೆ ಸೊಸೆಂದಿರ ನಡುವಿನ ಮಾತುಗಳು ಅಸುಖಕರವಾದ ಕೊಂಕು ಸಂದೇಹ ಬಿಗುಮಾನದ ನುಡಿಗಳು, ಇಬ್ಬರ ನಡುವಿನ ಅಂತರ ಹೆಚ್ಚು ಮಾಡಿದವು. ರತ್ನಳ ಅನುಕೂಲಕ್ಕಾಗಿ ಕೊಟ್ಟ ಉಪದೇಶದ ಗಂಗವ್ವನ ಮಾತುಗಳು ದುಃಶಬ್ದಗಳೆಂದು ಭಾವಿಸಿ ಒಳಗೊಳಗೆ ಉರಿಯುವ ದ್ವೇಷದಿಂದ ಆಡಿದ ಕಿಡಿ ನುಡಿಗಳಾಗಿದ್ದವು. ಇದು ಧಾರವಾಡ ಪ್ರದೇಶದಲ್ಲಿ ಸಂಬಂಧಗಳಲ್ಲಿ ಆಗಾಗ ನಡೆದ ಘರ್ಷಣೆಯ ಮಾತುಗಳಾದ ಕೊಂಕುನುಡಿ, ಬಿಗುಮಾನ, ಸಂದೇಹಗಳು ಅಲ್ಲಿ ಕುಟುಂಬದಲ್ಲಿನ ಪ್ರಾದೇಶಿಕ ಕುರುಹುಗಳಾಗಿವೆ ಎನ್ನಬಹುದು. ಹೊಸದಾಗಿ ಬಂದ ಸೊಸೆ ತನಗೆ ಅವ್ವ, ಎಂದಾಗಲೇ 'ಅತ್ತೆ' ಎಂದಾಗಲೀ ಕರೆಯಲಿಲ್ಲ. ಕರೆಯುವ ಪ್ರಸಂಗ ಬಂದರೆ ಸಮೀಪಕ್ಕೆ ಹೋಗಿ ಗಟ್ಟಿಯಾಗಿ 'ಬೆಂಡಿಕಾಯಿ ಹೆಚ್ಚಲೋ ಹ್ಯಾಂಗ? ಒಲಿಗೆ ಉರಿ ಮಾಡಲೇನು? ಇತ್ಯಾದಿ ಕಿವುಡರಿಗೆ ಕೂಗುವಂತೆ ಕೂಗುತ್ತಿದ್ದಳು. ಇದರಿಂದ ಅಸಹನೆಗೊಂಡಿದ್ದಳು. ಅತ್ತೆ, ಅವ್ವ, ಎನ್ನುವ ಸಂಬೋಧನ ವಾಚಕ ಪದಗಳಾಗಿ ಬಳಕೆ ಹೆಚ್ಚಾಗಿ ಆ ಪರಿಸರದಲ್ಲಿರುವುದನ್ನು ಕಾಣುತ್ತೇವೆ.

ದೇಸಾಯಿರು ತಮ್ಮ ಕಿರಿಯ ಮಗನಾದ ಪುರುಷೋತ್ತಮನ ಶಿಕ್ಷಣದ ಬಗ್ಗೆ ವಿಚಾರಮಾಡುತ್ತ ಧಾರವಾಡದಲ್ಲಿನ ಮನೆಯಲ್ಲಿ ಇನ್ನೂ ಎರಡು ವರ್ಷ ಇರಬೇಕು ಎಂದು ಯೋಚಿಸುತ್ತಾ ''ಪುರುಷೋತ್ತಮನನ್ನು ಅಚ್ಯುತರಾಯನ ಕಡೆಗೆ ಮುಂಬೈ ಕಳಿಸಿಕೊಟ್ಟು ತಾವು ಸ್ವತಃ ದೇಶಗತಿಯ ಗ್ರಾಮಕ್ಕೆ ಹೋಗಬೇಕೋ ಹೇಗೆ'' ಎಂದು ಚಿಂತಿಸತೊಡಗಿದರು. ಆದರೆ ಈ ಚಿಂತೆಯಲ್ಲಿಯೇ ದಿನ ಕಳೆಯ ತೊಡಗಿದವು. ಶಹರದ ವಾಸಕ್ಕೆ ಒಮ್ಮೆ ಮೆಚ್ಚಿದ ಮೇಲೆ ಒಮ್ಮೆಲೆ ಕಿತ್ತುಕೊಂಡು ಹೋಗುವುದು ಆಗುತ್ತದೆಯೇ? ಅಂತು ಸುಗ್ಗಿ ಬಂದಿತು. ಸುಗ್ಗಿಗೆ ಗ್ರಾಮಕ್ಕೆ ಹೋಗುವ ನಿರ್ಧಾರ ಕೈಗೊಳ್ಳುತ್ತಾರೆ. ಏಕೆಂದರೆ ಒಮ್ಮೆ ಯಾವುದೇ ವ್ಯಕ್ತಿ ಒಂದು ಪ್ರದೇಶದ ಪರಿಸರಕ್ಕೆ ಹೊಂದಿಕೊಂಡು ಅಲ್ಲಿನ ಸಂಸ್ಕೃತಿಗೆ ಒಗ್ಗಿಕೊಂಡ ಮೇಲೆ ಆ ಪ್ರದೇಶದ ಅದರಲ್ಲಿಯೂ ಧಾರವಾಡದಂತ ಊರನ್ನು ಬಿಡಲು ಮನಸ್ಸಾಗದೇ ಹೋಗುವುದು. ಅಲ್ಲಿ ಎಲ್ಲ ತರಹದ ಸೌಲಭ್ಯಗಳು ದೊರಕುತ್ತದೆ. ಮುಖ್ಯವಾಗಿ ಹುಡುಗರ ವಿಧ್ಯಾಭ್ಯಾಸದ ಸಲುವಾಗಿ ಧಾರವಾಡಕ್ಕೆ ಮನೆಮಾಡಿ ಸುಗ್ಗಿಯ ಕಾಲಕ್ಕೆ ಹಳ್ಳಿಯಲ್ಲಿ ರೈತರ ಜೊತೆ ಹೊಲದ ವ್ಯವಹಾರಕ್ಕೆ ಅಣಿಯಾಗುತ್ತಿದ್ದರು. ಇತ್ತೀಚೆಗೆ ಹಳ್ಳಿಗೆ ವಸಂತನನ್ನು ಕಳಿಸುವ ಪ್ರಯತ್ನವು ನಡೆದಿತ್ತು. ಹೀಗಾಗಿ ದೇಸಾಯಿರ ಧಾರವಾಡದಂತ ಶಹರ ಊರು, ಅಷ್ಟು ಸುಲಭವಾಗಿ ಮನೆಯನ್ನು ಹಳ್ಳಿಗೆ ವರ್ಗಾಯಿಸುವ ಯೋಚನೆ ವಿಫಲವಾಯಿತೆಂದು ಹೇಳಬಹುದು. ಧಾರವಾಡದಲ್ಲಿ ಇರುವ ಯೋಚನೆ ಮಾಡಿ ಹಳ್ಳಿ ವ್ಯವಹಾರವನ್ನು ತಮ್ಮ ಮಗ ವಸಂತರಾಯನಿಗೆ ಒಪ್ಪಿಸುವರು.

'ವಸಂತರಾಯನ ಬಗ್ಗೆ ಏನಿಲ್ಲೊಂದು ಸುದ್ದಿಹದಿನೈದು ದಿನಕ್ಕಮ್ಮೆ ದೇಸಾಯಿರಿಗೆ ಮುಟ್ಟಿಯೇ ಇರುವುದು.'

'ರಾಮಗೌಡನೂ ದೊಡ್ಡ ಕಮತಿಗನು, ಪರೀಕ್ಷೆ ಪಾಸಾದ ಅವನ ಹಿರಿಯ ಮಗನಿಗೂ ಮೈಟ್ರಿಕ್ ನಪಾಸಾದ ವಸಂತನಿಗೂ ಬದ್ಧದ್ವೇಷ; ಅವರಿಬ್ಬರೂ ನಾಲ್ಕು ಬುಕ್ಕ ಓದಿದವರು ಇಬ್ಬರು ಸಿರಿವಂತರು ಇಬ್ಬರು ಕಮತಿಗರು.''[೧೨] ಶಿಕ್ಷಣ ಪ್ರಸಾರದಿಂದಾಗಿ ಅಲ್ಲಿ ವರ್ಗ ಸಂಘರ್ಷ ಯುವಕರಲ್ಲಿ ಆ ಕಾಲದ ಪರಿಸರದಲ್ಲಿ ಹುಟ್ಟಿಕೊಳ್ಳಲು ವಸಾಹತುಶಾಹಿಯ ಪ್ರಭಾವೆಂತೂ ಹೇಳಬಹುದು.

''ಕಿಟ್ಟಣ, ನಿ ಹೆದರಬ್ಯಾಡ ಪಾ, ಶಾಲಿಗ್ರಾಮ ನಮ್ಮ ಮುಖ್ಯದೇವರು. ಅವರು ಇರೂತನಕಾ ಅದರ ಮ್ಯಾಲ ಬಹಳ ಜೀವ ಇತ್ತು. ನೀ ಸಣ್ಣವ ಇದ್ದಿ ಅವರು ಹೋದಾಗ ಅವರ ಪೂಜಾದಾಗ ಹೆಚ್ಚು ಕಡಿಮೆ ಆಗಲಿ ಬಿಡಲಿ ಅಂತ ನಾನ ಬೇಕಂತ ಒಳಗ ಇಡಿಸಿದ್ದೆ. ಯಾ ದೇವರು ಸಿಟ್ಟಿಗೆ ಏಳೂದಿಲ್ಲ; ಭಕ್ತಿ ಇದ್ದರ ಎಲ್ಲ ದೇವರು ಶಾಂತ ಇರತಾರ, ನೀ ಏನೂ ಹೆದರಬ್ಯಾಡ.''[೧೩] ಒಂದು ಬ್ರಾಹ್ಮಣ ಸಮುದಾಯದ ಆಚಾರ, ವಿಚಾರ, ನಂಬಿಕೆ, ಸಂಪ್ರದಾಯಗಳು ಕೂಡ ಪ್ರಾದೇಶಿಕ ಪರಿಕಲ್ಪನೆಯನ್ನು ಕಟ್ಟಿಕೊಡುತ್ತವೆ.

'ಯಪ್ಪಾ ನಮಗ್ಯಾಕರೀ ತುರಂಗ'

'ಗೌಡರ, ಹೇಳ್ರಿ ಅವಗ, ಏನು ಮಾಡಯಾನ ಅನ್ನೋದ ಯಪ್ಪಾ ಏನು ಆಗೇತ್ಯೋ ನನಗ ಗೊಂತು ಆಗವಲ್ಲದರಿ.'[೧೪] ಅಪ್ಪಟ ಗ್ರಾಮೀಣ ಸೊಗಡಿನ ಭಾಷೆಯು ಧಾರವಾಡ ಶಹರದ ಭಾಷೆ ಭಿನ್ನವಾಗಿದ್ದು ಓದುಗರನ್ನು ಆಕರ್ಷಿಸಿದೆ.

'ಆ ಬೋಳ್ಯಾ ವೆಂಕ್ಯನ್ನೂ ಊರು ಬಿಟ್ಟ ಬಿಡಿಸಿ, ಅವನ ಟೊಂಕದಾಗಿರದು ಸುಲುಕೊಂಡೀ. ಅಷ್ಟಕ್ಕ ಅಕ್ಕನ ಕುತಿಗ್ಗೆ ಉರಲು ಬಿದ್ದೀತು ಅನ್ನೊ ಖಬರು ಇತ್ತೇನು? ನನ್ನ ಮನ್ಯಾಗ ರವಾ ಖಡ್ಡಿ ಬಂಗಾರ ಉಳೀಧಂಗ ಮಾಡಿದವನೂ ನೀನ..... ಕಡೇಕೆ ನನ್ನ ಗಂಡನ್ನ ನೀಗಿ ಇಟ್ಟೆ! ..... ಅವ್ವವ್ವವ್ವ ಜಗತ್ತಿನ್ಯಾಗ ಭಾಗದ್ಯಾರು ಇರತಾರಪಾ ಅದರ ನಿನಂಥವರು ಹಗಲು ದೀವಟಗಿ ಹಚ್ಚಿ ಹುಡುಕಿದರೂ ಸಿಗಲಿಕ್ಕಿಲ್ಲ ನೋಡು.''[೧೫]

ಈ ಪ್ರಸಂಗವನ್ನು ನೋಡಲಾಗಿ ಇಲ್ಲೂ ಕೂಡ ಗಂಗವ್ವನ ನೇರ ಮಾತುಗಳು ಹಸಿಗೋಡೆಯ ಮೇಲೆ ಹರಳು ಒಗೆದಂಗ ಇವೆ. ಇದರಲ್ಲಿ ಕೆಲವು ಪದಗಳು ಸುಲುಕೊಂಡೀ'-ಹಣವನ್ನು ಎತ್ತಿಕೊಂಡಿ, ಖಬರು-ಎಚ್ಚರ, ಭಾಗಾದ್ಯರು-ವೈರಿ, ದೀವಟಗಿ-ದೀಪಾ ಈ ಎಲ್ಲಾ ಮಾತುಗಳು ಅದೇ ಪರಿಸರದಲ್ಲಿ ಅದ್ದಿತೆಗೆದ ಗಟ್ಟಿಪಾಕದಿಂದಾದ ಪದಾರ್ಥಗಳು. ಶ್ರೀಮಂತರ ಮಕ್ಕಳಾದರೆ ರಾಯ ಪದ ಬಳಕೆ ಬಳಸಿದ್ದು, ಕೂಡ ಇಲ್ಲಿ ಗಮನಿಸಬಹುದಾಗಿದೆ.

''ಟಾಂಗಾ ಹೋದ ಮೇಲೆ ಕಿಟ್ಟಿ ಇನ್ನೂ ಮನೆಗೆ ಹೋಗಬೇಕೆಂಬ ವಿಚಾರದಲ್ಲಿದ್ದಾಗ, ತನ್ನ ಹಿಂಸೆಯಿಂದ 'ಹೋ' ಎಂದು ಕಿರಿಚಿದ ಬಾಲಕನು ಅವನ ಅಂಗಿಯನ್ನು ಜಗ್ಗಿ 'ಮಾಮಿ ಕರದಾಳ' ಎಂದನು.

'ಯಾವ ಮಾಮಿ'? ಕಿಟ್ಟಿ ಕೇಳಿದ

'ನಮ್ಮ ಮಾಮಿರಿ'[೧೬]

ಈ ಮೇಲಿನ ಪ್ರಸಂಗದಿಂದಲೂ ಆ ಪ್ರದೇಶದಲ್ಲಿ ರೂಢಿಯಲ್ಲಿರುವ ಮಾಮಿ, ಮಾಂಶಿ, ಕಾಕೂ, ಕಾಕಿ ಪದಗಳನ್ನು ಅಲ್ಲಲ್ಲಿ ಕಾಣಸಿಗುತ್ತವೆ.

'ಕಿಟ್ಟಿ ಬೀದಿಯಿಂದ ಮರಳಿದಾಗ 'ರಾಘುಪ್ಪ ಮಾಮ' ಎಂದು ತಾನೇ ರಚಿಸಿದ ಹೆಸರು ಅವನ ಕಿವಿಯಲ್ಲಿ ಸವಿ ನುಡಿಯುತ್ತಿತ್ತು.' ಇಲ್ಲಿ ಕೂಡ 'ಮಾಮ' ಪದದ ಬಳಕೆಯು ಸಾಂದರ್ಭಿಕವಾಗಿ ಬಳಕೆಯಾಗಿರುವುದು ಇಲ್ಲಿ ನೋಡಬಹುದಾಗಿದೆ.

ಮನೆಗೆ ಸಂಬಂಧಿಕರು, ಸೌಹಾರ್ದಯುತ ಭೇಟಿಯಲ್ಲಿ ನಡೆಯುವ ಸಾಮಾನ್ಯ ಮಾತುಕತೆ ರಾಘುಪ್ಪ ನಗುತ್ತಾ ಗಂಗಕ್ಕ, ಇತ್ತಿತ್ತಲಾಗ ನಮ್ಮದು ಗಟ್ಟಿಗತನಾ ಹೋಗೆದ ನೀ ನೋಡಿದಾಗ್ಯೂ ಈಗ್ಯೂ ರಗಡ ಫರಕ ಆಗೇದ. ಒಂದು ಚಹ, ಒಂದು ತಂಬಾಕು ಯಾವಾಗರ ಬೇಕಾತಾವ. ಆದರ ಚಹ ತೊಗೊಂಡು ಬಂದೇನಿ; ಈಗ ಒಲ್ಲೆ. ಮೇಲಾಗಿ ನಿನ್ನದು ಕಿಟ್ಟಣ್ಣನದು ಭೆಟ್ಟಿ ಆತ್ಯು, ಇದ ಚಹದಕ್ಕಿಂತಲೂ ಮೇಲು

ಆತ್ತು, ಎಂದನು. ಚಹವನ್ನು ಸ್ವೀಕರಿಸದಿದ್ದರೂ ನಿನ್ನದು, ಕಿಟ್ಟಣನದೂ ಬೆಟ್ಟಿಮುಖ್ಯ ಎಂದು ಹೇಳುವ ಸೌಹಾರ್ದಯುತ ಮಾತುಗಳು ಹೆಚ್ಚಾಗಿ ಧಾರವಾಡ ಪರಿಸರದಲ್ಲಿ ಆಡತಕ್ಕಂತ ಮಾತುಗಳೇಯಾಗಿದ್ದವು.

ನಾಲ್ವತ್ತನೇಯ ವರ್ಷಕ್ಕೆ ಪತಿಯನ್ನು ಕಳೆದುಕೊಂಡ, ಒಬ್ಬ ವಿದವೆಯಾಗಿ, ತನ್ನ ಒಬ್ಬನೇ ಒಬ್ಬ ಮಗ ಕಿಟ್ಟಿಗಾಗಿ ಒಂಟಿ ಜೀವನದ ಯಾತ್ರೆಯಲ್ಲಿ ಬಡತನವನ್ನು ಅನುಭವಿಸಿದವಳು. ದುಡಿಯುವ ಕೈ ಕಣ್ಮರೆಯಾದ ಮೇಲೆ ಮನೆತನದ ಗತಿ ದೇವರೆ ಬಲ್ಲ! ತಾನು ಅರವಟ್ಟಿಯುಂಡು ಅವನಿಗೆ ಉಣಿಸಿದಳು. ತಾನು ಹೆರವರಲ್ಲಿ ಅಡಿಗೆಮಾಡಿ ಕಿಟ್ಟಿಯನ್ನು ಶಾಲೆಗೆ ಕಳಿಸಿ, ಮಾಮಲೇದಾರ ಕಚೇರಿಯಲ್ಲಿ ಕೆಲಸವೂ ದೊರಕಿತು ಆದರೂ ಬಡತನವು ಕ್ರಮೇಣ ಕಡಿಮೆಯಾದರೂ, ನೆಮ್ಮದಿಯಿಲ್ಲ.

'ನಿನ್ನೆ ಶನಿವಾರ ಹನುಮಂತ ದೇವರಿಗೆ ಒಡೆಸಿದ ತೆಂಗಿನ ಕಾಯಿಯ ಬುಡಕ್ಕೆ ಇನ್ನೂ ತುಸುಕೊಬ್ಬರಿ ಹತ್ತಿ ಕೊಂಡಿತ್ತು. ಅದನ್ನೆಲ್ಲ ಎಬ್ಬಿ ತೆಗೆದಳು. ಒಳಗಿದ್ದ ಪುಠಾಣಿ ಹೊರ ತೆಗೆದಳು. ಕಿಟ್ಟಿ ಅಡ್ಡಾಡಿ ಬರುವಷ್ಟರಲ್ಲಿ ಅವಳು ಚಪಾತಿಗೆ ಅತ್ಯುತ್ತಮ ಕೊಬ್ಬರಿಯ ಚಟ್ನಿಯನ್ನು ತಯಾರಿಸಿ ಇಟ್ಟಿದ್ದಳು. ಕಿಟ್ಟಿ ಬಂದವನೆ ಸಂಧ್ಯಾವಂದನೆ ಮುಗಿಸಿ ಊಟಕ್ಕೆ ಕುಳಿತನು.''೯೭

ತೆಂಗಿನ ಕಾಯಿಯ ಬುಡಕ್ಕೆ ಅಂಟಿದ ಕೊಬ್ಬರಿ ಕಿತ್ತು ತೆಗೆದು ಅದಕ್ಕೆ ಪುಟಾಣಿಯನ್ನು ಬೆರಸಿ ಚಟ್ನಿ ತಯಾರಿಸುವ ಪರಿ, ಇವಳ ಮನೆಯಲ್ಲಿ ಸಾಮಾನು ಕೊರತೆಯನ್ನು ಹೇಳುತ್ತದೆ. ಅದರಲ್ಲಿಯೇ ಒಂದು ರುಚಿಕರ ಕೊಬ್ಬರಿ ಚಟ್ನಿ ತಯಾರಿಸುವುದನ್ನು ನೋಡಬಹುದಾಗಿದೆ. ಅದಕ್ಕೆ 'ಬಡವರ ಮನಿ ಊಟ ಚಂದ ಶ್ರೀಮಂತರ ಮನೆ ನೋಟ ಚಂದ' ಎನ್ನುವ ಗಾದೆಯನ್ನು ಇಲ್ಲಿ ನೆನಸಿಕೊಳ್ಳಬಹುದಾಗಿದೆ.

ಹೀಗೆ ಬಡತನವನ್ನು ಅನುಭವಿಸಿದ ಗಂಗವ್ವ ಅದಕ್ಕೆ ಕಾರಣನಾದ ವ್ಯಕ್ತಿಯು ರಾಘಪ್ಪವೆಂದು ಹೇಳಿ, ಕಿಟ್ಟಿಯ ಮುಂದ ಮಾಡಿದ ಪ್ರಸ್ತಾಪ ಈ ರೀತಿಯಾಗಿ

''ಇಂವನಿಂದಲೇ ನಮಗ ಈ ಬಡತನ ಬಂದದ್ದು ಕಿಟ್ಟಣ್ಣ, ನಾವು ಬಡವರು ಅಂತಿಯೇನು? ಅಲ್ಲಪ್ಪಾ. ಇಕಾ ನಾನು ಶೇರು ಬಂಗಾರ ಮೈಮ್ಯಾಲ ಇಟ್ಟುಕೊಂಡಕಿ ಇದ್ದೇನಿ ನಾ ಗೋಟು ಪಾಟ್ಲಿ ಎಲ್ಲಾ ಇಟಗೊಂಡರ ಕೈ ಹೀಂಗ ಮ್ಯಾಲ ಎತ್ತಲಿಕ್ಕೆ ಆಗತಿದ್ದಿಲ್ಲ. ವರ್ಷಲಕ್ಷ್ಮಿ ನಾರಾಯಣನ ದರ್ಶನಕ್ಕ ಈ ಪೋದ್ದಾರ ಲಕ್ಷ್ಮಿಂಬಾಯಿ ನಾನೂ ಕೂಡೇ ಹೋಗುತ್ತಿದ್ದಿವಿ, ಅವರ ಡಮಣ್ಯಾಗ, ಅದನ್ನೆಲ್ಲಾ ಆಕಿ ನೋಡ್ಯಾಳ ಅಂತ ನನ್ನ ಕಂಡರ ಆಕಿ ಅಷ್ಟು ಅಂತಃಕರಣ ಹಚ್ಚಿಗೊಂಡಾಳ ಹೋಗಲಿ ಬಿಡು ಈಗ ಅದನ್ನು ನೆನಸಿ ಏನ ಉಪಯೋಗ?''೯೮

ತನ್ನ ಶ್ರೀಮಂತಿಕೆಯ ದಿನಗಳ ಚಿತ್ರಣವನ್ನು ಬಿಚ್ಚುತ್ತಾ ಶ್ರೀಮಂತಿಕೆಯಲ್ಲಿ ಇದ್ದಾಗ ಇದ್ಯಾ ರಾಘ್ಯಾ 'ಹೊಲಾ ಒತ್ತಿ ಬಿದ್ದಾವ ಐನೂರು ರೂಪಾಯಿ ಸಾಲ ಕೊಡಿರಿ ಎರಡು ಹೋಲಾನಾರ ಬಿಡಿಸಿಗೋತೇನಿ' ಅಂತ. ನಿಮ್ಮಪ್ಪನಿಗೆ ಎದುರಿಗೆ ಮೂಗು ತಿಕ್ಕುತ್ತಿದ್ದ. ಇವರ ಮನಸ್ಸು ಭಾಳ ದೊಡ್ಡದು ಏನು ಮಾಡುದು

ಕಿಟ್ಟಿಣ, ಹೀಗೆ ಹೇಳುತ್ತಾ ತನ್ನ ಗಂಡನ ಆಗಾಗ್ಗೆ ನೆನಸಿಕೊಂಡು ಅಳುತ್ತಿದ್ದಳು. ಅವರು ಇದ್ದರ ಕಿಟ್ಟಣ್ಣನಿಗೆ ಕನ್ಯವನ್ನು ನೋಡುತ್ತಿದ್ದರು. ಈ ನೀಚ ರಾಘುಪ್ಪ ಐನೂರು ರೂಪಾಯಿ ಕೊಟ್ಟು, ಒಂದು ಜಮೀನು ಬಿಡಿಸಿ ಕೊಟ್ಟ ಮ್ಯಾಲ ಮುಂದ ಇವನ ಭರಭರಾಟ ಸುರುವು ಆತ್ಯಾ, ನನ್ನ ಗಂಡ ಸ್ವಾಮಿರಾಯ ಆಗ ಕೆಲವು ದಿನಾ 'ನಿನ್ನ ಹೇಣ್ತಿಗೆ ಎರಡು ಕಿರಿಗಿ ತೋಗೋ ಅಂತ ಕೈ ಎತ್ತಿ ಕೊಟ್ಟಾಗ ಆಕಿ ಹೊಸ ಸಿರಿ ಕಾಣಬೇಕು ಇಂಥಾ ದಿನಾನೂ ಇದ್ದವು..... ಕಡೆಕೆ ಆ ಉಪಕಾರ ತೀರಿಸಿದನಲ್ಲ....... ತಮ್ಮಂತ, ತಮ್ಮ! ಪೂರ್ವಜನ್ಮದ ಭಾಗರಿ!''[೧೯]

ಗಂಗವ್ವಳ, ಸ್ಥಿತಿವಂತಳು ಇದ್ದಾಗ ಇವಳ ಗಂಡ ಸಾಕಷ್ಟು ಇನ್ನೊಬ್ಬರಿಗೂ ಸಹಾಯ ಮಾಡುವ ಧಾರಾಳ ಗುಣ ಸ್ವಾಮಿರಾಯರಲ್ಲಿತ್ತು. ತಮ್ಮ ಬಂಧು ಬಳಗದವರಿಗೆ ಸಹಾಯ ಕೇಳಿ ಬಂದರೂ ಇಲ್ಲವೆನ್ನುವ ವ್ಯಕ್ತಿಯಾಗಿರಲಿಲ್ಲ. ಸುಃಖವೇ ಇರಲಿ, ಕಷ್ಟವೇ ಇರಲಿ ಹಂಚಿಕೊಂಡು ತಿನ್ನುವ ಮಾನವೀಯ ಸ್ವಭಾವ ಆ ಪ್ರದೇಶದಲ್ಲಿನ ಕುಟುಂಬದ ಅನ್ಯೂನ್ಯತೆ ತಿಳಿಸುತ್ತದೆ. ಇದು ಧಾರವಾಡ ಪ್ರದೇಶದಲ್ಲಿ ಹೆಚ್ಚಾಗಿ ಕಾಣುತ್ತವೆ. ಮತ್ತು ಏನೇ ಜಗಳ ನಡೆದರೂ ರಕ್ತ ಸಂಬಂಧಗಳು ಒಂದಾಗಿ ತಮ್ಮ ಜೀವನ ನಡೆಸುತ್ತವೆ. ಎನ್ನುವುದಕ್ಕೆ ಗಂಗವ್ವಳೇ ಇಲ್ಲಿ ಸಾಕ್ಷಿಯಾಗಿ ನಿಲ್ಲುತ್ತಾಳೆ. ಅಂತಹ ವೈರುಧ್ಯವನ್ನು ಬೆಳಸಿಕೊಂಡು ತನ್ನ ತಮ್ಮ ರಾಘುಪ್ಪನು ತನ್ನ ಬಡತನಕ್ಕೆ ಕಾರಣವಾದರೂ ಕೂಡ ಕೊನೆಗೆ ಅವನ ಮಗಳನ್ನು ತನ್ನ ಸೊಸೆಯಾಗಿಸಿಕೊಳ್ಳುತ್ತಾಳೆ. ಇದು ಧಾರವಾಡ ಪ್ರದೇಶದ ಅಂತಃಕರಳು ಎನ್ನುವ ಅರ್ಥದಲ್ಲಿ ಬಳಕೆಯಾಗುವಂತದ್ದು, ಎಂಬುದನ್ನು ಈ ಕಥೆಯಲ್ಲಿ ಕಂಡು ಕೊಳ್ಳುತ್ತವೆ.

''ಗಂಗವ್ವನು ಕಿಟ್ಟಿಯ ಇನ್ನೊಬ್ಬ ಸೋದರಮಾವ ಇದ್ದಾನ ರಾಘುಪ್ಪನಿಕ್ಕಿಂತ ಚಿಕ್ಕವನು ಎಲ್ಲಿ ಇದ್ದಾನು ಎಲ್ಲಿ ಸತ್ತಾನೂ ಅವನ ಪತ್ತೆ ಇಲ್ಲ. ಹತ್ತು ವರ್ಷ ಆತು ಸ್ವಲ್ಪ ಅರಹುಚ್ಚನಾದರೂ, ಮನಸ್ಸಿನಲ್ಲೇ ಒಳ್ಳೆಯವನು. ದೇವರೂ ಅಂದರೆ ಅತಿಭಕ್ತಿ ಇನ್ನೊಬ್ಬರ ಬಿಟ್ಟು ಒಂದು ಕಲಸಕ್ರಿ ಹಳಕು ತಿನ್ನುವನಲ್ಲ ಏನು ಎಲ್ಲಾ ನಮ್ಮ ಮನೆತನದ ದುರ್ಬೀಜ ಅಂದರ ಈ ರಾಘ್ಯನ'....[೨೦] ವೆಂಕಟಿಚ್ಚ ಸ್ವಲ್ಪ ಹುಚ್ಚ, ಅಷ್ಟು ನಾಕು ಬುಕ್ಕ ಕಲಿತ್ತಿದ್ದ, ಯಾರೋ ಚಾಷ್ಟಿಲೇ ನಿನ್ನ ಲಗ್ನ ಮಾಡಿ ಬಿಡತೇವಿ ಎಂದಾಕ್ಷಣ ಮನಿ ಬಿಟ್ಟು ಓಡಿ ಹೋಗಿ ಬಿಟ್ಟ ಯಾರಿಗೂ ತಿಳಿಸಿದ್ದಿಲ್ಲಾ. ಹೋದರ ಹೋಗಲಿ ಹಿಸೆ ಕೊಡೋದು ತಪ್ಪತರಿ ಅಂತ ಈ ರಾಘ್ಯ ಅವನ ದಶಿಂದ ಒಂದಿಷ್ಟು ವಿಚಾರ ಮಾಡದೇ ಇಲ್ಲೆ ಧಾರವಾಡದಲ್ಲಿ ಉಳಿದುಕೊಂಡು ಒಂದು ಉದ್ಯೋಗ ಮಾಡಿಕೊಂಡ ಮನಿ ಮಾಡಿದ, ಎಂದು ಗಂಗವ್ವ ಕುಟುಂಬದ ಸಿರಿತನ ಬಡತನಗಳ ಸ್ವಭಾವ ಗುಣದೋಷಗಳ ಬಗೆಗಿನ ವಿಚಾರಗಳನ್ನು ತಿಳಿಯ ಪಡಿಸಲು ಯತ್ನಿಸಿದಳು ಎನ್ನುವುದನ್ನು ಗಮನಿಸಲಾಗಿದೆ. ಇದು ಒಂದು ವಾಸ್ತವ ಚಿತ್ರವು ಕೂಡ ಪ್ರಾದೇಶಿಕ ಮಾನದಂಡವಾಗಿ ಗೋಚರಿಸುತ್ತದೆ.

''ಆತ್ಯ.... ಮುಂದ ಆಗೋದೆಲ್ಲಾ ಆತ್ಕು. ಆ ಜಾಮೀನ ಆದ ತುಪ್ಪಿಗೆ ಇವರು ತಮ್ಮ ಆಸ್ತಿ ಮನಿ ಕಳಕೊಂಡರು ಮನ್ಯಾಗಿನ ಚೆಂದಾ ಚಂದದ ಸಾಮಾನ ಚಿಲ್ಲರ ಕಿಮ್ಮತ್ತಿಗೆ ಲಿಲಾವು ಆಗಿಹೋದವು. ಎಲ್ಲಾ

ಮನಿ ತೊಳೆದು ಹೋತ್ತು... ಆಗಷ್ಟು ಒಂದ ರಾಘ್ಯಾ ಅತ್ತಂಗ ಮಾಡಿದ, ಏನೇನೂ ನಾಟಕಾನ ಮಾಡಿದಾ, ಅದೆಲ್ಲಾ ಅವರಿಗೆ ಸೇರಿಕೆ ಬರಲಿಲ್ಲ. ಮುಂದ ಅದ ಹೃದ್ರೋಗ ಹತ್ತಿ ನವದು ನವದು. ಕಡೀಕೆ ಇವರು...ಹುಂ...ಹುಂ[೨೧]

ಹೀಗೆ ಗಂಗವಳು ತನ್ನ ಮನೆ ಅದೋಗತಿ ಇಳಿದು, ಗಂಡನು ಕೂಡ ಅವಳಿಂದ ದೂರವಾದನು. ಮನೆಯನ್ನೂ ತೊಳೆದು ಹಾಕಿದ ಈ ರಾಘುಪ್ಪ, ಎಂದು ಅವಳು ಹತ್ತವರ್ಷಗಳಿಂದ ಅದನ್ನು ಒಂದು ಸವಾಲಾಗಿ ಸ್ವೀಕರಿಸಿ ತಾನು ಒಂಟಿಯಾಗಿ ಎಲ್ಲವನ್ನು ನಿಭಾಯಿಸ ಬಲ್ಲೆ ಎಂಬ ಹಟದಿಂದಲೇ ಜೀವನದ ಯಾತ್ರೆಯನ್ನು ಸಾಗಿಸಿಕೊಂಡು ಬಂದವಳು. ಧಾರವಾಡ ಪ್ರದೇಶದಲ್ಲಿಯೂ ಆಗಿನ ಕಾಲದಲ್ಲಿ ವಿಧವೆಯರು ತಮ್ಮ ಜೀವನವನ್ನು ತಮ್ಮ ಮಕ್ಕಳ ಸಲುವಾಗಿ ನಡೆಸಿದ ಹೋರಾಟಗಳು ಕಾಣಸಿಗುತ್ತವೆ. ಅನೇಕ ಕುಟುಂಬದ ಚಿತ್ರಣವನ್ನು ಇಲ್ಲಿ ಲೇಖಕರು ತಿಳಿಸಲು ಯತ್ನಿಸುವಲ್ಲಿ ಕಾದಂಬರಿಯನ್ನು ಚೆನ್ನಾಗಿ ಉಪಯೋಗಿಸಿಕೊಂಡಿರುವರು. ಅದೇ ರೀತಿ ನಾಟಕೀಯ ಸ್ವಭಾವದ ವ್ಯಕ್ತಿಗಳಾದ ರಾಘುಪ್ಪ ನಂತರವರು ಈ ಕಥೆಯಲ್ಲಿ ಕಳನಾಯಕರಂತೆ ಗೋಚರಿಸುವಂತಾಗಿದೆ. ತಮ್ಮ ಕೆಲಸವಾಗಬೇಕಾದರೆ ಯಾವ ಕೆಲಸ ಮಾಡಲು ಹಿಂಜರಿಯದ ರಾಘುಪ್ಪ ತನ್ನ ಮಾತುಗಳನ್ನು ಬಂಡವಾಳ ಮಾಡಿಕೊಂಡು ಆ ಕುಟುಂಬದ ಬಡತನಕ್ಕೆ ಕಾರಣವಾಗುತ್ತಾನೆ. ತಾನು ಮಾತ್ರ ಶ್ರೀಮಂತನಾಗಿ ಉಳಿಯುತ್ತಾನೆ. ಎಂದು ಹೇಳುವುದನ್ನು ಗಂಗವವ್ವನ ಮಾತಿನಲ್ಲೇ ಗ್ರಹಿಸುವುದಾರೆ.

"ಇರಲಿ ಏಳು, ಅಳೋದು ಆಗೇದ: ಆಗೇದ ಇನ್ನೇನು ಅದನ್ನೆಲ್ಲಾ ತೊಗೊಂಡು ಮಾಡೋದು? ಮುಂದ ಒಂದು ವರ್ಷದಾಗ ಈ ರಾಘ್ಯಾ ಧಾರವಾಡ ಬಿಟ್ಟು ಬಿಂದಗೋಳಕ್ಕಾ ಇರಲಿಕ್ಕೆ ಹೋದ: ಅಲ್ಲಿ ಹೂಲಾ ಬಿಡಿಸಿಕೊಂಡು ಶ್ರೀಮಂತ ಆದ ಈಗ ನಮಗೆ ತನ್ನ ದೌಲತ್ತು ತೋರಿಸಿ ನಮಗ ಹಂಗ ಸಲಿಕ್ಕೆ ಬಂದಾನ"[೨೨]

ಹೀಗೆ ಗಂಗವ್ವ ಒಟ್ಟಾರೆ ರಾಘುಪ್ಪ ಸಾಚಾ ಅಲ್ಲವೆನ್ನುವುದನ್ನು ನಿರ್ಧರಿಸಿ, ಅವನ ತಂಟೆಗೆ ಹೋಗಬ್ಯಾಡ ಎಂದು ಕಿಟ್ಟಿಯನ್ನು ಎಚ್ಚರಿಸಿದಳು. ಹೀಗೆ ತಮ್ಮ ಭೂತಕಾಲದ ಚಿತ್ರಣದಲ್ಲಿ ಬಡತನ, ಸಿರಿತನಗಳ ಏರುಪೇರುಗಳು, ಅದಕ್ಕೆ ಕಾರಣ ಕಾರಣನಾದ ವ್ಯಕ್ತಿ, ಹೀಗೆ ಹಲವು ವಿಚಾರಗಳ ಬದುಕಿನ ಪ್ರಸ್ತಾಪವನ್ನು ಕಿಟ್ಟಿಯ ಮುಂದೆ ಇಡುತ್ತಾಳೆ. ಹೀಗೆ ಧಾರವಾಡ ಪರಿಸರದ ಬಡತನ ಸಿರಿತನಗಳು ಬದುಕಿನ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

ತಾಯಿ ಮಗ ಇಬ್ಬರು ಅನೇಕ ಸಂಗಾತಿಯ ವಿಚಾರಗಳನ್ನು ವಿನಿಮಯ ಮಾಡಿಕೊಂಡ ಮೇಲೆ ತಾಯಿಯ ಬಗ್ಗೆ ಉತ್ಕಟ ಆಧರ ಅವನಲ್ಲಿ ಹುಟ್ಟಿತು. ಅದಕ್ಕಾಗಿ ತಾಯಿಯ ನಿರ್ಣಯದ ವಿರುದ್ಧ ಕಿಟ್ಟಿ ನಿಲ್ಲುವುದು ಅಸಾಧ್ಯ. ಅವ್ವ ಹಳೆಯ ಪೀಳಿಗೆಯ ಏಳು ತಾನು ಹೊಸ ಪೀಳಿಗೆಯವ, ಒಂದೊಂದು ಪೀಳಿಗೆಗೂ ಒಂದೊಂದು ಸಮಸ್ಯೆ ಇರುತ್ತದೆ. ಕಾಲ ಬದಲಾದಂತೆ ನಿತ್ಯ ಜೀವನದಲ್ಲಿ ವ್ಯತ್ಯಾಸವನ್ನು ಕಾಣುತ್ತವೆ.

ಹಳೆಪೀಳಿಗೆ ಸಮಸ್ಯೆಗಳು ಒಂದು ರೀತಿಯಾದರೇ ಹೊಸ ಪೀಳಿಗೆಯ ಕಿಟ್ಟಿಯು ಲಗ್ನದ ವಿಚಾರದಲ್ಲಿ ಅನೇಕ ಗೊಂದಲಗಳಲ್ಲಿ ತಾಳುತ್ತಾನೆ. ಕಿಟ್ಟಿಗೆ ಲಗ್ನವೆಂದರೆ ಭೀತಿ ಕಿಟ್ಟಿಯು ಎದುರಿಸಬೇಕಾದ ಸಮಸ್ಯೆಗಳು ಅನೇಕ. ಹಣವು ಹೊಸ ಮನುಷ್ಯತ್ವವನ್ನು ತುಂಬ ತೊಡಗಿತು. ಬದಲಾದ ಜಗತ್ತಿನಲ್ಲಿ ಕ್ಷಣ, ಕ್ಷಣಕ್ಕೆ ಬದಲಾಗುತ್ತಿದ್ದ ಕೊನೆಗೂ ತನ್ನ ಲಗ್ನದ ವಿಷಯದಲ್ಲಿ ಬುದ್ದಿಹೇಳಿ, ಎಲ್ಲರ ಜೀವನದಲ್ಲಿ ಲಗ್ನ ಅವಶ್ಯಕ, ಇಂದಿಲ್ಲ ನಾಳೆ ಆಗ ತಕ್ಕದ್ವೇ ಎಂದು ತಿಳಿ ಹೇಳಿದರು. ಹೀಗೆ ಹಳೆಯ ಮತ್ತು ಹೊಸ ಪೀಳಿಗೆಯ ಹೇಳಾಲಾಗದ ಗೊಂದಲ ಕಿಟ್ಟಿಯ ಮನದಲ್ಲಿ ಸುಳಿದಿರುವುದನ್ನು ಕಾಣುತ್ತೇವೆ. ಅವ್ವನ ಹಳೆ ಪೀಳಗೆಗೂ ತನ್ನ ಹೊಸ ಪೀಳಿಗೆಗೂ ಒಂದೊಂದು ಸಮಸ್ಯೆ. ಮತ್ತು ಅವ್ವ ನಿನ್ನ ಉಪಕಾರ ದೊಡ್ಡದು. ಆದರೆ ನನಗೂ ಒಂದು ವ್ಯಕ್ತಿತ್ವ ಇಲ್ಲ ಏನು? ನನ್ನ ಆಶಾ ಆಕಾಂಕ್ಷಕ್ಕೆ ಒಂದು ಬೆಲೆ ಇರಬಾರದೇನು? 'ನಾ ಏನು ಈಗ ನಿನ್ನ ಕೈಯಾಗಿ ಗೊಂಬಿಯಲ್ಲ, ಈ ಹಳೆಯ ಹೆಂಗಸರಿಗೆ ಈ ತರುಣ ಪೀಳಿಗೆಯ ನಡತಿ ತಿಳಿಯುವುದಿಲ್ಲ ಎಂಬಂತಹ ನಿಲುವುಗಳನ್ನು ಹೊಂದಿದವರು. ಹೆಚ್ಚಿನ ಹಣಗಳಿಸುವುದನ್ನು ಹೇಳಿದರೆ ಇತರರು ಬೇಡಿಯಾರೆಂದೋ ಕಿಟ್ಟಿಯ ಯೋಜನೆ, ಹೀಗಾಗಿ ಕಛೇರಿಯಲ್ಲಿ ಬ್ರಷ್ಟಾಚಾರಕ್ಕಿಳಿದು ಹಾಗೂ ತಮ್ಮನ್ನು ಸದಾ ಒಂದಲ್ಲ ಒಂದು ರೀತಿಯಲ್ಲಿ ಧಮನಿಸುವ ಶಕ್ತಿಗಳ ವಿರುದ್ಧ ಹೋರಾಡಿದವರು ಇಲ್ಲಿಯ ಮಹಿಳೆಯರು ತಾವು ಸಾಕಿ ಬೆಳಸಿದ ವೃಕ್ಷ, ಇಂದು ಫಲನೀಡುವಾಗ ಬೇರೊಬ್ಬರು ಕದ್ದೊಯ್ಯಲು ಇವರು ಖಂಡಿತ ಬಿಡಲಾರರು. ತಮ್ಮ ಹತೋಟಿಯಲ್ಲಿಯೇ ಮಕ್ಕಳಿರಬೇಕು ತಾವು ಹೇಳಿದಂತೆಯೇ ಕೇಳಬೇಕೆಂಬ ನಿಲುವು. ಇದಕ್ಕಾಗಿ ಗಂಗವ್ವ ಕಿಟ್ಟಿಯನ್ನು ತನ್ನ ಇಷ್ಟದಂತೆ ನಡೆದುಕೊಳ್ಳಲು ಬಿಡಳು, ರತ್ನಳ ಬಗ್ಗೆ ಗೌರವವಿದ್ದರೂ ವಿವಾಹಕ್ಕೆ ಒಪ್ಪಿಗೆ ಕೊಡಲು ಸತಾಯಿಸುವಳು, ಚತುರ್ಭುಜರಾದ ಮೇಲೆ ಸ್ವತಂತ್ರ್ಯರಾಗಿ ಇರಲು ಬಿಡಲಿಲ್ಲ. ಏಕಾಂತದಲ್ಲಿ ಪರಸ್ಪರ ಮಾತಾಡಿಕೊಳ್ಳುವುದು. ಲೈಂಗಿಕ ಬಯಕೆ ಇಡೇರಿಸಿಕೊಳ್ಳುವುದು. ಅನವಶ್ಯಕ ಹಣವನ್ನು ವ್ಯಯಿಸುವುದು ಮುಂತಾದ ಸಂಗತಿಗಳನ್ನು ಮನಃಪೂರ್ವಕವಾಗಿ ಮತ್ತೊಬ್ಬ ಸ್ತ್ರೀ ಸಹಿಸಲಾರಳು ಎಂಬುದಕ್ಕೆ ಗಂಗವ್ವನೇ ನಿದರ್ಶನವಾಗಿದ್ದಾಳೆ.

ಅದೇ ರೀತಿ ವಸಂತ ಮತ್ತು ದೇಸಾಯಿರ ಮಧ್ಯ ಇರತಕ್ಕ ಸ್ವಭಾವ, ನಡತೆಯಲ್ಲಿ, ಸಾಕಷ್ಟು ವ್ಯತ್ಯಾಸವನ್ನು ಗೊಂದಲಮಯ ವಾತವರಣವು ಇರುವುದು. ವಸಂತನ ಶಿಕ್ಷಣದಲ್ಲಿ ನಡೆದ ಸಂಗತಿಯಿಂದ ಕಂಡು ಕೊಳ್ಳಬಹುದಾಗಿದೆ. ಇದುವೇ ಆ ಕಾಲದ ಪ್ರದೇಶಿಕ ಬದುಕಿನ ಸ್ಥಿತ್ಯಂತರವೆಂದು ಹೇಳಬಹುದಾಗಿದೆ. ಎರಡು ಪೀಳಿಗೆಯ ವೈರುದ್ಯಗಳವೆಂತಲೂ ಗುರುತಿಸಬಹುದಾಗಿದೆ. ವಸಂತನು ಶಾಲೆಗೆ ಸರಿಯಾಗಿ ಹೋದರೂ ಶಿಕ್ಷಣದಲ್ಲಿ ಆಸಕ್ತಿ ತೋರಿಸದೇ ಶಾಲಾವರ್ಗದಲ್ಲಿ ಏನಾದರೂ ಒಂದು ಗಲಾಟೆಯನ್ನು ಮಾಡಿಕೊಂಡು ಬರುವನು. ವಸಂತನ ವರ್ತನೆ ಸರಿಯಾಗಿ ಇರದಿದ್ದರೂ ಶಿಕ್ಷಕರು ತಕರಾರು ಮಾಡುವ ಅಘಾತಕ್ಕೆ ಹೋಗಲಿಲ್ಲ. ಶಿಕ್ಷಕರಿಗೆ ಎದರು ಉತ್ತರ ಕೊಡುವುದು ಬೇಕಾದಾಗ ಶಾಲೆಗೆ ಬರುವುದು.

ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಅನುತ್ತೀರ್ಣವಾದರೂ ತಾನೇ ಶಾಲೆಯ ಲಾಯಿಫ್‌ಮೆಂಬರ್, ಎಂಬಂತೆ ವರ್ತಿಸ ತೊಡಗಿದ, ಅವರ ತಂದೆ ದೇಸಾಯಿರು ಶಾಲೆಯ ಬುನಾದಿ ಕಾಲದಿಂದಲೂ "ಡೋನಾರ್' ಮ್ಯಾನೇಜಿಂಗ್ ಕಮಿಟಿಯ ಚುನಾವಣೆಯ ಒಂದು ವೋಟು ಇದ್ದಿತಾದ್ದರಿಂದ ಶಿಕ್ಷಕರು ವಸಂತನ ಬಗ್ಗೆ ಯಾವುದೇ ತಕರಾರು ಮಾಡುತ್ತಿರಲಿಲ್ಲ. ಆದರೆ ವಸಂತನು ಒಂದು ಹುಡಗಿಗೆ ಬರೆದ ಪ್ರೇಮ ಪತ್ರವನ್ನು ದೇಸಾಯಿ ಮುಂದೆ ಇಟ್ಟು ಅವರನ್ನು ಪೇಚುಗೆಹಾಕಿ ತುಸು ಮುಖ ಬೆವಸಿರಿಕೊಳ್ಳುವಂತೆ ಮಾಡಿದರು. ಐದು ನಿಮಿಷಗಳಲ್ಲಿ ಎಲ್ಲರಿಗೂ ಅಗಾದವಾಗುವ ಹಾಗೆ ನಿರ್ಣಯಕ್ಕೆ ಬರುತ್ತಾರೆ.

'ಮಾಸ್ತರ, ಈಗ ನಾ ಡೋನರ ಅನ್ನೋದನ್ನಾ ಮರೆತು ಬಿಡಿರಿ, ಅದರ ಹುಡಗನ ತಂದಿ ಅನ್ನೋ ನಾತೇದಿಂದು ನನ್ನದೊಂದು ಪ್ರಾರ್ಥನ ಅದ, ಅದು ನಿಮಗೂ ನೀಗದಿದ್ದರ ನೀವು ಬಿಡೆ ಇಲ್ಲದೆ ಆಗೋದಿಲ್ಲಾ ಅನ್ನರಿ ಏನು? ಚಿಂತೆ ಇಲ್ಲ[೨] ಎಂದರು

ನ್ಯಾಯ ಎನ್ನುವುದು ಎಲ್ಲರಿಗೂ ಒಂದೇ ಅವನು ಬಡವ, ಬಲ್ಲಿದವೆಂತಲೂ ನೋಡಬಾರದು. ಅದೇರೀತಿ ದೇಸಾಯಿ ಆ ನ್ಯಾಯಕ್ಕೆ ಬದ್ಧವಾಗಿ ನಡೆದುಕೊಳ್ಳುವ ಸ್ವಭಾವ ಅವರದಾಗಿತ್ತು. ಅದಕ್ಕೆ ಅವರು ಒಂದು ತೀರ್ಮಾನವನ್ನು ಹೀಗೆ ಹೇಳುತ್ತಾರೆ. 'ನನ ಮಗನ ಹೆಸರು ಕಿತ್ತಿಹಾಕಲಿಕ್ಕೆ ನಾನು ಅರ್ಜಿ ಕೊಡತೆನಿ. ಅವನ ಹೆಸರು ತಗದು ಹಾಕರಿ.[೨೪]

ಅವಗ ಸಾಲೀ ಪಟಾಂಗಣದಾಗ ಕಾಲ ಹಾಕಬೇಡ ಅಂತ ತಾಕೀದ ಮಾಡತೇನಿ. ಇಷ್ಟು ಮೀರಿ ಅವನು ಬಂದರೆ ಸಿಪಾಯಿ ಹೇಳಿ ಹೊರಗೆ ಹಾಕಸರಿ.. ಸಾಲಿನೂ ಒಂದು ರೀತಿಯಿಂದ ನನ್ನಮಗ ಇದ್ದ ಹಾಗೆ, ನನ್ನ ಮಗನ ದಶಿಂದ ಇಡೀ ಸಾಲಿ ಕೆಡೋದು ಬೇಡ, ಎಂದು ಹೇಳಿದ ದೇಸಾಯರು ಒಂದು ಒಳ್ಳೆಯ ನಿರ್ಧಾರವನ್ನು ತೆಗೆದುಕೊಳ್ಳುವಲ್ಲಿ ತಮ್ಮ ಮಗನ ಶಿಕ್ಷಣವನ್ನು ತ್ಯಜಿಸಬೇಕಾದ ಪ್ರಸಂಗದಲ್ಲಿ ಸ್ವಲ್ಪ ಖೇದವೆನಿಸಿದರೂ ಶಾಲೆಯ ಭವಿಷ್ಯ ಮುಖ್ಯ ಎನ್ನುವ ಧೋರಣೆ ಉಳ್ಳವರು. ಇವರಿಗೆ ಅದರಿಂದ ತೃಪ್ತಿ, ಸಮಧಾನ, ಉಂಟಾಯಿತು. ಎಂಬುದನ್ನು ಗಮನಿಸಬಹುದು. ಈ ರೀತಿಯಾಗಿ ಹಳೆ ಮತ್ತು ಹೊಸ ಪೀಳಿಗೆಯಲ್ಲಿ ಮಾರ್ಪಾಡುಗಳು, ಆ ಪರಿಸರದ ಶಿಕ್ಷಣ ವ್ಯವಸ್ಥೆಯ ಕುರಿತ ಮಾಹಿತಿ ವಿವರವನ್ನು ತಿಳಿಸುತ್ತವೆ.

ವಸಂತರಾಯ ಬರೆದ ಪ್ರೇಮ ಪತ್ರವು ಸಾಧಾರಣವಾದ ಹುಡಗಿಗೆ ಬರೆದಿರಲಿಲ್ಲ. ಅದು ಒಬ್ಬ ಪುಣೆಯಿಂದ ವರ್ಗವಾಗಿ ಬಂದ ಓರ್ವ ಸಬ್ ಜಡ್ಜರ್ ಮಗಳು ಶಾಲೆಗೆ ಸೇರಿದಳು. ಆ ವರೆಗೆ ಸ್ತ್ರೀ ಜಾತಿಯಲ್ಲೇ ಸಮಭಾವದಿಂದ ಆಸಕ್ತನಾದ ಯೋಗಿಶ್ವರ ಕೃಷ್ಣನೋಪಾದಿಯಾದ ವಸಂತರಾಯನು ಒಮ್ಮೆಲೇ ಯೋಗ ಭ್ರಷ್ಟನಾಗಿ ಪಕ್ಷಪಾತಿಯಾದನು. ಏಕದೃಷ್ಟರ್ವಿ ಶಿಷ್ಯತೆ', ಈ ಬೆಕ್ಕಿನ ಕಣ್ಣಿನ ಹೊಸ ಹುಡಿಗೆಯ ಕಡೆಗೆ ವಸಂತ ಹೋತಿನ ಕಣ್ಣುಗಳಿಂದ ನೋಡತೊಡಗಿದ'. ಇಷ್ಟ ಅಲ್ಲದೇ ಅವಳಿಗೆ ಸಿನಿಮಾಕ್ಕೆ ಬರಲು

ತಿಳಿಸಿದ್ದನು. ಈ ರೀತಿಯಾಗಿ ವಸಂತನು ಒಬ್ಬ ಪುಣೆಯಿಂದ ವ್ಯಕ್ತಿಯ ಮಗಳ ಜೊತೆ ನಡಿಸಿದ ಅಸಭ್ಯ ವರ್ತನೆಯು ತನ್ನ ಸಾಲೆಯಿಂದ ಹೊರ ಉಳಿಯುವಂತೆಯಾಯಿತು. ಇದರಿಂದಾಗಿ ನಾವು ಆಕಾಲದಲ್ಲಿಯಾ ಪುಣೆ ಮತ್ತು ಹುಬ್ಬಳ್ಳಿ-ಧಾರವಾಡದ ನಂಟು ಇದ್ದಿದ್ದನ್ನು ತಿಳಿಯಬಹುದಾಗಿದೆ.

ದೇಸಾಯಿಯವರು ತಮ್ಮ ಮಗ ವಸಂತನ ಸಮಸ್ಯೆಯನ್ನು ಬಗೆಹರಿಸಿದ ನಂತರ ತಮ್ಮ ಹಿರಿಯ ಮಗ ಅಚ್ಯೂತ ಬಗ್ಗೆ ಚಿಂತ ಕ್ರಾಂತರಾದರು. ಅವನ ಬರೆದ ಪತ್ರವು ಅವರನ್ನು ಚಿಂತೆಗೆ ಎಡೆ ಮಾಡಿ, ಮುಂಬೈಗೆ ಹೋಗುವ ನಿರ್ಧಾರವನ್ನು ಕೈಗೊಂಡರು.

ಕಾಲೇಜು ಕಲೆಯುವುದರಲ್ಲಿ ಯಾವ ಅರ್ಥವಿಲ್ಲ ಅದಕ್ಕಾಗಿ ಕಾಲೇಜು ಬಿಟ್ಟ. ಹೊಸ ಉದ್ಯೋಗವನ್ನು ಕಲಿಯಲಿಕ್ಕೆ ಪ್ರಾರಂಭಮಾಡಿದ್ದೇನೆ. ಹಣದ ಅಡಚಣೆಯಾಗಿದೆ. ಅದಕ್ಕಾಗಿ ನೂರು ರೂಪಾಯಿಗಳನ್ನು ಕಳಿಸಕೊಡಬೇಕು. ಎಂದು ಪತ್ರದಲ್ಲಿ ತಿಳಿಸಿದ ವಿಚಾರ ದೇಸಾಯರಿಗೆ ಯಾವುದೇ ರೀತಿ ಅರ್ಥವಾಗಲಿಲ್ಲ. ತಾವೇ ಸ್ವತಃ ತಿಳಿದುಕೊಂಡು ಬರೋಣವೆಂದು, ಮುಂಬೈಹೊರಟರು, ಅದಲ್ಲದೇ ಮುಂಬೈ ಬಗ್ಗೆ ಈಗಾಗಲೇ ಸಾಕಷ್ಟು ಸುದ್ಧಿಗಳು ಬರತೊಡಗಿದ್ದವು ನೂರು ರೂಪಾಯಿ ಮನಿ ಆರ್ಪರ ಮಾಡಿ, ತಾವು ಪಯಣ ಬೆಳೆಸಿದರು. ಇದರಿಂದಾಗಿ ಪತ್ರ ವ್ಯವಹಾರಗಳು ಮನೆ ಆರ್ಡರ, ತಾರಗಳು ಆ ಕಾಲದ ಮುಂಬೈ-ಧಾರವಾಡದ ವ್ಯವಹಾರಕ್ಕಾಗಿ ಅಂಚೆವ್ಯವಸ್ಥೆ ಸುಗಮವಾಗಿ ಸಾಗುತ್ತಿದ್ದವು. ಮತ್ತು ಆಗಲೇ ಪತ್ರಿಕೆಗಳು ಕೂಡ ಸಾಕಷ್ಟು ದೂರದ ಮತ್ತು ಸ್ಥಳೀಯ ವಿಷಯವನ್ನು ನೀಡುವಲ್ಲಿ ಜನರಿಗೆ ಸಹಾಯಕವಾಗುತ್ತಿದ್ದವೆನ್ನುವುದು ಈ ಕಥೆಯ ಸಾರದಿಂದ ತಿಳಿದು ಕೊಳ್ಳಲಾಗಿದೆ.

ದೇಸಾಯಿರು ಮುಂಬೈಗೆ ಬಂದು ಅಚ್ಯೂತನ ಬಗ್ಗೆ ಇಗಾಗಲೇ ಅಲ್ಪ ಸ್ವಲ್ಪ ಕಾಲೇಜಿನಲ್ಲಿ ವಿಚಾರಿಸಿ, ಆತನನ್ನ ಭೆಟ್ಟಿಯಾಗಿ ಮುಂದೆ ಏನ ಮಾಡಬೇಕಂತ ಮಾಡಿದಿ? ಎಂದು ಅಚ್ಯೂತನನ್ನು ಕೇಳಿದರು. ''ಈಗಂತೂ ಬಾಂಬೆ ಗ್ಯಾಝೆಟ್' ವರ್ತಮಾನ ಪತ್ರದಾಗ ಕೆಲಸಕ್ಕೆ ಇದ್ದೇನಿ. ವರ್ತಮಾನ ಪತ್ರ ಹೊಸತು. ಅದರ ಒಬ್ಬ ಸಬ್ ಎಡಿಟರನದು ಜೈಲಿನ್ಯಾಗ ಗುರುತು ಆಗಿತ್ತು. ಅವನ ಕಡೆ ಮೂರು ಮೂರು ತಾಸು ಕೆಲಸ ಮಾಡುತ್ತೀನಿ.'' " ಯಾ ಕೆಲಸ?' ಸಂಪಾದಕನ ಕೆಲಸ, ಇಪ್ಪತ್ತೈದು ರೂಪಾಯಿ ಕೊಡತಾರ ಎರಡರಿಂದ ಐದರ ತನಕ ಈ ಕೆಲಸ ಮಾಡತೀನಿ. ಅಮ್ಯಾಲ ಅದ ಪೇಪರಿನ ಪ್ರಿಟಿಂಗ್ ಪ್ರೆಸ್ ಅದ, ಅಲ್ಲೆ ಯಂತ್ರದ ಕೆಲಸಾನೂ ಈಗೀಗ ಕಲಿಲಿಕ್ಕೆ ಹತ್ತೀನಿ" ಎಂದು ದೇಸಾಯಿರಿಗೆ ಹೇಳಿದಾಗ, ಅವರು ಶಿಕ್ಷಣದ ಜೊತೆಗೆ ಉದ್ಯೋಗವನ್ನು ಕಲಿ ಮುಂದೆ ನೋಡಣವೆಂದು ಹೇಳಿದರು.

ಇತ್ತ ಕಡೆಗೆ ರಾಘಪ್ಪನು ದೇಸಾಯರಿಗೆ ಒಂದು ಪತ್ರವನ್ನು ಬರೆದು ಈ ರೀತಿಯಾಗಿ ತಿಳಿಸುತ್ತಾನೆ. "ದೇಸಾಯಿ ನಿಮ್ಮ ಮಗನ ಪತ್ರಗಳನ್ನು ನನ್ನ ಕಡೆಗೆ ಕಳಿಸಿ ನನ್ನ ಭೂತಕಾಲದ ಸ್ಮ್ರುತಿಗಳನ್ನು ಜಾಗೃತಮಾಡಿ ನನ್ನನ್ನು ಕೆಳಗೆ ಎಳೆದಿರಿ, ನಾನು ನಿಮ್ಮ ಪತ್ರಕ್ಕೆ ಅಳುಕಿತ್ತಿಲ್ಲ" ವೆಂದು ರಾಘಪ್ಪ ದೇಸಾಯಿ ತನ್ನ ಹಿಂದಿನ

ಕಥೆಯ ವಿವರವನ್ನು ಹೇಳುತ್ತಾ, ನಿಮ್ಮ ಮಗನು ಪುಣೆಗೆ ಹೋಗಲಿ ಹತ್ತುವರ್ಷ ಹುಡಕಲಿ ನನಗೆ ಬಾದೆ ತಟ್ಟುವ ಯಾವ ವಿಷಯವನ್ನು ಅವನು ದೊರಕಿಸಲಾರನು. ಅದನ್ನು ನಾನು ನಾನಾಗಿಯೇ ನಿಮಗೆ ಬರೆದು ತಿಳಿಸುತ್ತಿದ್ದೇನೆ. "ನನ್ನ ಪಿತ್ರಾರ್ಜಿತ ಹೊಲಗಳಲ್ಲಿ ತಂದೆಯವರ ಕಾಲದಿಂದಲೇ ಒತ್ತಿ ಬಿದ್ದು, ನಾವು ಸ್ವಂತ ಪ್ರಯತ್ನದಿಂದ ನಾಲ್ಕು ಪುಸ್ತಕ ಧಾರವಾಡದಲ್ಲಿ ಕಲಿತೆವು ನನಗೆ ನೌಕರಿ ಸಿಗಲಿಲ್ಲ. ಆದ್ದರಿಂದ ಪುಣೆಗೆ ನನ್ನ ತಮ್ಮ ವೆಂಕಟಿಯ ಬಳಿಗೆ ಹೋದೆನು. ಅಲ್ಲಿ ಪುಣೆಯಲ್ಲಿ ಅತ್ತ ಇತ್ತ ಕಛೇರಿ ಬ್ಯಾಂಕ ಎಂಬ ನೌಕರಿಗಾಗಿ ಅಲೆದಾಡುವುದು, ಜಾಹಿರಾತುಗಳಿಗಾಗಿ ವೃತ್ತ ಪತ್ರಿಕೆ ಓದುವುದು ಇವೆ ಕೆಲಸಗಳಲ್ಲಿ ಒಂದು ವಾರವಾಯಿತು. ವೆಂಕಟಿ ಚೆಕ್ ಮುರಿಸಿಕೊಂಡು ಬಂದ, ಮರುದಿವಸ ಮುಂಜಾನೆಯ ವರ್ತಮಾನ ಪತ್ರದಲ್ಲಿ ನಾನು ತಾಜೀ ಮುದ್ದಿನ ಡ್ರಾಯವ್ಹರ ಬಗ್ಗೆ ಸುದ್ದಿ ಓದಿದೆ ಪೋಲಿಸರು ಅವನನ್ನು ಸೆರೆಹಿಡಿದ ಆ ಪತ್ರದಿಂದ ಕಂಡು ಕೊಂಡೆ. ವೆಂಕಟರಾಯ ಪತ್ರ ಓದುವನಲ್ಲ, ಒಂದು ವಾರದಲ್ಲಿ ಚೆಕ್ಕು ಕೊಟ್ಟಿ ಇತ್ತೆಂದು ಅದಕ್ಕಾಗಿ ಪೋಲಿಸರು ಬಂದು ಅವನನ್ನು ಸೆರೆಹಿಡಿದ್ದಾರೆಂದೂ ತಿಳಿಯಿತು. ಪುಣೆಗೆ ಹೋಗುವಾಗ ಇಲ್ಲಿಯ ವಕೀಲರನ್ನು ಕೇಳಿಕೊಂಡು, ಹೇಗಾದರೂ ವೆಂಕಟಿ ಜೈಲಿನೊಳಗೆ ಹೋಗದಂತೆ ಜಾಮೀನು ಕೊಡಿಸಲು ಬೇಕಾಗುವ ಕಾಗದ ಪತ್ರ ತಯಾರಿ ಮಾಡಿಕೊಂಡೆನು. ನನ್ನ ಬೀಗ ಸ್ವಾಮಿರಾಯ ಕರಕೊಂಡು ಪುಣೆಗೆ ಹೋಗಿ ವೆಂಕಾಟಿಯನ್ನು ಬಿಡಿಸಿಕೊಂಡು ಸ್ವಾಮಿರಾಯನ ಐದು ಸಾವಿರ ರೂಪಾಯಿಗಳಿಗೆ ಜಾಮೀನು ಮಾಡಿದೆವು, ಮುಂದೆ ಮುಂಬೈಯಲ್ಲಿ ವೆಂಕಟಿಯು ಹಿಟ್ಟಿನ ಗಿರಣಿಯ ಮಾಲಿಕನ ಮನೆಯಲ್ಲಿ ದಿನಬಳಕೆಯ ಕೆಲಸಕ್ಕಾಗಿ ನಿಂತುಕೊಂಡನು.

ಒಟ್ಟಾರೆ ಎಲ್ಲಾ ಸಂಗತಿಯನ್ನು ಗಮನಿಸಿದಾಗ ಹುಬ್ಬಳ್ಳಿ ಧಾರವಾಡ ಪರಿಸರದ ಮಹಾರಾಷ್ಟ್ರ ಪುಣೆ ಮುಂಬೈಗಳು ನಂಟು, ಶಿಕ್ಷಣ ಉದ್ಯೋಗದ ರಾಯಬಾರಿಗಳಾಗಿ ಪುಣೆ ಮುಂಬೈ ಕೇಂದ್ರಗಳು ಮತ್ತು ಅವುಗಳ ವಿವರವನ್ನು ಇಲ್ಲಿ ಸಾಕಷ್ಟು ಒದಗಿಸುತ್ತವೆ.

ಒಂದು ಬ್ರಹ್ಮಣ ಸಮುದಾಯದಲ್ಲಿ ವಿಶಿಷ್ಟ ಆಚರಣೆ, ಸಂಪ್ರದಾಯ, ಪದ್ಧತಿಗಳ ಮೂಲಕ ನಡೆಯುವ ಮದುವೆಯು ಒಂದು ವಿಶಿಷ್ಟತೆಯಿಂದ ಕೂಡಿರುವುದು. ಅದರಲ್ಲಿ ಧಾರವಾಡ ಶಹರದ ಮದುವೆ ಅಂದರೆ ಅಲ್ಲಿ ರಾಘಪ್ಪನು ವಿಜೃಂಭಣೆಯಿಂದ ಮಗಳ ಮದುವೆ ಮಾಡಿದನು. ಶಹರಕ್ಕ ಬಂದ ಮೇಲೆ ದೊಡ್ಡ ದೊಡ್ಡ ಗಣ್ಯ ವ್ಯಕ್ತಿಗಳ ಪರಿಚಯವಾಗಿ ಅಲ್ಲಿಗೆ ಆಮಂತ್ರಿಸಿದ್ದನು. ಯಾವುದೇ ಬ್ರಹ್ಮಣರ ಮದುವೆವೆಂದರೆ ಅಲ್ಲಿ ಊಟೋಪಚಾರಗಳು, ಉಡುಪುಗಳು, ವಿಶಿಷ್ಠ ಬಗೆಯು ಆಗಿರುವುದನ್ನು ಕಾಣುತ್ತಿವೆ. ಈ ರಾಘಪ್ಪನ ಮಗಳ ಮದುವೆಯ ಕಾಣುವ ಒಂದು ವಿಶೇಷವೆಂದರೆ ಆಧುನಿಕ ಬದುಕಿನ ಸಂಗೀತ ಶೋಕಿಯ ಬ್ರಾಹ್ಮಣರಲ್ಲಿ ಮದುವೆ ಮಂಟಪ ಅಲಂಕಾರ ಒಬ್ಬ ಮುಸ್ಲಿಂ ಪಾತರದವಳು ಬಂದು ಸಿಂಗರಿಸುವ ಪ್ರಸಂಗವನ್ನು ಊಹಿಸಿಕೊಳ್ಳುವುದು ಕೂಡ ಕಷ್ಟ, ಜೊತೆಗೆ ಮದುಮಗಳನ್ನು ಅಲಂಕರಿಸುವುದು ಅದಲ್ಲದೇ

ಮದುವೆಗೆ ನಾಲ್ಕು ದಿನ ಮುಂಚಿತವಾಗಿ ಬಂದು ಅವರೊಂದಿಗೆ ಬೆರತು ಊಟೋಪಾಚಾರದಲ್ಲಿ ದಿನನಿತ್ಯ ಕಾರ್ಯದಲ್ಲಿ ಭಾಗವಾಗಿದ್ದು ನೋಡಿದಾಗ ವರ್ಗ ಸಮನ್ವಯತೆಗೆ ದಾರಿಮಾಡಿ ಕೊಡುತ್ತದೆ. ಅಷ್ಟೇಲ್ಲದೆ ಮುಸ್ಲಿಂ ಮಹಿಳೆಯಿಂದ ತಂಬಾಕನ್ನು ಬ್ರಾಹ್ಮಣರು ಸ್ವೀಕರಿಸುವುದನ್ನು ಕಾಣಬಹುದಾಗಿದೆ. ಆ ಪರಿಸರದಲ್ಲಾದ ಆಧುನಿಕರಣ ಗಾಳಿ ಬೀಸಿತು ವೆನ್ನಬಹುದಾಗಿದೆ.

ಧಾರವಾಡ-ಜನತೆಗೆ ಮನರಂಜನೆ ಸಾಧನವಾಗಿ ನಾಟಕ ಕಂಪನಿಗಳು ಬಹಳಷ್ಟು ಪ್ರಭಾವ ಬೀರಿದವು. ಅಲ್ಲಿನ ಯುವಕ ಯುವತಿಯರನ್ನು ಆಕರ್ಷಿಸಿಸುತ್ತಲ್ಲದೇ ನಾಟಕದಲ್ಲಿ ಭಾಗವಹಿಸುವ ಹುಚ್ಚು ಕಲೆಯನ್ನು ಬೆಳೆಸಿಕೊಳ್ಳುವಲ್ಲಿ ಉತ್ಸಾಹದ ತರುಣರನ್ನು ಕಾಣಬಹುದಾಗಿದೆ. ಆ ಕಾಲದಲ್ಲಿಯೂ, ಅದರಲ್ಲಿಯೂ ಒಂದು ಹೆಣ್ಣು ಮಗಳು ಪಾತ್ರದಲ್ಲಿ ಭಾಗಿಯಾಗಿರುವುದು ಆ ನಾಟಕ ಕಂಪನಿಯು ಹೆಚ್ಚು ಹೆಚ್ಚು ಜನರನ್ನು ಆಕರ್ಷಿಸಿ, ಹಣಗಳಿಸುವಲ್ಲಿ ಮುಂದಾದವು. ಅಂತಹ ನಾಟಕ ಪಾತ್ರದಲ್ಲಿ ಮೆಹಬೂಬಳು ಭಾಗವಹಿಸಿ ಧಾರವಾಡದ ರಸಿಕರ ಮನವನ್ನು ಗೆದ್ದಿದ್ದಳು. ಹಳ್ಳಿಗಿಂತ ಶಹರದ ನಾಟಕಗಳು ಹೆಚ್ಚು ಹುಚ್ಚು ಹಿಸಿಡಿಸಲಿಕ್ಕೆ ಹತ್ತಿದವು. ಅದರಲ್ಲಿ ವಸಂತ ರಾಯನಿಗೆ ತಾನು ರಾಜನ ಪಾತ್ರ ಮಾಡಬೇಕು. ಊರಲ್ಲಿ ನಾಟಕ ಕಂಪನಿ ತೆಗೆಯ ಬೇಕು. ಎಂದು ಉತ್ಸಾಹ ಭರಿತನಾಗಿದ್ದನು. ಅದರಲ್ಲಿ ರಾಘಪ್ಪನ ಸಂಗ್ತಿ ಸೇರಿಕೊಂಡು ಅವನ ಮಾತಿಗೆ ಮರಳ ಆಗಿ ನಾಟಕ ಮಾಡಲು ನಿರ್ಧರಿಸುತ್ತಾನೆ. ಅವನನ್ನು ಬುಟ್ಟಿಹಾಕಿಕೊಳ್ಳುವಲ್ಲಿ, ರಾಘಪ್ಪನು, ವಸಂತರಾಯನು ನಾಟಕದಲ್ಲಿ ಭಾಗವಹಿಸುವಂತೆ ಮಾಡಲು ಬಸವಣ್ಣೆಗೆ ಹೇಳಿ ಕಳಿಸಿಕೊಡುತ್ತಾನೆ. ಅದರಂತೆ ಬಸವಣ್ಣೆಯು ''ನಾ ಹೇಳಿದ್ನಿರೇ ನಮ್ಮ ಗೌಡರದು ನಾಟಕ ಅಂದರ ಬಲು ಜೀವ' ಅಂತ, 'ಅಂತಲೂ ಹುರಪನವರು ಇದ್ದಾರ ಬಿಡಲಿ ನಿಮ್ಮ ಗೌಡರು, ಹಂಗಾರ ನಮ್ಮದು ಅವರದು ಕೂಡ ತೈತಿ ಏಳು' ಅಂತ, ಅಂತ ಅಂದರರಿ ಎಂದು ಬಸವಣ್ಣೆ ಮುಂದುವರೆದು ಹೇಳುವನು 'ಅವರವ ಎರಡು ನಾಟಕ ಕಂಪನಿ ಇದ್ದವು ಅಂತರಿ, ಅವರೇ ನಾಟಕದ ಮಾತು ಕಲಿಸಿ ಕೊಟ್ಟಾರ ಅಂತರಿ ನಿಮ್ಮ ಗೌಡರು ಸಹಾಯ ಮಾಡಿದರ ಇನ್ನೊಂದು ನಾಟಕ ಹೊಡೆದು ಬಿಡೋಳಾ ಅಂತ ಅಂತಿದ್ದರು. ನಿಮ್ಮ ನೋಡಿದಾಗ, ಅಂತು ನಿಮಗ ರಾಜನ ಪಾರ್ಟ ಕೊಡತಾರ ನೋಡ್ರಿ. ನಾನು ಬಲು ಕಾತ್ರಿ ಎನಸ್ತದ ಎಂದು ಹೇಳಿ ನಿಮ್ಮನ್ನ ಕಂಡರ ರಾಜನ ಕಂಡಾಗ ಆಗತ್ತದರಿ''[೨೬] ಎಂದಾಕ್ಷಣ ವಸಂತ ಒಂದು ದಿನ ಧಾರವಾಡಕ್ಕೆ ಹೋಗಿ ಬರೋಣ ಬಸವಣ್ಣೆ ಬಹಳದಿನಗಳಾದವು. ನಾನು ಶಹರದಾಗ ಹೋಡಾಡದೇ ಎಂದು ಹೇಳಿದ ವಸಂತಗ ನಾಟಕದಲ್ಲಿ ರಾಜನ ಪಾತ್ರ ಮಾಡಬೇಕೆಂಬ ಆಸೆಯಾಯಿತು. ಧಾರವಾಡ ಶಹರದ ನಾಟಕ ಕಂಪನಿಯ ಹುಚ್ಚು ವಸಂತ ರಾಯನ್ನ ಧಾರವಾಡಕ್ಕೆ ಹೋಗುವಂತೆ ಮಾಡಿತು. ಹಳ್ಳಿಗಿಂತ ಧಾರವಾಡದಾಗ ನಾಟಕ ಬಹಳ, ಚೋಲೋ ಇರ್‍ತಾವ ಎನ್ನುವುದಾಗಿತ್ತು.

॥ ಶ್ರೀ ಕುಲದೇವತಾ ಪ್ರಸೀದತು ॥

**ಶ್ರೀ ಶೇಷಶಾಯಿ ನಾಟಕ ಕಂಪನಿ, ಹುಬ್ಬಳ್ಳಿ**

**ಕ್ಯಾಂಪ ಧಾರವಾಡ**

ಇವರು ಶ್ರೀ ಉಳವಿ ಬಸವೇಶ್ವರ ಜಾತ್ರೆಯ ಸಮಯದಲ್ಲಿ ಪ್ರತಿದಿನ ಈ ಕೆಳಗಿನ ಹಿಟಂಟ ನಾಟಕಗಳನ್ನು ಆಡುವವರಿದ್ದಾರೆ.

| | |
|---|---|
| ಇಂದಿನಿಂದ ಮೂರು ದಿವಸ | ವೆಂಕಟೇಶ ಪಾರಿಜಾತ |
| ಮುಂದೆ ಮೂರು ದಿವಸ | ಗುಲೇಬಕಾವಲಿ |
| ಮುಂದೆ ಮೂರು ದಿವಸ | ರುಕ್ಮಿಣೀಹರಣ |
| ಮುಂದೆ ಮೂರು ದಿವಸ | ಗಾಂಧೀಟೋಪಿ ಸಿಂಗಲ್ ಚಾ |
| ಮುಂದೆ ಮೂರು ದಿವಸ | ಸಂಗ್ಯಾಬಾಳ್ಯಾನ ನಾಟಕ |

ವಿ.ಸೂ. : (೧) ಅವರಲ್ಲಿ ಬದಲಾವಣೆ ಆಗಬಹುದು. (೨) ಮುಂದಿನ ಕಾರ್ಯಕ್ರಮ ಮುಂದೆ ತಿಳಿಸಲಾಗುವದು. (೩) ಒನ್ಸಮೋರ ಅಂದಾಗ ಹಾಡುವದು ಪಾರ್ಟಿದಾರನ ಮರ್ಜಿ.

ಖಾಸಾ ಜಾತ್ರೆಯ ನಿಮಿತ್ತ

**ಹುಬ್ಬಳ್ಳಿಯ ಗಾಯನಗಂಧರ್ವ ಮೆಹಬೂಬಜಾನ್ ಮಿರಜಕರ**

ಇವರು ಎಲ್ಲ ನಾಟಕಗಳಲ್ಲಿ ಮುಖ್ಯ ಸ್ತ್ರೀಪಾರ್ಟ ಮಾಡಲಿದ್ದಾರೆ. ಆರು ವರ್ಷಗಳ ತರುವಾಯ, ಖಾಸ್ ಧಾರವಾಡದ ರಸಿಕರಿಗಾಗಿ ತಮ್ಮ ಗಾನಸುಧೆಯನ್ನು ಉಣಿಸಲಿದ್ದಾರೆ. ರಸಿಕಪ್ರೇಮಿ [illegible] ಜನರು ಈ ಸುಸಂಧಿ ಕಳಕೊಳ್ಳಬಾರದು.

ಸ್ಥಳ : ಬಸಪ್ಪನ ಗುಡಿಯ ಹಿಂದೆ [illegible] ಮಾಲಕಿಯ ತಂಬೂ ಥೇಟರದಲ್ಲಿ.

R. S. ಪರಮೇಶ್ವರಭಟ್ಟ, ಮಾಲಕ : ಶೇಷಶಾಯಿ ನಾಟಕ ಕಂಪನಿ

ಇಲ್ಲಿ ನಾಟಕ ಕಂಪನಿಗಳು ಜಾಹೀರಾತನ್ನ ಕೊಡುವ ಮೂಲಕ ಲೇಖಕರು ಆ ಕಾಲದಲ್ಲಿ ನಾಟಕ ಕಂಪನಿಗಳು ಗ್ರಾಮೀಣ ನಗರ ಪ್ರದೇಶಗಳಲ್ಲಿ ಮನರಂಜನಾ ಮಾಧ್ಯಮವಾಗಿ ವಹಿಸುತ್ತಿದ್ದ ಪಾತ್ರವನ್ನು ಚಿತ್ರಿಸಿದ್ದಾರೆ. ಅದರಲ್ಲೂ ಹುಬ್ಬಳ್ಳಿ-ಧಾರವಾಡ ಶಹರಗಳಲ್ಲಿ ಇಂದಿನ ಮಾಧ್ಯಮದಷ್ಟೇ ಪ್ರಭಾವ ಮಾಧ್ಯಮವಾಗಿ ನಾಟಕ ಕಂಪನಿಯ ಪಾತ್ರವನ್ನು ವಿವರಿಸಿದ್ದಾರೆ. ಹುಬ್ಬಳ್ಳಿ ಧಾರವಾಡಗಳಲ್ಲಿಯ ಜನತೆಯ ಪ್ರೋತ್ಸಾಹ, ಶಿಕ್ಷಣ ಪ್ರಸಾರದಿಂದಾಗಿ ಜಾಹಿರಾತುಗಳ ಬಳಕೆ ಧಾರವಾಡದಲ್ಲಿ ಈಗಾಗಲೇ ಬಳಕೆಯಲ್ಲಿದ್ದ ಅಚ್ಚುಕೂಟಗಳನ್ನು ಏಕಕಾಲಕ್ಕೆ ಇಲ್ಲಿ ಕಾಣಬಹುದಾಗಿದೆ.

ಜಿ.ಎಸ್.ಆಮೂರ ಅವರು ತಿಳಿಸುವ ವಾಖ್ಯನುಸಾರ 'ಹಳ್ಳಬಂತು ಹಳ್ಳ' ನವಲಗುಂದ ಮತ್ತು ಧಾರವಾಡ ಶಹರದ ಜೀವನ ಚಿತ್ರಣವನ್ನು ಒಳಗೊಂಡಿದೆ. ಒಂದು ವಾಸ್ತವ ಮಾರ್ಗದ ಕಾದಂಬರಿ ಇದರ

ಹಿಂದೆ ಸಾಕಷ್ಟು ಚಿಂತನೆಗಳು, ಅನುಭವಗಳು, ನೆನಪುಗಳಿವೆ. ಇಲ್ಲಿನ ಪಾತ್ರ ವೈವಿಧ್ಯ, ಕಥನಕಲೆ, ಬದುಕಿನ ಅರ್ಥ ವಂತಿಕೆ, ಶೈಲಿಯ ಹೊಸತನ, ಇವುಗಳಿಂದಾಗಿ ಈ ಕಾದಂಬರಿಯ ಅನುಭವ ನನಗೆ ತುಂಬಾ ಸುಖಕೊಟ್ಟಿದೆ ನರಗುಂದ ನವಲಗುಂದ ಗ್ರಾಮೀಣ ಭಾಗಗಳಲ್ಲಿ ತಮ್ಮ ಒಡನಾಟ ಇಟ್ಟುಕೊಡ ಜೀವನ ಒಂದು ಕ್ರಮವಾದರೆ ಧಾರವಾಡ ಶಹರವು ವಸಾಹತುಶಾಹಿಯ ಪ್ರಭಾವಕ್ಕೆ ಒಳಗಾಗಿ ಅತಿ ಶೀಘ್ರವಾಗಿ ಬದಲಾವಣೆಗೆ ಒಳಗಾದ ಪ್ರದೇಶವೆನಿಸಿದೆ. ಈ ಕಾದಂಬರಿಯಲ್ಲಿ ಎರಡು ಮುಖ್ಯ ಕಥಾವಾಹಿನಿಗಳಿವೆ. ಉತ್ತರ ಭಾರತದ ಕಾಶಿ ಕಾನಪೂರ ಪ್ರದೇಶದಿಂದ ಬಂದ ಕಮಲನಾಭನ ಬದುಕಿನ ಕಥೆ, ವಾಸುದೇವಾಚಾರ್ಯರ ಬದುಕಿನ ಕತೆ, ಕೇಶವ ಭೋದ ನಾರಾಯಣ ಮೊದಲಾದವರ ಕತೆಗಳ ಪ್ರವಾಹದ ಹರಮ ಒಂದೆಡೆಯಾದರೆ ಇದರ ಸಮಾನಾಂತರದಲ್ಲಿ ಹರಿದ ಇನ್ನೊಂದು ಮುಖ್ಯವಾಹಿನಿಯಲ್ಲಿ ರಾಮೂ ಮತ್ತು ಅವನ ಗೆಳೆಯರು ನಡೆಸಿದ ಸ್ವಾತಂತ್ರ್ಯ ಸಮರದ ಆಂದೋಲನದ ಕತೆ ಇದೆ. ವಾಸುದೇವಾಚಾರ್ಯರ ಎಕತ್ರ ಕುಟುಂಬದಲ್ಲಿಯ ಮೂರು ತಲೆಮಾರಿನ ಕತೆಯ ಪ್ರವಾಹ ಓಘವೇ ಓದುಗನ ಕುತೂಹಲವನ್ನು ಕೆರಳಿಸುವುದರಿಂದ ಸ್ವಾತಂತ್ರ್ಯೋಂದೋಲನದ ಕತೆ ತುಸು ಮಸುಕಾಗಿ ಹಿನ್ನೆಲೆಯಲ್ಲಿ ಉಳಿಸಿಕೊಂಡಿದೆ.

ಈ ಕಾದಂಬರಿಯ ಮತ್ತೊಂದು ಆಕರ್ಷಣೆಯೆಂದರೆ ಇದರಲ್ಲಿ ಢಾಳಾಗಿ ಕಣ್ಣಿಗೆ ಬೀಳುವ ಕೆಲವು ವೈರುದ್ಯಗಳು ಈ ವೈರುದ್ಯಗಳಂದುಂಟಾಗುವ ದ್ವಂದ್ವಗಳು ಪರಿವರ್ತನೆಯತ್ತ ಕೊನೆಗೆ ಹೊರಳುವುದನ್ನು ಗಮನಿಸಬಹುದು. ನವಲಗುಂದ ಮತ್ತು ಅದರ ಸುತ್ತಮುತ್ತಲಿನ ಗ್ರಾಮೀಣ ಪರಿಸರದ ಜನಜೀವನ ವಿರುದ್ದ ದಿಕ್ಕಿನಲ್ಲಿದ್ದಂತೆ ತೋರುವ ಧಾರವಾಡ ಜಾಗೃತ ಪರಿಸರ ಮತ್ತು ಇಲ್ಲಿಯ ಜನಜೀವನದ ಪರಿಸರ ಮತ್ತು ಸಂಸ್ಕೃತಿ, ಸ್ವಾತಂತ್ರ್ಯ ಹೋರಾಟದ ಹುಚ್ಚಿನಲ್ಲಿ ತನ್ನ ವಿದ್ಯ ಮನೆ ಸಂಬಂಧಗಳನ್ನು ತೊರೆದು ದೇಶ ಪ್ರೇಮ ಮೆರೆದು ಸಾರ್ವಜನಿಕ ಗೌರವಕ್ಕೆ ಪಾತ್ರನಾಗಿ ಕೊನೆಗೂ ಹುತಾತ್ಮನಾದ ರಾಮು.

ಕ್ರಿ.ಶ.೧೮೫೭ರ ಸಿಪಾಯಿ ದಂಗೆಯಿಂದ ಆರಂಭವಾಗಿ ಗಾಂಧಿಜಿಯವರ ಸಾವಿನ ಕಾಲದ ವರೆಗೆ ಹರಡಿಕೊಂಡಿರುವ ಅನೇಕ ಕಥೆ, ಕಾದಂಬರಿ, ಪ್ರಬಂಧಗಳಲ್ಲಿ ವರ್ಣಿತವಾಗಿ ಕಂಡುಬರುತ್ತದೆ. ವೈದ್ಯರು ಕೂಡ ಆಯ್ಕೆ ಮಾಡಿಕೊಂಡಿರುವ ಕಾದಂಬರಿ ಹಳೆಯ ಪ್ರಯೋಗಕ್ಕೆ ಕೈಹಾಕಿದರೂ ಆ ಕಾಲದಲ್ಲಿ ಸಂಭವಿಸುವ ಆಧುನಿಕತೆಯ ಅವತಾರವೇ ಕನ್ನಡ ನಾಡಿನಂತ ಸ್ಥಳೀಯ/ದೇಶಿ ಸಂಸ್ಕೃತಿಗಳನ್ನು ವಿಶೇಷವಾಗಿ ಪಲ್ಲಟಗೊಳಿಸಿತೆಂದು ಇವತ್ತು ನಮ್ಮ ನಾಡುಗಳ ಅನುಭವಿಸುತ್ತಿರುವ ಹಲವು ಬಗೆಯ ಆತಂಕ ಮತ್ತು ಸುಖದ ಪೈರುಗಳಿಗೆಲ್ಲ ಈ ಕಾಲದಲ್ಲಿಯೇ ಬೀಜವನ್ನು ಬಿತ್ತಲಾಗಿತ್ತೆಂದೂ ಹೇಳಬಹುದು. ಮಾದ್ಯಮಗಳ ಧಾರವಾಹಿ ಜಗತ್ತಿಗೂ ಕೂಡ ಈ ೧೮೫೭ ಎಂಬುದು ಒಳ್ಳೆಯದೊಂದು ಮಾರಾಟದ ಸರಕಾಗಿ ಪರಿಣಮಿಸಿದೆ. ವ್ಯಾಪಾರದ ಮನೋಭಾವವನ್ನು ಹುಟ್ಟುಹಾಕಿದೆ. ೧೮೫೭ರ ಕಾಲವನ್ನು ಒಂದು ಹೊಸ್ತಿಲಿನ ಯುಗವೆಂದು ನೋಡುವ ಕ್ರಮದಲ್ಲಿ ದೊಡ್ಡದಂದು ಸಮಸ್ಯ ಅಡಕವಾಗಿದೆ ಎಂದು ಕೆ.ವಿ.ಅಕ್ಷರರವರು ಹೇಳುತ್ತಾ, ಆ ಸಮಸ್ಯೆಯ ಮೂಲವನ್ನು ನೋಡಿ ವಾಖ್ಯಾನಿಸಿದೆ ಓರಿಯಂಟಲಿಸ್ಟ ಗ್ರಹಿಕೆಗಳಿಗೆ ಹತ್ತಿರ

ಹತ್ತಿರ ಹೋಗಿ ತಾಗಿ ಕೊಳ್ಳುತ್ತದೆ.. ಉದಾಹರಣೆಗೆ, ೧೮೫೭ರ ಕಾಲವು ಭಾರತದಲ್ಲಿ ಬಹುದೊಡ್ಡ ಸಾಂಸ್ಕೃತಿಕ ಪಲ್ಲಟವೊಂದು ಸಂಬಂಧಿಸಿದ ಕಾಲ ಎಂದು ಸಾಧಾರಣವಾಗಿ ಒಪ್ಪಿತವಾಗಿರುವ ಗ್ರಹಿಕೆಯ ಹಿನ್ನೆಲೆಯಲ್ಲಿ, ಅದಕ್ಕೂ ಹಿಂದೆ ಶತಮಾನಗಳ ಕಾಲ ಭಾರತದಲ್ಲಿ ಬಹಳ ದೊಡ್ಡ ಪಲ್ಲಟಗಳೇನು ಸಂಭವಿಸಿರಲಿಲ್ಲ ಎಂಬ ಪೂರ್ವಗ್ರಹವಿದೆ. ಅದಕ್ಕೂ ಮೊದಲು ಭಾರತವು ಯಾವತ್ತು ಬದಲಾಗದ ಅಥವಾ ಆಮೇಲಿನ ತಿದ್ದುಪಡಿಗಳ ಪ್ರಕಾರ ಬದಲಾವಣೆಗೆ ತೀವ್ರ ಪ್ರತಿರೋಧವನ್ನು ತೋರಿಸು ಸಂಪ್ರದಾಯ ಶೀಲತೆಯೊಂದರಲ್ಲಿ ಅಪ್ಪಿಕೊಂಡಿತು ಎಂಬ ಸಿದ್ಧನಂಬಿಕೆಯೂ ಇದೆ. ಹಿಂದಿನ ಭಾರತವನ್ನು 'ಜಡ ಸಂಪ್ರದಾಯ' ನಿಂತ ನೀರಿನಂತಿದ್ದ ಇತಿಹಾಸ ಇತ್ಯಾದಿ ಸಿದ್ಧ ಪ್ರತಿಮೆಗಳಲ್ಲೇ ಚಿತ್ರಿಸಿಕೊಳ್ಳುವ ಸಾಮಾನ್ಯ ಜ್ಞಾನಕ್ಕೆ ಅಂಡಿಕೊಂಡೇ ಇದ್ದೇವೆ.

೧೯ನೇ ಶತಮಾನದ ಉತ್ತರ ಕರ್ನಾಟಕದ ಈ ಭಾಗಗಳಲ್ಲಿಯ ಮಾಧ್ಯಮ ಮರ್ಗದ ದೇಶಸ್ಥ ಬ್ರಾಹ್ಮಣ ಸಮಾಜದ ಒಂದು ಅವಿಭಕ್ತ ಕುಟುಂಬದ ಜೀವನ ಪದ್ಧತಿಗಳ ಸಂಸ್ಕೃತಿಯನ್ನು ಅದರ ಎಲ್ಲಾ ಸೂಕ್ಷ್ಮತೆಗಳೊಂದಿಗೆ ಚಿತ್ರಿಸಿದಲ್ಲದೆ, ಎಲ್ಲಕ್ಕಿಂತ ಮಿಗಿಲಾಗಿ ಲೇಖಕರು ಬಳಸಿಕೊಂಡ ಧಾರವಾಡದ ನೆಲದ ಭಾಷೆಯ ಸೊಗಡು ತನ್ನ ನೈಜತೆಯಿಂದಾಗಿ ಬಹಳ ಪ್ರಭಾವಶಾಲಿ ಪ್ರಯೋಗವಾಗಿ ಕತೆಗೆ ಹೆಚ್ಚಿನ ಬಲವನ್ನು ತಂದುಕೊಟ್ಟಿದೆ. ಧಾರವಾಡ ಭಾಷೆಯು ಪ್ರಾದೇಶಿಕ ಲಕ್ಷಣದ ಕುರುಹವಾಗಿದೆ.

ಹಳ್ಳಬಂತು ಹಳ್ಳ ಕಾದಂಬರಿಯಲ್ಲಿ ಸಾದ್ಯಂತವಾಗಿ ಬರುವ ಒಂದು ಪ್ರತಿಮೆ ನದಿಯದು. ಕಾದಂಬರಿಯ ಹೆಸರಿನಲ್ಲೇ ಒಂದು ನದಿಯ ಚಿತ್ರವಿದ್ದು, ಇಡೀ ಕಾದಂಬರಿಯು ವಿಭಜಿತವಾಗಿರುವುದೂ ನದಿಯ ವಿವಿಧ ಅವಸ್ಥೆಗಳನ್ನು ಸೂಚಿಸುವ ನುಡಿಗಟ್ಟುಗಳನ್ನೊಳಗೊಂಡ ಅಧ್ಯಾಯ ಶಿರ್ಷಿಕೆಗಳ ಮೂಲಕ ಕೊಡಮಾಡಿದ್ದಾರೆ. ನದಿಯ ಮೂಲದಿಂದ ಆರಂಭವಾಗಿ ನಾನಾ ರೀತಿಯ ವ್ಯಕ್ತ ಅವ್ಯಕ್ತ ಪ್ರವಾಹಗಳಲ್ಲಿ ಹರಿದು ಸಾಗರರಮ್ ಪ್ರತಿಯಲ್ಲಿ ಪರ್ಯಾವೆಸನಗೊಳ್ಳುತ್ತದೆ. 'ನದಿ' ಎಂಬ ಪ್ರತಿಮೆಯಲ್ಲಿಯ ಒಂದು ವಿಶೇಷತೆ. ನದಿ ಅಂದರೆ ದೇವತೆ. ದೇವತೆ ಉಗ್ರರೂಪ ಕಾಳಿರಸದ ಭಯಂಕರ ಅವತಾರ. ಶಾಂತಸ್ವರೂಪಿಣಿಯಾಗಿ ಎಲ್ಲರಿಗೂ ಒಳ್ಳೆಯನ್ನು ಬಯಸುವುದಲ್ಲದೇ ವರವನ್ನು ಕೊಡುವ ಒಂದು ಪರಿ. ಆದರೆ ಕೆ.ವಿ.ಅಕ್ಷರವರು ತಮ್ಮ ಮುನ್ನುಡಿಯಲ್ಲಿ ನದಿಗಳೆಂದರೆ ಅವು ನಾಗರಿಕತೆಯ ಆದಿಮದಾಖಲೆಗಳ ಅವು ಹಳೆಕಾಲದ ಎಲ್ಲ ಸ್ಮೃತಿಗಳ ಆಗರ. ಗಡಿಗಳ ಗುರುತು ಮನುಷ್ಯ ವಸತಿಯ ಆವಾಸಸ್ಥಾನಗಳು ಇತ್ಯಾದಿ. ಆದ್ದರಿಂದಲೇ ನದಿಗಳು ನಾಮ ಅನಾದಿ ಕಾಲದಿಂದ ಬದಲಾಗದೆಯೇ ಉಳಿದು ಬಂದಿದ್ದೆಂದು ಭಾವಿಸುತ್ತೇವೆ. ಆದರೆ ಇದಕ್ಕೆ ತದ್ವಿರುದ್ಧವಾದ ಒಂದು ಲಕ್ಷಣವೂ ನದಿಗೆ ಇದೆ. ಯಾವುದೇ ನದಿ ಇರಲಿ ಈ ಕ್ಷಣಕ್ಕೆ ಹರಿದ ನೀರು ಮರುಕ್ಷಣಕ್ಕೆ ಇರಲಾರದು. ಆದ್ದರಿಂದ ಪ್ರತಿಕ್ಷಣವೂ ಬದಲಾಗುತ್ತಲೇ ಇರುವ ವಸ್ತುಗಳು ದಾ.ರಾ.ಬೇಂದ್ರೆಯವರು ಒಂದೆಡೆ ಹೇಳಿರುವಂತೆ, ಗಂಗಾನದಿಯೆಂಬುದು ಭಾಗೀರಥನ ಕಾಲದಿಂದ ಇತ್ತೀಚಿನವರೆಗೂ ಇರುವುದೆಂದು ಭಾವಿತವಾಗಿರುವ ಒಂದು ಅಸ್ತಿತ್ವವಾಗಿದ್ದರೂ ವಾಸ್ತವದಲ್ಲಿ ನಿನ್ನೆಯಿದ್ದ

ಗಂಗಾನದಿ ಇವತ್ತಿನ ಆ ನದಿಗಿಂತ ಸಂಪೂರ್ಣ ಬೇರೆಯದೇ ಸರಿ. ಗಂಗಾನದಿಯು ಇಂಥ ಬದಲಾಗುವ, ಆದರೆ ಬದಲಾಗದಿರುವ ಪ್ರತಿಮೆಯನ್ನು ಬೇಂದ್ರೆಯವರು ಭಾರತದ ಕಾವ್ಯ ಸಂಪ್ರದಾಯಕ್ಕೆ ಹೋಲಿಸುತ್ತಾರೆ. ನಿಜವಾಗಿ ಇದು ಕಾವ್ಯ ಸಾಹಿತ್ಯಗಳಿಗೆ ಮಾತ್ರವಲ್ಲ ಯಾವುದೇ ಸಂಪ್ರದಾಯಕ್ಕೂ ಅನ್ವಯಿಸಬಹುದಾದ ಒಂದು ಪ್ರತಿಮೆ.

ಈ ಕಾದಂಬರಿ ಇನ್ನೊಂದು ಮುಖ್ಯವಾದ ಆಕರ್ಷಣೆ ವಾಸುದೇವಾಚಾರ್ಯರ ವಿಶಾಲ ಏಕತ್ರ ಕುಟುಂಬದ ಮೂರು ತಲೆಮಾರುಗಳ ಬದುಕಿನ ಚಿತ್ರಣ ವಾಸುದೇವಾಚಾರ್ಯರು ಈ ಕಥಾ ವಿಭಾಗದ ನಾಯಕರಾಗಿದ್ದಾರೆ. ಇವರು ಮತ್ತು ಅವರ ಪತ್ನಿ ತುಳಸಕ್ಕ ಇಡೀ ಮನೆತನಕ್ಕೆ ಯಜಮಾನರಾಗಿ ಎಲ್ಲ ಸಂಬಂಧಗಳನ್ನು ಹಲವು ಸಂಕಷ್ಟ ಪರಿಸ್ಥಿತಿಗಳಲ್ಲೂ ಮೇಲೆತ್ತುತ್ತಾರೆ. ಕುಟುಂಬದ ಮೂಲಾಧಾರವೇ ಇವರಿಬ್ಬರ ಸೇವೆ ಔದಾರ್ಯ, ಸಹನೆಗಳು ಎಷ್ಟು ಸಂಪ್ರದಾಯಸ್ಥರಾದರೂ ಆಧುನಿಕ ಬದುಕಿನೊಂದಿಗೆ ಹೊಂದಾಣಿಕೆ ಮಾಡಿಕೊಂಡ ವಿಶಾಲ ಹೃದಯಿಗಳಾದ ಇಬ್ಬರು ಓದುಗರ ಗಮನವನ್ನು ಸೆಳೆದಿವೆ. ಪಕ್ಕಾ ಸಂಪ್ರದಾಯಿಕ ಕತೆಯನ್ನು ಕಾಪಾಡಿಕೊಂಡಿರುವ ಕೆಲವು ಆಧುನಿಕ ವಿಚಾರ ಬದುಕಿನ ಹೊಸ ನೀತಿಗಳನ್ನು ಒಪ್ಪಿ ಪರಿವರ್ತನೆ ಸ್ವಾಗತಿಸುತ್ತವೆ. ರಾಮೂನಂಥ ವಿಶಿಷ್ಟ ಹುಡುಗನ ಬದುಕಿನ ಸಂಪ್ರದಾಯಿಕ ಸಾಮಾನ್ಯ ಜೀವನ ಪದ್ಧತಿಗಳಿಂದ ಬಿಡುಗಡೆ ಪಡೆದು, ಶಾಲೆಗೆ ಶರಣು ಹೊಡೆದು ದೇಶಭಕ್ತಿಯ ಬದುಕನ್ನು ಆಯ್ದುಕೊಳ್ಳುತ್ತಾನೆ. ನಾರಾಯಣ ರುಕುಮಾ ಹಂಗಿನ ಬದುಕಿನ ಬಿಡುಗಡೆ ಹೊಂದಿ ಸ್ವತಂತ್ರ ಬದುಕನ್ನು ಆಯ್ದುಕೊಳ್ಳತ್ತವೆ. ಕೇಶವ ಧೀರ ಮೊದಲಾದವರಲಿ ನವಲಗುಂದ ಗ್ರಾಮೀಣ ವಾತಾವರಣದಿಂದ ಬಿಡುಗಡೆ ಹೊಂದಿ ಧಾರವಾಡದ ಮತ್ತು ಮುಂಬೈನಗರ ಜೀವನವನ್ನು ಆಯ್ದುಕೊಳ್ಳುತ್ತಾರೆ.

ನವಲಗುಂದದ ದೇಸಾಯಿ ಅಪ್ಪಸಾಹೇಬರು ಅನಾರೋಗ್ಯದಿಂದ ಬಳಲುತ್ತಿದ್ದರು. ಅವರಿಗೂ ೬೦ ವರ್ಷ ವಯಸ್ಸಾಗಿತ್ತು. ಮಗರಾಯಪ್ಪ ಇನ್ನು ಅಪ್ರಾಪ್ತವಯಸ್ಸು. ಹಾಗಾಗಿ ಅವರು ದೇಶಗತಿಯ ಭವಿಷ್ಯದ ಬಗ್ಗೆ ಚಿಂತಿತರಾಗಿದ್ದರು. ಅಂತಹದರಲ್ಲಿ ಉತ್ತರದಿಂದ ನರಗುಂದಕ್ಕೆ ಆಗಮಿಸಿದ ಪದ್ಮನಾಭ ಮತ್ತು ಕಮಲನಾಭ ಪಂಥ ಎಂಬ ಬ್ರಾಹ್ಮಣ ತರುಣರು ಕಾವಲಿನವರಿಗೆ ಸೆರೆ ಸಿಕ್ಕರು. ಧಾರವಾಡದ ಕಲೆಕ್ಟರ ಓಜಿಲ್ವೆ ಕಂಪನೀ ಸೈನಿಕರೊಂದಿಗೆ ನರಗುಂದವನ್ನು ಕೊಳ್ಳೆಹೊಡೆದು ಲೂಟಿ ಮಾಡಿದ್ದ, ಸಂಶಯ ಬಂದವರಿಗೆಲ್ಲ ವೆಂಕಟೇಶ ದೇವರ ಗುಡಿಯಲ್ಲಿ ಬಯಲಿನಲ್ಲಿ ನೆಟ್ಟು ನೇಣುಗಂಬಗಳಿಗೇರಿಸುತ್ತಿದ್ದ.

ಆ ಕಾಲದಾಗ ನರಗುಂದ ನವಲಗುಂದ ಯಮನೂರು, ಅಣ್ಣಿಗೇರಿ ಕಾಲವಾಡ, ಬ್ಯಾಹಟ್ಟಿ ಎಲ್ಲಾ ಹತ್ತಿಉರಿಲಿಕ್ಕೆ ಹತ್ತಿದ್ದವು. ಧಾರವಾಡದಿಂದ ನರಗುಂದವರೆಗಿನ ಎಷ್ಟೋ ಹಳ್ಳಿಗಳನ್ನು ಸೈನಿಕರು ಸುಟ್ಟು ಬೇಚಿರಾಕ್ ಮಾಡಿಬಿಟ್ಟರು. ಉಳಿದ ಊರುಗಳ ಸ್ಮಶಾನ ದಂತಾಗಿದ್ದವು ಧಾರವಾಡದ ಸುತ್ತ ಮುತ್ತ ಊರುಗಳು ದಂಗೆಯ ಭೀತಿಯಲ್ಲಿ ಜನರ ಜೀವನ ಸಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ.

''ಧಾರವಾಡದ ದಂಡು ನರಗುಂದದಾಗ ಇನ್ನೂ ಇತ್ತಂತ ಬರೇ ಸಂಶಯದ ಮೇಲೆ ದಿನಾಲೂ ಒಬ್ಬಬ್ಬರನ್ನು ವೆಂಕಟೇಶ ದೇವರ ಗುಡಿಯ ಬಯಲಿನಲ್ಲಿ ನೇಣು ಗಂಬಕ್ಕೆ ತೂಗುಹಾಕುತ್ತಿದ್ದರು. ಪಟ್ಟೆಗಾರ ಓಣೆಯೊಳಗ ಪ್ರತಿಮನೆಗೆ ಒಬ್ಬಬ್ಬರಂತೆ ಗಂಡರಸನ್ನ ಒತ್ತೆಯಾಳಾಗಿ ಇಟ್ಟುಕೊಂಡಿದ್ದರಂತೆ, ದಿನಬಿಟ್ಟು ದಿನ ಸಂಕವ್ವಭಾವಿಯಲ್ಲಿ ಒಂದೆರಡು ಅಪರಿಚಿತ ಹೆಣ ತೇಲುತ್ತಿದ್ದವಂತೆ. ನವಲಗುಂದ ಮಹಲಕರಿ ಕೈ ಕೆಳಗೆ ಇಪ್ಪತ್ತು ಜನ ಪೊಲೀಸ್‌ತುಕಡಿ ಇಟ್ಟಿದ್ದರಂತೆ, ಹಳ್ಳಮಠದ ಸ್ವಾಮಿಗಳ ಬಂಡುಕೋರರಿಗೆ ಆಶ್ರಯ ಕೊಟ್ಟರಂತ ಕೇಳಿ ಮಠ ಎಲ್ಲ ಝಡತಿ ಮಾಡಿಸಿದ್ದರಂತೆ''[೨೨] ಇಲ್ಲಿ ನಮೂದಿತವಾದ ವೆಂಕಟೇಶ ದೇವರಗುಡಿ, ಪಟ್ಟೆಗಾರ ಓಣಿ, ಸಂಕವ್ವನ ಭಾವಿ, ಮಹಲಕರಿ, ಹಳ್ಳದ ಮಠ, ಮುಂತಾದವುಗಳು ನರಗುಂದ ಪ್ರದೇಶದ ಸುತ್ತ ಮುತ್ತಲಿನ ಕೆರೆಯನ್ನು ಗುರುತಿಸುವ ಪ್ರಾದೇಶಿಕ ಹೆಸರುಗಳಾಗಿರುತ್ತವೆ. ಹೀಗೆ ಗೊಂದಲಮಯ ವಾತಾವರಣದಲ್ಲಿ ಪದ್ಮನಾಬನು ತಪ್ಪಿಸಿಕೊಂಡು ಹೋಗಿ ಬ್ರಿಟೀಷರ ಕೈಯಲ್ಲಿ ಸಾಯುತ್ತಾನೆ. ಆದರೆ ಕಮಲ ನಾಭನು ನವಲಗುಂದದಲ್ಲಿ ವೈದಿಕೆಯ ವೃತ್ತಿಯ ಜೊತೆಗೆ ವೈದ್ಯ ವೃತ್ತಿಯನ್ನು ಮಾಡುತತಾ ಅಲ್ಲೆಮಾಸವಾಗುತ್ತಾನೆ.

ನವಲಗುಂದದಾಗಿನ ಹನ್ನೆರಡೂ ಬ್ರಾಹ್ಮಣ ಮನೆಗಳು ಇದ್ದವು. ಅದರಲ್ಲಿ ವೆಂಕಟಣ್ಣಚಾರದು ಒಂದು. ವೆಂಕಣ್ಣಚಾರ್ಯರು ಊರಿಗೆಲ್ಲ ಪಾಂಡಿತ್ಯಕ್ಕೆ ಹೆಸರಾಗಿದ್ದರು. ಅಷ್ಟೇ ಕ್ರೋದಸ್ಥರು ಆಗಿದ್ದರು. ಅವರಿಗೆ ಬೆಳೆದುನಿಂತ ಮಗಳ ಮದುವೆ ಚಿಂತೆಯಾಗಿ ''ಏನಪಾ ದರಿದ್ರ ನವಲಗುಂದ ಅಂದ್ರ ಕಾಶಿನಯಾ, ಪುಣೆದಂಗ ಭ್ರಾಂಬ್ರಊರ? ಕೈಗೊಬ್ಬ ಕಾಲಿಗೊಬ್ಬ ವರ ಇದ್ದಾನ ಯಾವನದರ ಕೊರಳಗೆ ಕಟ್ಟಿ ಕೈ ತೊಳದನಿ ಅಂಬೋಹಾಗದನ? ಇಲ್ಲೆ ಒಟ್ಟು ಹನ್ನೆರಡು ಮನಿ ಅವಭ್ರಾಂಬರವು ಯಾರ ಮನ್ಯಾಗೋ ಮದವಿಗಂಡ ಇಲ್ಲ ಲವಡಿಮಕ್ಕಳು ನವಲಗುಂದದ ಬ್ರಾಂಬ್ರಗೆ ಗಂಡು ಹಡಿಯೋ ಕುವತ್ತ ಇಲ್ಲೊ ಏನೊ ಅಂತೀನಿ... ಏನೋಪಾ ದೇಶವರೀ ನೆವದಿಂದ ನಾಲ್ಕು ಊರು ಅಡ್ಡಾಡಿಯಲ್ಲಾರ ಗಂಡು ಹುಡಕೇನಿ ಅನ್ನೊ ಹಂಗಿಲ್ಲ ಯಲ್ಲಾಕಡೇ ಹೋಡಿ ಬಡಿಲ ನಡೆದದ... ''ರಾಜಾ ಕಾಲಸ್ಯ ಕಾರಣಂ... ಏನ ಮಾಡಲೆವಾ ಏನ ಮಾಡಲೆವಾ''[೨೩] ಎನ್ನುತ್ತ ಹಣೆ ಹಣೆ ಬಡಿದುಕೊಂಡರು.

ಕಿತ್ತು ತಿನ್ನುವ ಬಡತನದಿಂದಾಗಿ ಮಗಳ ಮದುವೆಯನ್ನು ಯಾರಾದರೂ ಹುಡುಗನಿಗೆ ಕೊಟ್ಟು ಮದುವೆ ಮಾಡುವ ವಿಚಾರಮಾಡಿದ ಇವರು ಕಮಲನಾಭ ಪಂತನಿಗೆ ಮದುವೆ ಮಾಡಿ ತಮ್ಮ ಜವಾಬ್ದಾರಿಯಿಂದ ಪಾರಾಗುತ್ತಾರೆ. ಆಗಿನ ಕಾಲದ ಮಳೆ ಬೆಳೆ ಇಲ್ಲದೇ ಬ್ರಾಹ್ಮಣ ಜೀವನ ನಡೆಸುವುದು ಕಷ್ಟದಾಯಕವಾಗಿತ್ತು ಎಂಬುದು ಅಲ್ಲಿನ ಪರಿಸರದ ಒಂದು ಬ್ರಾಹ್ಮಣ ಸಮುದಾಯದ ಬಡತನ, ನೋವು, ಯಾತನೆ ವಿವರಣೆಗಳು ಪ್ರಾದೇಶಿಕ ಅಂಶಗಳಾಗಿ ಕಾಣಿಸಿಕೊಳ್ಳುತ್ತವೆ.

ಮಾದ್ವ ಸಂಪ್ರದಾಯ ವೆನ್ನುವುದು ತುಂಬಾ ಜೀಗಾಟದ್ದು, ಸುಲಭವಾಗಿ ಬದಲಾಗದಂಥದಲ್ಲ. ಕಾನ್ನೂರದ ಮೂಲದ ಒಬ್ಬ ಬ್ರಾಹ್ಮಣ ಸಂಪ್ರದಾಯದೊಳಕ್ಕೆ ಸರಿಹೋಗುತ್ತಾನೆ. ಈ ಸಂಪ್ರಾಯವನ್ನು

ಜೀರ್ಣಿಸಿಕೊಳ್ಳುವ ಪರಿ ಅಸಾಧಾರಣವಾದದ್ದು, ಪರಿಕೀಯ ನಾಡು ಕುಲಗಳಿಂದ ಬಂದ ಕಮಲ ಪಂತನನ್ನು ಮದುವೆಯಾದ ಸಾವಿತ್ರಿ ಆತನು ತಮ್ಮೂರಿನವನಾಗಿ ಮಾಡಿಕೊಂಡು, ಪಕ್ಕಾ ಮಧ್ವ ಸಂಪ್ರದಾಯವನ್ನು ಉಳಿಸಿಕೊಂಡು ಹೋಗುವಳು. ಸಾವಿತ್ರಿಬಾಯಿ ಮುದಿಮುತ್ತೈದರ ಹಂಗಿನ ನುಡಿ ಸಹಿಸಿಕೊಳ್ಳುತ್ತಾ ಹೆಸರಗು ಕಟ್ಟಿ, ಎಲ್ಲೆಂದ್ರಲ್ಲಿ ಆರತಿ ಹರಿಷಿಣ ಕುಂಕುಮಕ್ಕೆ ಹೋಗುವುದು ಒಂದು ಸಂಪ್ರದಾಯ ಹಾಗೆಯೇ ಒಂದು ಕಚ್ಚೆಹಾಕಿಕೊಂಡು ಮೂಗಿನಲ್ಲಿ ನತ್ತು ಧರಿಸಿಕೊಳ್ಳುವುದು ವಿಶೇಷವಾದ ಆಭರಣವಾಗಿದೆ. ಅದರಂತೆಯೂ ಆ ಸಮುದಾಯ ಉಡುಪಿನಲ್ಲಿನ ಸ್ತ್ರೀಯರು ಕಚ್ಚೆಹಾಕಿಕೊಳ್ಳುವುದು ಆ ಪ್ರದೇಶದ ವಿಶೇಷ ಉಡುಪು ಎಂತಲೂ ಹೇಳಬಹುದಾಗಿದೆ. ಯಾವುದೇ ಒಂದು ಶುಭಕಾರ್ಯಗಳಲ್ಲಿ ಹೋದಾಗ ಸುವಾಸನೀಯರು ಒಗಟು ಹೇಳುವುದು ಒಂದು ಸಂಪ್ರದಾಯ. ಒಗಟುಗಳು ಇಲ್ಲದೇ ಯಾವುದೇ ಕಾರ್ಯಕ್ರಮಗಳು ಯಶಸ್ವಿಯಾಗಲಾರವು. ಒಗಟಿನ ಮೂಲಕ ಗಂಡನ ಹೆಸರನ್ನು ಹೇಳುವುದು. ಒಗಟುಗಳು ಮುಖ್ಯ ಪಾತ್ರವಾಗಿ ಮಹಿಳೆಯರಿಗೆ ಮನರಂಜನೆಯ ಒಂದು ಭಾಗವೇ ಆಗಿದೆ. ಇಲ್ಲಿ ಸಾವಿತ್ರಿಬಾಯಿ ಮನಿಯೊಳಗೆ ಪಡಸಾಲ್ಯಾಗ ಹಾಸಿದ್ದ ಚಾಪಿ ಮ್ಯಾಲೆ ಕೂತಂತಹ ಸುವಾಸಿನಿಯರ ಮಧ್ಯೆ ಕಚ್ಚಿಸವಾರಿಸಿಕೊಳ್ಳುತ್ತಾ ಎದ್ದು ನಿಂತು ಮೂಗಿನ ನತ್ತಿನ ಪಿರಕಿ ಕೈಯಿಂದ ತಿರವಿ ಸಮಮಾಡಿಕೊಂಡು ''ಸಮಸ್ತ ಜಗದೋದ್ಧಾರಕ್ಕೆ ಹುಟ್ಟಿ ಬಂದವರು ಉಡುಪಿಯ ಮಧ್ವಾಚಾರ್ಯರು ಮುನವಳ್ಳಿ ಯಂಕಣ್ಣಾಚಾರ ಮಗಳು ಸಾವಿತ್ರಿಬಾಯಿಯ ಉದ್ಧಾರಕ್ಕೆ ಹುಟ್ಟಿ ಬಂದವರು ನವಲಗುಂದದ ಕಮಲಾಚಾರ್ಯರು''[೨೯] ಎಂದು ಒಗಟು ಹಾಕಿ ಗಂಡನ ಹೆಸರು ಹೇಳಿದಳು.

ಕಮಲಯ್ಯ ಕಮಲ ಪತ್ರ ಮೇಲಿನ ನೀರ ಹನೀನ ಆಗಿದ್ದ ಕಾಶಿ ಕಾನಪುರಗಳಲ್ಲಿ ಕಲಿತದ್ದು ಅಷ್ಟಿಷ್ಟು ಪೌರೋಹಿತ್ಯ, ವೈದಿಕ, ವೈದ್ಯ ವಿದ್ಯ ಬರುತ್ತಿತ್ತು. ಆದರೆ ಕಮಲಯ್ಯ ಪೌರೋಹಿತ್ಯ ವೈದ್ಯಕೀ ವಿದ್ಯ ಕೈಗೊಳ್ಳಲೇ ಇಲ್ಲ. ಅವ ಏನಿದ್ದರೂ ವೈದ್ಯಕೀಯ ಕ್ಷೇತ್ರದಲ್ಲಿಯೇ ರಮಿಸ ಬಯಸುತ್ತಿದ್ದ. ನವಲಗುಂದದ ಜೀವನ, ಜೀವನಕ್ರಮ, ಸಮಾಜ ಆಚಾರ ವಿಚಾರ, ನಡೆ-ನುಡಿ, ಅವಗ ಹೊಸದೆ. ವಿಚಿತ್ರ ಅನಿಸೋದೆ ಹತ್ತೋ ಹನ್ನೆರಡೂ ಕುಟುಂಬಗಳ ಆ ಸಣ್ಣ ಬ್ರಾಹ್ಮಣ ಸಮಾಜದಾಗ ಸಹಿತ ಅವಗ ಹಿಡಿದೂ ಬಿಟ್ಟಹಂಗ ಅನಿಸುತ್ತಿತ್ತು. ಹಲ ಕೆಲವು ಮಂತ್ರೋಚ್ಚಾರಣೆಗಳು ಒಂದೆರಡು ಧಾರ್ಮಿಕ ರೀತಿ-ನೀತಿಗಳು ವಿಧಿ-ವಿಧಾನಗಳು, ಕಟ್ಟುನಿಟ್ಟುಗಳು ಆಹಾರದ ಒಂದೆರಡು ಇಷ್ಟು ಇಟ್ಟರೆ ಕಮಲಯ್ಯನನ್ನ ಇಲ್ಲಿಯ ಸಮಾಜಕ್ಕೆ ಬೆಸೆಯುವ ಯಾವ ಬಂಧನವೂ ಇರಲಿಲ್ಲ.

ಆದರೆ ಸಾವಿತ್ರಿಬಾಯಿ ಮುಂದ ಕಾಶಿಗೂ ಹೋಗಲಿಲ್ಲ ಕಾನಪೂರಕ್ಕೂ ಹೋಗಲಿಲ್ಲ ಅಲ್ಲೆ ನವಲಗುಂದದೊಳಗ ತನ್ನ ಮಂದಿ ಮನಿ ಒಳಗ ಸಂಸಾರ ಹೂಡಿದಳು ಹೂಡಿ ತನ್ನ ಗಂಡನಿಗೆ ನವಲಗುಂದದ ಸಂಸ್ಕೃತಿ ಪರಿಯಸಿದಳು. ಮಡಿ ಮೈಲಿಗಿ, ಹಬ್ಬ ಹುಣ್ಣಿಮೆ, ಹೋಳಿಗೆ ಹಾಲು ತುಪ್ಪ, ಹೆತ್ತಪ್ಪ, ಕರಿಗಡಬು, ಬಟವೀ ಪಾಯಸ, ಕಾಯಿರಸ, ತೊಕ್ಕು ಒಡ್ಡಮುರ್ಕ, ಕವಳಿಕಾಯಿ ಉಪ್ಪಿನಕಾಯಿ,

ಮುಂತಾದ ಬಗೆಯ ರುಚಿಕರ ತಿನಿಸುಗಳನ್ನು ಪರಿಚಯಿಸಿದಳು. ಇಲ್ಲಿ ಉತ್ತರ ಕರ್ನಾಟಕದ ಮಾಧ್ವ ಸಂಪ್ರದಾಯ ಕ್ರಮವನ್ನು ಅವರು ಮಾಡುವ ಅಡಿಗೆಯ ಬಗೆಯನ್ನು ಇಲ್ಲಿ ಹೇಳಲಾಗಿದೆ. ಹೀಗೆ ಊಟೋಪಚಾರ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವಂತೆ ಅವರದೇ ವೈಶಿಷ್ಟ್ಯಗಳು ಇರುತ್ತವೆ. ಸಾಮಾಜಿಕವಾಗಿ ಊರಾಗಿನ ಭಾಂಭ್ರ ಶಿಷ್ಟಾಚಾರ, ತಿರಷ್ಪತನ ಚಿಟಕ ಮುಳ್ಳುಡಿಸೋದು, ಹೊಟ್ಟೆಕಿಚ್ಚು, ಹರಕತನ ಇತ್ಯಾದಿಗಳು ಒಂದು ಸಮುದಾಯದ ಜನರಲ್ಲಿ ಕಾಣುವ ಗುಣಸ್ವಭಾವಗಳಾಗಿವೆ.

ಸಾವಿತ್ರಿಬಾಯಿ ಮುದಿ ಮುತ್ತೈದೆಯರ ಹಂಗಿನ ನುಡಿ ಸಹಿಸಿಕೊಳ್ಳುತ್ತಿದ್ಧಳು. ಪ್ರತಿ ವರ್ಷದಂತೆ ಆ ವರುಷನೂ ಸಾವಿತ್ರಿ ಬಸರಾದಳು. ಆವಾಗ ಅವರ ಅವ್ವ ''ಸಾವೀ... ಏನ ಅನಾನೂಕೂಲ ಇದ್ದರೂ ಯಷ್ಟೆತ್ರಾಸಾದರೂ ಈಸರೇ ನಿನ್ನ ಅಗಿಷ್ಟೆ ನಿನ್ನ ಹೊಸಮನ್ಯಾಗ ಹೊತ್ತಿಸಿ ಅಲ್ಲೆ ನಿನ್ನ ಬಾಣಂತನ ಮಾಡತೀನಿ ಈ ನಮ್ಮ ಮನ್ಯಾಗ ಬ್ಯಾಡ ಅಲ್ಪ ಸಂತಾನದ ಅರಿಷ್ಟಮನಿ ಅದ. ಇದು... ನನಗೂ ನಿನ್ನ ಹಂಗ ಆಗುತ್ತಿತ್ತು ಇಲ್ಲೆ. ನಿನ್ನೊಬ್ಬಾಕಿನ್ನಾ ಬಿಟ್ಟು ಹಿಂದ ಮುಂದ ಹುಟ್ಟಿದ ಹತ್ತೆಂಟು ಕೂಸುಗಳು ಹೋದವು ಕೋಡಿಗಳು. ಎನ್ನುತ್ತಾ ವರುಷಗಳ ಹಿಂದೆ ತನ್ನ ಗರ್ಭವನ್ನು ಸೀಳಿ ಸೀಳಿ ಝುರಡಿ ಮಾಡಿ ಹೋದ ತನ್ನ ಕಂದಮ್ಮಗಳನ್ನು ನೆನೆದು ಇನ್ನೊಮ್ಮೆ ಕಣ್ಣಿಗೆ ಸರೆಗೂತ್ತಿಕೊಂಡಳು.''[೬೦] ಮುಂದೆ ಸಾವಿತ್ರ ತಾಯಿದು ಅಲ್ಪ ಸಂತಾನದ ಮನೀ ಇದ್ದರ, ಸಾವಿತ್ರೀದು ಅತಿ ಸಂತಾನದ ಮನೀ ಆತು. ತನ್ನ ಅಲ್ಪಸಂತಾನಕ್ಕೆ ಆ ಹಳೆ ಮನೆ ವಾಸ್ತುವೇ ಕಾರಣ ಎಂಬ ನಂಬಿಕೆಗಳು ಸಹ ಸಾವಿತ್ರ ತಾಯಿಯಲ್ಲಿ ಮೂಡಿ ಬಂದಿರುವುದನ್ನು ಕಾಣುತ್ತೇವೆ. ಗೃಹಪ್ರವೇಶ ಮಾಡಿ ಹೊಸ ಮನಿಯೊಳಗೆ ಹತ್ತಿಸಿದ್ದ ಅಗ್ಗಿಷ್ಟಿಗೆ ಆರಲೇ ಇಲ್ಲವೆನ್ನುವ ನಂಬಿಕೆಯು ಸತ್ಯಕ್ಕೆ ಸಮೀಪದಂತೆ ಭಾಸವಾಗಿದೆ.

ವಾಸಣ್ಣಾ ದೇವರ ಕಟ್ಟಿಮ್ಯಾಲ ಕೂತು ಪೂಜಾ ಮಾಡಲಿಕ್ಕೆ ಹತ್ತಿದ್ದರು. ಆವಾಗ ಅಂಬಕ್ಕೆ ಹಿತ್ತಲ ಪಟ್ಟೀ... ಬಾಗಿಲಕ್ಕ ನಿಂತು ಇರಾ ವಾಸಣ್ಣಾ, ಈಗ ಹೇಳತೇನಿ ಈ ರಂಡೆಗಂಡ ನಾರಾಯಣ ಬಾಕೀ ಹುಡುಗರಹಾಂಗ ಇಲ್ಲ. ಎಲ್ಲಾ ಹುಡುಗರೂ ಮುಂಝಾನೆದ್ದು ವಾಯುಸ್ತುತಿ ಅಂತಿರಬೇಕಾರ. ಇವ ಇನ್ನೂ ದೂಸ ಬಿದ್ದವರಂಗ ಬೀದ್ದಿರತಾನ... ಕೋಣ ಆಗ್ಯಾನ ಇವ ಇನ್ನೂ ಸಂಧ್ಯಾವಂದನೆ ಬರವಲ್ಲದು ವಾಯುಸ್ತುತಿ ಧೂರ ಉಳಿತು. ಮೊನ್ನ ರುಕುಮ ಹೇಳುತ್ತಿದ್ದಳು ನಾರಾಯಣ ಸಂಕವ್ವನ ಭಾವ್ಯಾಗ ಶೂದ್ರರ ಹುಡುಗರ ಸಂಗತೀ ಈಸತಾನಂತೆ. ತಂಬಾಕು ಕುಡೀತಾನಂತ... ಈಗ ಕಪಾಳಕ್ಕೆ ಎರಡು ಕೊಟ್ಟು ಬುದ್ದೀ ಕಲಿಸು... ಇತ್ಯಾದಿಯಾಗಿ ಅಂಬಕ್ಕ ತನ್ನ ಎಂದಿನಂತಿದಿ ಊದಲಿಕ್ಕೆ ಹತ್ತಿದಳು. ಹಳತೆ ಮತ್ತು ಹೊಸತನದ ಸಂಘರ್ಷದ ಕುರುಹಾಗಿ ಇಲ್ಲಿಯ ಸಂಗತಿ ಕಾಣಸಿತ್ತವೆ. ಹಾಗೆಯೇ ಸಂಪ್ರದಾಯ ವಿಚಾರವನ್ನು ನೋಡಬಹುದಾಗಿದೆ.

ವಾಸುದೇವಾಚಾರ್ಯ ಮನೆಯಲ್ಲಿ ಕಾಲಿಟ್ಟದರೋ ಇಲ್ಲವೋ ಅಂಬಕ್ಕ ಅಡರಾಶಿ ಬಂದು, ''ವಾಸಣ್ಣ ಈ ನಾರಾಯಣನ್ನು ಹದ್ದು ಬಸ್ತಾಗೆ ತರಲಿಕ್ಕೇ ಬೇಕಾ... ಒಂದು ಹೋಗಿ ಬಂದಾದೀತು ನೋಡು...

ರಾಮಲಿಂಗನ ಕಾಮಣ್ಣನ ಮಂಟಪದ್ಹಾಗ ಯಾರ ಯಾರದೋ ಸಂಗ್ತೀ ಹಲಗೆ ಬಾರಸತಾನಂತ. ಮತ್ತು ಮನೀಗೆ ಬಂದು ನೀರು ನೀಡಿ ಯಲ್ಲ ಏಕರಾಸ ಮಾಡತಾನ ನಾವೆಲ್ಲಾ ಮನ್ಯಾಗ ಇರಬೇಕೋ ಬ್ಯಾಡೋ ನಾರಣ್ಣ ಒಬ್ಬಾವಾ ಹಾಳಾಗಿಹೋದರ ಹೋಗಲಿ ಅಂದರೆ ಈ ಬೋಧ್ಯಾ ರಾಘ್ಯ ಹಣಮ್ಯಾ ಎಲ್ಲರು ಮಾಂತಪ್ಪನ ಅಂಗಡ್ಯಾಗ ಶಿಣ್ಣೀ ಕರದಂಟು ತಿಂತಾರಂತ ಇದೇನು ಶುಚಿರ್ಭೂತ ಬ್ರಾಂಬ್ರಾ ಮನೀನೋ ಏನು ಶೂದ್ರರ ಗುಡಿಸಲೋ ಎಂದು ಕಿರುಚಿದಳು''.[೬೧]

'ನಾರಾಯಣ' ಎಂಬುವನು ಯಾವಗಲೂ ಬ್ರಾಹ್ಮಣ ಸಮುದಾಯದ ಮಡಿ ಮೈಲಿಗೆಯಿಂದ ತದ್ವಿರುದ್ದವಾದ ಸ್ವಭಾವಾಗಿತ್ತು ವಾಯುಸ್ತುತಿ ಇವನಿಂದ ದೂರುಳಿದಿದ್ದು ಸಂದ್ಯಾವಂದನ ಮಾಡದೇ ಇರುವುದು ಸಂಪ್ರದಾಯಗಳು, ಆಚರಣೆಗಳು ಕಡ್ಡಾಯವಾಗಿ ಪ್ರತಿಯೊಬ್ಬ ಬ್ರಾಹ್ಮಣ ದಿನನಿತ್ಯ ಪಾಲಿಸಿಕೊಂಡು ಬರುವುದನ್ನು ನೋಡುತ್ತೇವೆ. ಮತ್ತು ಅಂಬಕ್ಕನ ಮತ್ತು ವಾಸುದೇವಾಚಾರ್ಯರ ಮಾತನ್ನು ಚಿಕ್ಕವರು ಚಾಚುತಪ್ಪದೇ ಪಾಲಿಸುತ್ತಿದ್ದರು. ನಾರಾಯಣ ಮಾತ್ರ ಯಾವುದಕ್ಕೂ ತಲೆ ಕೊಡೆಸಿಕೊಳ್ಳದೇ ಇತರ ಜಾತಿಯವರ ಸಂಗತಿ ತನ್ನ ಸಂಪರ್ಕ ಬೆಳಸಿದ್ದನ್ನು ಈ ದೃಷಾಂತದ ಮುಖಾಂತರ ತಿಳಿದುಕೊಳ್ಳಬಹುದು. ಹಾಗೆಯೇ ಆಗಿನ ಕಾಲದಲ್ಲಿ ವರ್ಗ ಸಂಘರ್ಷಗಳು ಏಕಮುಖವಾಗಿದ್ದನ್ನು ಕಾಣುತ್ತೇವೆ. ಮೇಲ್ವರ್ಗದ ಜನರು ತಮ್ಮ ಮಾತಿನ ಚಾಕುಚಾಕ್ಯತೆಯಿಂದ ಅವರ ಮನಸ್ಸನ್ನು ನೋಯಿಸುವ ಸಂಗತಿಗಳು ಇದ್ದರೂ ಅವರು ಕೆಳವರ್ಗದವರ ಯಾವುದೇ ವಿರೋಧವನ್ನು ಕಾಣದೇ ಹೋಗುತ್ತವೆ. ಅಂತಹ ಪ್ರಸಂಗವನ್ನು ಈ ತೆರನಾಗಿ ನೋಡಬಹುದು.

ಅಂಬಕ್ಕ ''ಸುಡ್ಲಿ... ಬರೇ ಕೃಷ್ಣಗಡ್ಡಿ ತಿಂತಾವ ಮನೀ ಅಂಬೋದು ಶೂದ್ರರ ಮನಿ ಆಗೇದ'' ಎಂದು ಚಡಪಡಿಸುತ್ತಿದ್ದಳು. ಹೋದ ಸಾರೆ ಬಂದಾಗ ಕಲಪಾರಟೀ ಒಂದು ಕಬ್ಬಣ ಹಂಚು ಕಳವುಮಾಡಿದ್ದರು ಎಂದು ಅಂಬಕ್ಕ ರೇಗ್ಯಾಡಿದಳು.

ಒಂದೊಂದು ಒದ್ದೀತಲೆಗೂದಲಿನ ಹನೀ ನೆಲಕ್ಕೆ ಬಿದ್ದರ ನೂರೋ ಸಾವಿರೋ ವರ್ಷ ಗಂಡ ಅಂಬೋ ಪ್ರಾಣಿ ನರಕದಾಗಬಿದ್ದು ಒದ್ದಾಡದಂತೆ ಅದಕ್ಕೆ ತಲಿ ಬೋಳಿಸಿಕೊಂಡು ಕೆಂಪು ಸೀರೆ ಉಟಗೊಂಡು ಯಾರಾದರ ಆಶ್ರಯದಾತರ ಮನ್ಯಾಗ ಬಿದ್ದು ಕತ್ತಿಹಂಗ ದುಡೀ ಬೇಕಾಗತದ. ಮುಂಜಾನೆಯಿಂದ ಸಂಜಿತನಕ ದುಡಿದು ದುಡಿದು ಒಪ್ಪತ್ತು ಊಟಮಾಡಿ ಬಿದ್ದಿರಬೇಕಾಗತದ. ಮಡೀ ಮಡೀ ಮತ್ತು ಎಲ್ಲ್ಯಾರ ಸ್ವಲ್ಪ ಮೈಲಗಿಯಾದರೂ ಆ ಗಂಡ ಮತ್ತು ನೂರು ವರ್ಷ ನರಕದಾಗ ನರಳದಂತ ನನ್ನ ಕೂದಲಕ್ಕ ಜೋತುಬಿದ್ದರದ ಸುಟ್ಟಿ ಬರಲಿ. ಸ್ವಂತದ ಪುಣ್ಯ ಏನಾರ ಘಳಿಸಾರತದೋ ಇಲ್ಲೋ ಖೋಡಿ, ರಾತ್ರಿ ಮಲೊಕಬೇಕಾರ ನೀರು ಕುಡಿ ಬೇಕಾರ ಸಹಿತ ಮಡಿವೇ ಧಾಬಳಿ ಹಚ್ಚಿಕೊಂಡು ನಿರು ಕುಡೀಬೇಕಾಗುವುದು. ಪ್ರತಿ ಸಾರೆ ಬಚ್ಚಲದಾಗ ಮಣೆಮ್ಯಾಲೆ ತೋಡಿ ತನಕಾ ಸೀರಿ ಏರಿಸಿಕೊಂಡು ಕೂತು ಆಕೂಸುಗಳಿಗೆ ನೀರು

ಹಾಕಿ ಎರೀತಿರಬೇಕು. ಆವರ್ಷ ಎರಡು ಬಾಣಂತನ ಮಾಡತಿನಿ. ದೂಪ. ದೀಪ ಲೋಭಾನ ಹಾಕಿ ಕಟ್ಟಬೇಕು. ಆದರೂ ನಾನು ಬಂಜೀನ, ಶಾಪದ ಬಂಜಿ, ಹದಿನೈದು ಇಪ್ಪತ್ತು ವರ್ಷವಾಯಿತು. ರುಬ್ಬಿಸಿ ರುಬ್ಬಿಸಿ ರಟ್ಟೆ ನೊಯೊಂಗ ಉದ್ದಿನ ಹಿಟ್ಟು ಶ್ರದ್ಧಾದ ದಿವಸ ಉದ್ದೀನ ವಡೀ ತಿಂತಾನ ಅವ ಮ್ಯಾಲಕೂತ ಗಂಡ ಅಂಬೊರಂಡೇ ಗಂಡ, ಸಾಯೋಕಿಂತ ಮುಂಚೆ ನನಗೂ ಒಂದು ಕೂಸು ಕೊಟ್ಟು ಸಾಯಬೇಕಿತ್ತು''[೬] ಎನ್ನುವ ಅಂಬಕ್ಕನ ಮಾತುಗಳು ಸಹಜವಾದದ್ದು ಅಲ್ಲ. ಒಬ್ಬ ವಿದವೆ ಸ್ವತಹ ಅನುಭವಿಸಿದ ನೋವು ಯಾತನೆ ಸಮಾಜದಿಂದ ನೋಡುವ ಪರಿ, ಬಂಜೆ ಎನ್ನುವ ಪಟ್ಟ ಮುಂತಾದ ಅನೇಕ ಮಹಿಳಾ ಸಮಸ್ಯೆಗಳಾದ ಬಾಲ್ಯವಿವಾಹ, ವಿಧವಾಬಂಜೆತನ ರೂಡಿ, ಆಚಾರ ಸಂಪ್ರದಾಯ ಮೂಡನಂಬಿಕೆಗಳು ಆಗಿನ ಪರಿಸರದಲ್ಲಿ ಆಳವಾಗಿ ಬೇರೂರಿದ್ದವು ಎಂಬ ಪ್ರಸಂಗವನ್ನು ಕಂಡುಕೊಳ್ಳಲಾಗಿದೆ. ಇತಹ ಸಂಪ್ರದಾಯ ಮೂಢ ನಂಬಿಕೆಗಳು ಬ್ರಾಹ್ಮಣ ಸಮುದಾಯದಲ್ಲಿ ಧಾರವಾಡದ ಸುತ್ತ ಮುತ್ತಲಿನ ಪರಿಸರದಲ್ಲಿ ಕಾಣಸಿಗುತ್ತವೆ.

ಕಮಲಾಚಾರ್ಯ ಮತ್ತು ಸಾವಿತ್ರಿಬಾಯಿ ತೀರಿಕೊಂಡಿದ್ದ ಮನೆತನದ ಪರಿಸ್ಥಿತಿ ಅಂತಹ ಹೇಳಿಕೊಳ್ಳುವಂತೆ ಇರಲ್ಲಿಲ್ಲ. ಆದರೂ ದೇಸಾಯರು ದಾನಕೊಟ್ಟದ್ದು ಒಂದು ಮನಿ, ಮತ್ತು ಮೊರಬ ಹಾಗೂ ಅಳಗವಾಡಿಯೊಳಗೆ ನಾಲ್ಕು ಎಕರೆದ್ದು ಒಂದೊಂದು ಲಾವಣೀ ಹೊಲಗಳು. ಯಮನೂರಿನೊಳಗೆ ಒಂದೊಂದು ಹೊಲ ಸಾವಿತ್ರಿಬಾಯಿ ಮುಖಾಂತರ ಪಂತರ ಆಸ್ತಿಗೆ ಸೇರಿದ್ದವು. ಅಳಗವಾಡಿ ಮೊರಬದ್ದು ಲಾವಣಿ, ಉಳಿದದ್ದೆಂಟು ಕೋರಪಾಲು ಹೆಸರಿಗೆ ಹೊಲ ಮನಿ ಖರೆ. ಆದರೆ ಬ್ರಾಹ್ಮಣರ ಕಮತ! ಇವರ ಕೈಗೆ ಬರೋದು ಅಷ್ಟಕಷ್ಟ, ಮಳೀ ಬಳೀ ದೃಷ್ಟಿಯಿಂದ ಒಳ್ಳೊಳ್ಳೇ ದಿವಸಾನೂ ಕಡಿಮೆ. ಇತ್ತಲಾಗ ಮನ್ಯಾಗ ಬ್ಯಾನಿ, ಬ್ಯಾಸರಕಿ, ಸೂತಕ, ವೃದ್ಧಿ, ಲಗ್ನ, ಮುಂಜಿ ನಡದ ಇರುತ್ತಿದ್ದವು. ಪ್ರತಿವರುಷ ಭೋರಜಗಲಿ ಬರೆಸುವದೂ ವೊರಸು ಬಿಗಿಸುವುದೂ ನಡೆದ ಇರುತ್ತಿತ್ತು. ವೆಂಕಣ್ಣನು ತನ್ನ ಮೂರು ರೂಪಾಯಿ ಹನ್ನೆರಡಾಣೆ ತಂದು ಅಣ್ಣಾವಾಸಣ್ಣನ ಕೈಯಾಗ ಹಾಕಿ ನಿರುಂಬಳ ಆಗಿ ಬಿಡುತಿದ್ದ ನಡು ನಡುವೆ ಸೇಂಗಾಕಾಳು, ಯಾವ ಯಾವದರು ಕಾಯಿಪಲ್ಲೆ ಒಮ್ಮೊಮ್ಮೆ ಅರ್ಧಚೀಲ ಜೋಳ್ಯ ಪಾವಚೀಲ ಗೋದಿ ಇನ್ನೇನಾರ ಮನೀಗ ತಂದು ಹಚ್ಚತಿದ್ದ. ಇಷ್ಟರಿಂದ ಹೊಟ್ಟೆ ಬಟ್ಟೆ ಚಿಂತಿ ತಪ್ಪತಿದ್ದಿಲ್ಲ...!

ಎರಡು ಕೋರ ಪಾಲಿನ ಹೊಲಗಳಿಂದ ಬರುವ ಧಾನ್ಯ ದವಸಗಳಿಂದ ವರ್ಷೋಪ್ಪತ್ತಿನ ಚಟ್ನಿ, ಭಕ್ರಿಸಾಗುತ್ತಿತ್ತು. ಉಳಿದೆರಡು ಲಾವಣೆ ಹೊಲಗಳಿಂದ ಬರುವ ರೊಕ್ಕದಿಂದ ಅದೋನಿ ಕೃಷ್ಣಪ್ಪನವರ ಅಂಗಡ್ಯಾಗಿನದು ಉದ್ರಿ ತೀರತಿತ್ತು. ಲಾವಣಿ ಹೊಲಗಳಾದ ಅಳಗವಾಡಿಗೆ ಮೊರಬಕ್ಕ ವಾಸುದೇವಾಚಾರ್ಯರು ಹೋಗಿ ಬರಬೇಕಾಗುತ್ತಿತ್ತು. ಮನೆತನ ಹಿರಿಯರಾದ ಇವರು ಲಾವಣಿ ಪಡೆದ ರಸೀದಿಗೆ ಸಹಿ ಮಾಡಬೇಕಾಗುತ್ತಿತ್ತು. ಒಂದು ದಿನ ''ಈ ಕೇಶವ, ರಾಮ್ಯಾ ಪಾಂಡ್ಯ ಕೇಳ್ರೀ ಇನ್ನ ಮ್ಯಾಲ ನೀವು ಓದೀ

ಬರದೂ ಏನಾರ ಒಂದು ಹಿಡಿದು ಹ್ಹೊರಗಿಂದ ನಾಲ್ಕು ದುಡ್ಡು ತರಲಿಲ್ಲ ಅಂದ್ರ ಈ ಮನೀ ನಡೆಯೋದು ಕಠಿಣ ಅದ, ಮನ್ಯಾಗ ಲಗ್ನ ಬಾಣಂತನ ಸಾವು... ಸಾಲ ಅನಕೋತ ಒಂದೊಂದು ಹೊಲ ಕೈಬಿಡಲಿಕ್ಕೆ ಹತ್ಯಾವ. ಇನ್ನಾ ಅಣ್ಣಿಗೇರಿದು ಯಮನೂರಿದು ಅಷ್ಟು ಉಳಿದಾವ. ಇಷ್ಟರ ಮ್ಯಾಲ, ಹಬ್ಬ ಹುಣ್ಣಿವಿ, ಜಡ್ಡೂ ಜಾಪತ್ರಿ. ಬಸರು ಬಾಣಂತನ ಅಂತ ಹ್ಯಾಂಗ್ಯಾಂಗ ಒದ್ದಾಡಿದರೂ ಬಗೀ ಹರಿಯೊದಲ್ಲ. ಕಿಬಿತಿಬಿ ಹೇತಾಡಿದರೂ ಉತ್ಪನ್ನ ಖರ್ಚು ತಾಳೆ ಆಗೂದಲ್ಲ. ಒಂದು ವರುಷದ ಉತ್ಪನ್ನದಾಗ ಎರಡು ಮೂರು ವರುಷ ಸಾಗಿಸಬೇಕಾಗತದ. ಹೆಸರಿಗೆ ಜಮೀದಾರ್‍ರು, ಹೆಸರಿಗೆ ಆಸ್ತಿ, ರೈತರ ಹೊಲಮಾಡವ ಕೊಟ್ಟರ ಕೊಟ್ಟ, ಇಲ್ಲದಿದ್ದರ ಇಲ್ಲ. ಹೇಳಿ ಕೇಳಿ ಬ್ರಾಂಬ್ರ ಜಮೀನು ಲಾವಣೇನೂ ಅಷ್ಟ ಕೋರಪಾಲು ಅಷ್ಟಾ ಆ ರೈತನ ಹೊಟ್ಯಾಗ ದೇವರು ಹೊಕ್ಕ ನಮಗೇನಾರ ನಾಲ್ಕು ಕಾಳ ಕೊಡಿಸದರ ಇಲ್ಲದಿದ್ದರೆ ಇಲ್ಲ. ಲಕ್ಷ್ಮಿ ಪೂಜಾಕ್ಕ ಹೊರಗಿನ ವೈಶ್ಯರ ಅಂಗಡಿಯಲ್ಲಿ ಅಡ್ಯಾಡಿ ದಕ್ಷಿಣೆಗೆ ಕೈ ಚಾಚಿದರೆ ಒಟ್ಟು ನಾಲ್ಕು ರೂಪಾಯಿ ಬರೋದಿಲ್ಲ. ದಕ್ಷಿಣೆ ಒಂದು ರೂಪಾಯಿ ಕೊಟ್ಟು ಕಳಿಸೋ ಅಂತಾರ. ಕೊಟ್ಟ ಕಳಸೋ ಅಂತ ನಾ ಏನು ಭಿಕ್ಷದವನೇನು? ಅನ್ನುವರಿಂಗ ಅಂತಾರ''[೩೩] ಎಂದು ವಾಸುದೇವಾಚಾರ್ಯರು ಇಡಿ ಪಂತರ ಮನೀ ಭವಿಷ್ಯವನ್ನು ಪಣಕ್ಕ ಹಚ್ಚೊ ಸಾಹಸದ ಮಾತಾಗಿತ್ತು.

ಒಟ್ಟಾರೆಯಾಗಿ ಆರ್ಥಿಕ ಪರಿಸ್ಥಿತಿಯನ್ನು ನಿಭಾಯಿಸಲು ಈ ಹೊಲಗಳು ಇದ್ದರೆ ಸಾಕಾಗುವುದಿಲ್ಲ, ಆದಾಯ ಕರ್ಚುಗಳ ಸಮತೋಲನದ ಲೆಕ್ಕಾಚಾರ ಬಡತನ ಸಿರಿತನಗಳ ಸ್ವಭಾವಗಳ ಗುಣದೋಷಗಳ ಬಗೆಗಿನ ವಿಚಾರಗಳನ್ನು ಇಲ್ಲಿನ ವಿವರಣೆಗಳ ಮೂಲಕ ವಿವೇಚಿಸಬಹುದಾಗಿದೆ.

ಬ್ರಾಹ್ಮಣ ವರ್ಗದ ಸಮುದಾಯದಲ್ಲಿ ಶ್ರಾದ್ಧಾ ಪಕ್ಷವೆಂದು ತಂದೆ ತಾಯಿ ಬಂಧುಬಳಗದವರು ತೀರಿಹೋದ ನಂತರ ಮಾಡುವ ಒಂದು ಕ್ರಿಯಾವಿದಿ ವಾಸಣ್ಣನವರು ತಮ್ಮ ತಂದೆಯ ಶ್ರಾದ್ಧವನ್ನು ಈ ರೀತಿಯಲ್ಲಿ ಕ್ರಿಯಾ ಸಾಂಗವಾಗಿ ಸಾಗಿದ ಬಗೆ ''ಹೂಂ..... ಈಗ ಯಳ್ಳು ನೀರು ತೊಗೊಳ್ರೀ... ಒಂದೊಂದು ಪಿಂಡದ ಮ್ಯಾಲ ಬಿಡಬೇಕಾದ ಒಬ್ಬೊಬ್ಬರು ಹೆಸರು ಹೇಳಿ ಕೊಳ್ರೀ..... ತಂದಿ..... ತಂದೀ ತಂದೀ..... ಅವರ ತಂದೀ.... ಅಂದ್ರ ಅಪ್ಪ ಅಜ್ಜಾ...... ಮುತ್ತಜ್ಜಾ. ಹೂಂ ಹೇಳ್ರೀ ಅಸ್ಮತ್ ಪಿತರಂ ಕಮಲಾಚಾರ್ಯ ಶರ್ಮಣಂ..... ಭಾರದ್ವಾಜ ಗೋತ್ರಂ ವಸುರೂಪಾ ಸ್ವದಾನ ಮಸ್ತರ್ಪಯಾಮಿ....ಅಸ್ಮತ್ ಪಿತಾಮಹಂ ಮಾಧವಾಚಾರ್ಯ ಶರ್ಮಣಾಂರುದ್ರ ರೂಪಂ..... ಅಸ್ಮಾತ್ ಪೃಪಿತಾಮಹಂ ಬಾಳಾಚಾರ್ಯ ಶರ್ಮಣಂ ಭಾರದ್ವಾಜಗೋತ್ರಂ ಆದಿತ್ಯರೂಪಂ ಸ್ವಧಾನಸ್ತಪರ್ಯಾಮಿ... ತರ್ಪಯಾಮಿ ತರ್ಪಯಾಮಿ....''[೩೪]

''ಇಕಾ ವಾಸಣ್ಣಾ ಈಗ ಹೇಳಿರತೇನಿ.... ಈ ರಂಡೇಗಂಡ ನಾರಾಯಣ ಬಾಕಿ ಹುಡುಗರ ಹಾಂಗ ಇಲ್ಲ ಎಲ್ಲ ಹುಡುಗರೂ ಮುಂಝುನೆದ್ದ ವಾಯುಸ್ತುತಿ ಅಂತಿರ ಬೇಕಾರ ಇವ ಇನ್ನೂ ಧೂಸ್ ಬಿದ್ದವರ ಹಂಗ ಬಿದ್ದಿರತಾನ ಕೋಣ ಆಗ್ಯಾನ ಇನ್ನೂ ಸಂಧ್ಯಾವಂದನೆ ಬರವಲ್ಲದು. ವಾಯುಸ್ತುತಿ ಧೂರs ಉಳೀತು''[೩೫]

ಮದ್ವ ಸಂಪ್ರದಾಯಾನುಸಾರವಾಗಿ ಮುಂಜವಿಯಾದ ಹುಡುಗರು ವಾಯುಸ್ತುತಿ ಹೇಳುವುದು ಸಂಧ್ಯಾವಂದನ ಮಾಡುವುದು ದಿನನಿತ್ಯದ ಕೆಲಸವಾಗಿತ್ತು ಅಲ್ಲದೇ ಜಪತಪಗಳು ಆಚಮನ, ತರ್ಪಣ, ಮಂತ್ರ ಪುಷ್ಪ ಕೂಡ ಕಲಿಯಬೇಕಾಗಿದ್ದಿತು.

ಮನಿ ಬಾಗಲಿಗೆ ನಾಲ್ಕು ಛಕ್ಕಡಿಗಳು ಬಂದು ನಿಂತಾಗ ಧಾನ್ಯ ತುಂಬಿದ ಚಕ್ಕಡಿ ಮತ್ತು ಎತ್ತುಗಳಿಗೆ ಆರತಿ ಬೆಳಗಿದರು. ನಂತರ ಆಳುಗಳೆಲ್ಲರೂ ಹಗೆದ ಜ್ಯಾಳವನ್ನು ಹಾಕಿದರು. ವಾಸುದೇವಾಚಾರ್‍ಯರು ಕೈಕಾಲು ಮುಖ ತೊಳೆದುಕೊಂಡು ದಾಬಳಿ ಹಚ್ಚಿಕೊಂಡು ಹಗೆದ ಮುಖಕ್ಕೆ ಅರಿಷಿಣ ಕುಂಕುಮ ಏರಿಸಿ

''ಆಯಿ ಕಲಿ ಕಲ್ಮಶ ನಾಶಿನಿ ಕಾಮಿನಿ ವೈದಿಕ ವೇದಮಯೇ|

ಕ್ಷೀರ ಸಮುದ್ಭವ ಮಂಗಳ ರೂಪಿಣಿ ಮಂತ ನಿವಾಸಿನಿ ಮಂತ್ರನುತೇ||

ಮಂಗಳದಾಯಿನಿ ಅಂಬುಜವಾಸಿನಿ ದೇವಗಣಶ್ರಿತ ಪಾದಯುತೇ|

ಜಯ ಜಯ ಹೇ ಮಧುಸೂಧನ ಕಾಮಿನಿ ಧಾನ್ಯ ಲಕ್ಷ್ಮೀ ಪಾಲಯಮಾ||''[೬]

ಎಂದು ಧಾನ್ಯಲಕ್ಷ್ಮೀಯ ಸ್ತೋತ್ರ ಪಠಿಸುತ್ತ ಮಂಗಳಾರತಿ ಮಾಡಿದರು. ಮನಿಮಂದಿ ರೈತರು, ಆಳುಕಾಳುಗಳೆಲ್ಲ ಭಯ ಭಕ್ತಿಯಿಂದ ಕೈಮೂಗಿದು ಮಂಗಳಾರತಿಯನ್ನು ತೆಗೆದುಕೊಂಡರು. ಚಕಡಿಗೆ ಒಂದರಂತೆ ನಾಲ್ಕು ತೆಂಗಿನ ಕಾಯಿಗಳನ್ನು ನೆಲಕ್ಕೆ ಅಪ್ಪಳಿಸಿ ಚೂರು ಚೂರು ಮಾಡಿ ಕೊಬ್ಬರಿಗಾಗಿ ಕೋಲಾಹಲನಡೆಸಿದರು.

ವಾಸುದೇವಾಚಾರ್ಯರು, ದೊಡ್ಡದೇವರ ಪೂಜೆ, ಸಾಲಿಗ್ರಾಮಕ್ಕೆ ಅಭಿಷೇಕ ನೈವೇದ್ಯ ವೈಶ್ವದೇವ, ಬಲಿ ಹರಣ, ಮಂಗಳಾರತಿ ಹಬ್ಬ ಹುಣವಿ, ಲಕ್ಷ್ಮೀನರಸಿಂಹ ದೇವರ ನವರಾತ್ರಿ, ವರ್ಷಕ್ಕೆರಡು ಶ್ರಾದ್ಧ ಪಕ್ಷ ಇವೆಲ್ಲವನ್ನು ತಮ್ಮ ಕರ್ತವ್ಯ ಪರದಿಯೊಳಗೆ ಧಾರ್ಮಿಕ ಆಚರಣೆಗಳು ಸೇರಿದ್ದವು ಎಂದು ಭಾವಿಸಲಾಗಿದೆ.

ವಾಸುದೇವಚಾರ್ಯರ ಮನೆಗೆ ಶ್ರೀಮಠದ ಕ್ಯಾಂಪ್ ಹಾಕಿ ಶ್ರೀಗಳ ಪೂಜೆ ಮಾಡುವುದನ್ನು ಪಂತದ ಮನೆಯಲ್ಲಿ ಎಂಬುದನ್ನು ನಿರ್ಧರಿಸಿದರು ಶ್ರೀಗಳ ಸ್ವಾಮಿ ಪೂಜೆಗೆ ''ಅಂಬಕ್ಕ, ತುಳಸಕ್ಕ, ಸೊಸೆಂದರು ಕೂಡಿ ಹೂಬತ್ತಿ ಮಂಗಳಾರತಿ ಬತ್ತಿ, ಗೆಜ್ಜೆ ವಸ್ತ್ರ ಮಾಡಲಿಕ್ಕೆ ಹತ್ತಿದರು. ಗಂಡಸರಲ್ಲಿ ಮನಿ ಸಾಮಾನೆಲ್ಲ ಹಿತ್ತಲಿಗೆ ಸಾಗಿಸುತ್ತಾ ಸ್ವಾಮಿಗಳಿಗೆ ಮನೀ ತೆರವು ಮಾಡಿ ಕೊಡಲಿಕ್ಕೆ ಹತ್ತಿದರು. ರುಕುಮಾ ದೊಡ್ಡಹಂಡೇ ಉರುಳಿಸಿಗೋತ ಕಟಗೀ ಒಟ್ಟೋ ಅಲ್ಲೆ ಸರಸಲಿಕ್ಕೆ ಹತ್ತಿದ್ದಳು, ನಾರಾಯಣ ಬೋಧಹಣಮೂ ಕೂಡಿ ಗೋದಿ ಚೀಲದ ಅಡ್ಡಣಾಗಿ ಮೂಲೆಗೆ ಸರಸಲಿಕ್ಕೆ ಹತ್ತಿದ್ದರು. ಸಣ್ಣಸಣ್ಮ ಹುಡುಗರು ಸಣ್ಣ ಸಣ್ಣ ಪಾತೇಲಿ ಕಲಪರಟಿ, ಕಸಬರಗಿ ಹಾಸಗಿ ಸುಳ್ಳಿ, ಈಳಗಿ, ಡಬ್ಬಿಯೆಲ್ಲಾ ಎತ್ತೆತ್ತಿ ಇಲ್ಲಾ ಹಳೆ ಅಡಗಿ ಮನ್ಯಾಗ, ಇಲ್ಲಾ ಬಾಣಂತೀ ಖೋಲ್ಯಾಗ ಇಡಲಿಕ್ಕೆ ಹತ್ತಿದ್ದರು.''[೬]

ಇಲ್ಲಿ ಬಳಸಿರುವ ಪದಗಳಾದ ಹಂಡೇ, ಪಾತೇಲಿ ಕಲಪಟಿ, ಕಸಬರಿಗಿ, ಮುಂತಾದವುಗಳನ್ನು ಗಮನಿಸಿದಾಗ ಆಯಾ ಪ್ರದೇಶಿಕವಾಚಿಕ ಪದಗಳಾಗಿವೆ. ಇವು ದೈನಂದಿನ ಜೀವನದಲ್ಲಿ ಬಳಸತಕ್ಕಂತ ಪದಗಳು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವನ್ನು ಕಾಣುತ್ತೇವೆ. ಇವು ಅಪ್ಪಟ ಧಾರವಾಡ ಭಾಷೆಯಲ್ಲಿ ಬಳಸುವ ಶುದ್ಧ ದೇಶಿಯ ಪದಗಳಾಗಿವೆ. ಇವುಗಳಿಂದಲೇ ನಾವು ಅವರ ಬದುಕಿನ ಚಿತ್ರಣವನ್ನು ಕಂಡುಕೊಳ್ಳುವುದಲ್ಲೇದ ಆ ಕಾಲದ ವಸ್ತುಗಳಿಂದ ಅದು ಆಧುನೀಕರಣಕ್ಕೆ ಒಳಗಾಗಿತ್ತೆ ಎಂಬುದನ್ನು ಸ್ಪಷ್ಟಪಡಿಸಲು ಕೂಡ ಸಹಾಯವಾಗುತ್ತದೆ.

ಶ್ರೀಮಠದ ಪೂಜೆಗೆ ಚತುರ್ದಶಿ ಸಂಜೀ ಹೊತ್ತಿಗೆ, ಇತ್ತಲಾಗ ತಿರ್ಲಾಪುರ, ಪಡೇನೂರು ಅತ್ತಲಾಗ ಯಮನೂರು ಅರೆಕುಟ್ಟಿ, ಕೋಮಾರಗೊಪ್ಪ, ಚಿಲಕವಾಡ, ಅನಕೋಡ, ಸುತ್ತೂಕಡೆಯ ಬ್ರಾಹ್ಮಣರು ಒಬ್ಬೊಬ್ಬರಾಗಿ ಇಬ್ಬಬ್ಬರಾಗಿ, ಗುಂಪು ಗುಂಪಾಗಿ, ಮೂಲ ರಾಮದೇವರ ದರ್ಶನ ತಕ್ಕೊಂಡು ಮುದ್ರಾಧಾರಣ ಮಾಡಿಸಿಗೊಂಡ ಪ್ರಸಾದ ತಗೊಂಡು ಹೋಗಲಿಕ್ಕೆ ಅಂತ ನವಲಗುಂದಕ್ಕೆ ಬರಲಿಕ್ಕೆ ಹತ್ತಿದರು. ಸಂಜೆ ಬಿಸಿಲು ಹಣ್ಣಾಗುವ ಹೊತ್ತಿಗೆ ಮೂರು ಕೊಲ್ಲಾರಿ ಬಂಡಿಗಳೊಳಗ ಶ್ರೀಮಠಸ್ವಾಮಿ ನವಲಗುಂದದ ಸರಹದ್ದನ್ನು ತಲುಪಿತು.



ನವಲಗುಂದದ ಸುತ್ತಮುತ್ತಲಿನ ಸ್ಥಳೀಯ ಊರುಗಳ ಪರಿಚಯದ ಜೊತೆಗೆ ಮಧ್ವ ಸಂಪ್ರದಾಯ ಆಚರಣೆ, ನೀತಿ, ನಿಮಗಳು ಧಾರ್ಮಿಕವಾಗಿ ಯಾವ ರೀತಿಯಾಗಿ ಸ್ಥಳೀಯ ಜನರ ಮೇಲೆ ಪ್ರಭಾವ ಬೀರಿತು ಎಂಬುದನ್ನು ತಿಳಿಯಬಹುದಾಗಿದೆ. ಶ್ರೀಮಠದ ಪೂಜೆಯಲ್ಲಿ ನಾರಾಯಣನು ಬಹಳ ಹುರುಪಿನಲ್ಲಿ ಎಲ್ಲ ಕೆಲಸ ಕಾರ್ಯಗಳಲ್ಲಿ ನೆರವಾದನು. ಸಂತರ ಮನಿಯ ಪ್ರಧಾನ ರಂಗದ ಮೇಲೆ ಭಕ್ತಿ ಭಾವಗಳ ಪೂಜಾ ಪುನಸ್ಕಾರಗಳ ಅಖಂಡ ವರ್ತನ ನಡೆದಿರಬೇಕಾದರ ನೇಪಥ್ಯದೊಳಗೆ ಒಂದು ಬ್ಯಾರೇನ ನಾಟಕ ನಡೆದಿತ್ತು ರುಕುಮಾ ಮತ್ತು ನಾರಾಯಣ ಬಗ್ಗೆ ಎಲ್ಲರೂ ಆಡಿಕೊಳ್ಳುವಂತಾಗಿತ್ತು.

''ಹೇಳಿ ಕೇಳಿ ಶೂದ್ರರ ಹೆಣಮಗಳು ಮನೀ ಹಿತ್ತಲದಾಗ ಇರತಾಳ ನಿಮ್ಮ ಮಡಿ ಮೈಲಿಗೆಗಳಿಗೆ ಏನೂ ತೊಂದರೆ ಇಲ್ಲಾ ಅಂದರ ಆತು..... ಆದರ ಈ ನಾರಾಯಣ ಅಂದರ ಯಾರು?..... ಅವ ನಿಮ್ಮ ಮನೀಯವರಿಗೆ ಏನೂ ಸಂಬಂಧಂತಲ್ಲ..... ಬ್ರಾಹ್ಮಣ ಆಗಿ ಯಾರೇ ಇತರ ಜಾತಿಯಾಕೀ ಸಂಗತೀ ಇದ್ದ ಬಿಟ್ಟನಂತಲ್ಲ''[೬೮]?

ಎಂದು ನೂರೆಂಟು ಪ್ರಶ್ನೆಗಳು ಉಂಟಾಗಿ ಪಂತರ ಮನೆಯ ಮರ್ಯಾದ ತೆಗೆದ ಎಂದು ವಾಸುದೇವಚಾರ್ಯರ ಚಿಂತನೆಗೆ ಯಡೆಮಾಡಿತು. ಪಂತರ ಮನೆಯಲ್ಲಿ ಒಬ್ಬ ಸದಸ್ಯರಂತೆ ಇದ್ದ ರುಕುಮಾ ಮತ್ತು ನಾರಾಯಣ, ಚಿಕ್ಕವರಿಂದಲೇ ಅವರ ಮನೆಯಲ್ಲಿ ಬೆಳೆದವರು. ವರ್ಗಭೇದದ ಕಲ್ಪನೇ ಇಲ್ಲದ ಸೌಹಾರ್ದಯುತವಾಗಿ ಪ್ರೀತಿ ವಿಶ್ವಾಸದಿಂದಲೇ ಬೆಳೆದುಕೊಂಡು ಪಂತರ ರುಕುಮಾವೆಂದು ಇಡೀಊರಿಗೆ ಚಿರಪರಿಚಿತಳಾಗಿದ್ದಳು.

ಆದರೆ ಶ್ರೀಮಠದ ಪೂಜೆಯಿಂದಾಗಿ ಅವರ ಗುಟ್ಟು ಹೊರಬಂದಂತಾಗಿ ನಾರಾಯಣ ಅಂತರಜಾತಿ ವಿವಾಹ, ಶೂದ್ರರ ರುಕುಮಾ ಬ್ರಾಹ್ಮಣ ಮಡಿಮೈಲಿಗೆ ಅಡ್ಡಮಾಡಿದರು ಎಂದು ಮದ್ವಸಂಪ್ರದಾಯದ ಗುಂಡಚಾರ್ಯ ಹೇಳುವಂತಾಯಿತು. ಹೀಗೆ ವರ್ಗ ಸಂಘರ್ಷ ಒಂದು ಕಡೆಯಾದರೆ ಇನ್ನೊಂದು ಸೌಹಾರ್ದಯುತವಾಗಿ ಬೆಳೆದ ಪಂತರ ಮನೆತನ ವಾಸ್ತಲ್ಯಮಯ ಆಶ್ರಯದ ತಾಣವಾಗಿತ್ತು.

ವಾಸುದೇವಚಾರ್ಯರು ಪಂತ ಮನೆಯ ಯಜಮಾನರು, ದಿನನಿತ್ಯ ಪೂಜೆಯನ್ನು ಮಾಡುವ ಇವರು, ಆ ದಿನ ಪೂಜೆಗೆ ಕೂತಾಗ ಆಕಸ್ಮಾತಾಗಿ ಹನುಮಂತನ ಮೂರ್ತಿ ಉರುಳುತ್ತದೆ. ಆಗ ಅವರಿಂದ ಬಂದ ಮಾತುಗಳು ಬೀಳತಿಯಾ ಲವಡೀ ಮಗನ.... ಹಣಮ್ಯಾ..... ಬೀಳತೀಯಾ ಮನಿಶ್ಯಾರ, ದೇವರೂ ಯಲ್ಲಾರೂ ಕೂಡಿ ನನ್ನ ಕಾಡಸತಿರೇನೋ ಬೀಳ ಮಗನ..... ಕುಂಡಿ ಘಟ್ಟಿ ಅದನೋ ಇಲ್ಲೋ ರಂಡಿ ಮಗನ ಹಿಂಗ್ಯಾಕ ಕಿಟ್ಟಿದ ಗೊಂಬೀ ಹಂಗ ಬೀಳತಿದಿ ನೀ ಒಬ್ಬಂವ ಅರ ನನ್ನ ಪಾಲಿಗೆ ಇದ್ದಿ ಅಂತ ತಿಳಿದಿದ್ದೆ. ನೀನು ಬೀಳತಿಯಾ ಬೀಳು... ಬೀಳು...''[೫] ಇವು ಕೇವಲ ಬರಹಗಾರನೊಬ್ಬನ ಹಾಸ್ಯ ಪ್ರಜ್ಞೆಯಿಂದ ಹುಟ್ಟಿದ ಮಾತುಗಳು ಅಲ್ಲ ಅಥವಾ ಕಾದಂಬರಿಯನ್ನು ಸ್ವಾರಸ್ಯಗೊಳಿಸಲಿಕ್ಕಾಗಿ ಸೃಷ್ಠಿ ಮಾಡಿದ್ದು ಅಲ್ಲ, ಬದಲು ಇವು ಸಂಪ್ರದಾಯದ ವಿಶೇಷ ಗುಣವೊಂದನ್ನು ಸೂಚಿಸುತ್ತವೆಂದು. ಇಲ್ಲಿ ಲೇಖಕರು ಬಹಳ ನೈಜವಾಗಿ ಕೊಡಮಾಡಿದ್ದಾರೆ. ಹಾಗೆಯೇ ಇನ್ನೊಂದು ಸಂದರ್ಭವನ್ನು ಇಲ್ಲಿ ಊದಾಹರಿಸಬಹುದಾಗಿದೆ.

ನವಲಗುಂದಕ್ಕೆ ಪ್ಲೇಗ್ ಎಂಬ ಮಹಾಮಾರಿ ಬಂದಾಗ ಅಂತಹ ಸನ್ನಿವೇಸದಲ್ಲಿ ಈ ವಾಸುದೇವಾಚಾರ್ಯರು ಊರಿನ ಎಲ್ಲರೊಂದಿಗೆ ಊರ ಹೊರಗಿನ ಕ್ಯಾಂಪಿನಲ್ಲಿ ಬಂದು ವಾಸಿಸುತ್ತಿರುವ ಸನ್ನಿವೇಶದ ಸ್ವಾರಸ್ಯಕರ ಪ್ರಸಂಗ ಅಲ್ಲಿ ಒಂದು ದಿನ ಹಳಿಗನೊಬ್ಬ ಬಂದು ಅವರಿಗೆ ತನ್ನ ರೋಗಕ್ಕೆ ಔಷದಿ ಕೊಡಿರೆಂದೂ, ಇಲ್ಲವಾದರೆ ವಿಷವನ್ನಾದರೂ ಕೊಡಿರೆಂದು ಕೇಳಿಕೊಳ್ಳುತ್ತಾನೆ. ಅವರ ಅರೆ ವ್ಯಂಗ ಅರೆ ಗಾಂಭೀರ್ಯದಿಂದ ವಿಷ ಇದ್ದರ ನಿನಗ್ಯಾಕ ಕೊಡತಿದ್ದೆ? ನಾನು ತೋಗೋತಿದ್ದೆ ಎಂದು ಗದರಿ ಅವನಿಗೆ ತೀರ್ಥಕೊಡುತ್ತಾರೆ. ಅದಾದ ಮೇಲೆ ಒಬ್ಬರ ಬಳಿಕೊಬ್ಬರು ಅವರ ಬಳಿ ತೀರ್ಥಕ್ಕೆ ಬರತೊಡಗುತ್ತಾರೆ. ಆಗ ವಾಸುದೇವಾಚಾರ್ಯರು ಇನ್ನ ಮ್ಯಾಲೆ ಹಂಡೆದಾಗ ತೀರ್ಥಮಾಡಲೇನರೋ ರಂಡೇ ಮಕ್ಕಳಾ ಎಂದು ಆಕ್ರೋಶಿಸಿ ತೀರ್ಥ ಹಾಕತೊಡಗುತ್ತಾರೆ. ಇಲ್ಲಿ ಇದು ಸತ್ಯ/ಮೂಢನಂಬಿಕೆ, ಪವಿತ್ರ/ಅಪವಿತ್ರ, ಎಂಬ ದ್ವಿದಳ ಯುಗ್ಮಗಳ ಸರಣಿಯ ಸಂದರ್ಭಗಳು ಕಾಣುತ್ತವೆ.

ಇಂತಹ ಸಂದರ್ಭಗಳನ್ನು ನೈಜವಾಗಿ ಪ್ರತಿಬಿಂಬಿಸಿದ್ದಾರೆ. ಈ ನೈಜತೆಯು ಪ್ರಾದೇಶಿಕತೆಯ ಒಂದು ಲಕ್ಷಣವೆನ್ನಬಹುದಾಗಿದೆ.

ಪ್ರಸ್ತುತ ಕಾದಂಬರಿಯಲ್ಲಿ ಲೇಖಕರು ತಾನು ಕಂಡುಂಡ ಪರಿಸರವನ್ನು ಎಷ್ಟು ಚೆನ್ನಾಗಿ ಚಿತ್ರಿಸಿದ್ದಾರೆಂದರೆ ಅವರು ಕೊಡುವ ಶೀರ್ಷಿಕೆ ಹಳ್ಳ ಬಂತು ಹಳ್ಳ ಬೆಣ್ಣೆ ಹಳ್ಳವನ್ನು ಪ್ರತಿನಿಧಿಸುತ್ತದೆ ಅಲ್ಲದೆ ನರಗುಂದ

ನವಲಗುಂದ ಸುತ್ತ ಮುತ್ತಲ ಪ್ರದೇಶಗಳ ವಿವರ ಕೂಡ ದೇಶಿಯ ನೆಲೆಯ ಸ್ಪಷ್ಟ ಸೂಚಕವಾಗಿದೆ. ಧಾರವಾಡದಲ್ಲಿನ ಸ್ವಾತಂತ್ರ್ಯ ಸಂಗ್ರಾಮ ವಿವರಿಸುವಲ್ಲಿ ಅವರು ಕೊಡುವ ಗಲ್ಲಿ ಗಲ್ಲಿಗಳ ವಿವರ ಉದಾ: ರೈಟಗಲ್ಲಿ, ಜಕಣಿಬಾವಿ, ದಟ್ಟ ಮಣ್ಣಿನ ವಾಸನೆ ಕೊಡುತ್ತವೆ. ಪ್ರದೇಶವೊಂದರ ಭೌಗೋಳಿಕ ನೆಲೆಯನ್ನು ಇಂಚು ಇಂಚಾಗಿ ಕಥೆಗೆ ಪೂರಕವಾಗಿರುವಂತೆ ಹೊಂದಿಸುವ ಕ್ರಮ ಬಹುಶಃ ಭಾಷೆ, ಶೈಲಿಗಳಿಗಿಂತ ವಿಭಿನ್ನವಾಗಿ ನಿಲ್ಲುತ್ತದೆ. ಇದಕ್ಕನುಗುಣವಾಗಿ ಈ ಕೆಳಗಿನ ಸಂದರ್ಭಗಳ ಮೂಲಕ ಸ್ಪಷ್ಟೀಕರಿಸಬಹುದು.

''ಜಕಣೀಭಾವಿ ಹತ್ತಿರ ಖಿಲಾಫತ್ ಮೈದಾನದ ಎದುರಿಗೆ ಗೋಳಿಬಾರು ಆಗೇದ..... ಮೂರು ಮಂದಿ ಖಿಲಾಪತಂ ಸ್ವಯಂ ಸೇವಕರಾದ ಮುಸುಲ್ಮಾನ ಯುವಕರು ಹುತಾತ್ಮರಾಗಿದ್ದಾರ.....''[೪೦]

''ಮಹಾತ್ಮ ಗಾಂಧೀಜಿ ಜೈ'' ಎಂಬ ಘೋಷಣೆ ಕೂಗುತ್ತಾ ನಾಡಬತ್ತಿಯ ಕಿಚ್ಚನ್ನು ಬುಗಿಲೆಬ್ಬಿಸುತ್ತಿದ್ದವು. ಮಂದಿ ಮತ್ತೆ ಅಕ್ಕಿಪೇಟೆಯನ್ನು ದಾಟಿ, ಮಣಿಯಾರ ಅಂಗಡಿ ಮುಂದ ಬರುತ್ತಲೂ, ಗುಂಪಿನಲ್ಲಿಯಾರೋ ಜಕಣೀ ಬಾವಿಯ ಹತ್ತಿರ ಹೋಗಬ್ಯಾಡರೋ ಅಲ್ಲೆ ಗೋಲಿಬಾರ ಆಗೇದ''[೪೧] ಎಂದು ಕೂಗಿಕೊಂಡರು.

ಹೀಗೆ ಧಾರವಾಡ ಪ್ರದೇಶವು ಒಂದು ಹೋರಾಟ ಚಳುವಳಿ, ಸಭೆ, ಮೀಟಿಂಗ್, ಗೋಲಿ ಬಾರ ಎಂದು ಹೇಳಿ ಅಲ್ಲಿನ ಜನರು ದೇಶಭಕ್ತಿಯ ಗೀತೆಗಳು ಘೋಷಣೆಗಳು ಉತ್ಸಾಹ ಭರಿತವಾಗಿ ಹೊರಹೊಮ್ಮಿದವು.

ಪಂಥರ ಮನೆಯಲ್ಲಿ ಹುಟ್ಟು ಸಾವುಗಳೇನೂ ಆ ಮನೀಗೆ, ಆ ಜನಕ್ಕೆ ಅಪರಿಚಿತವಾದ್ದಾಗಿರಲಿಲ್ಲ. ಭರತಿ ವಯಸ್ಸಿನ್ಯಾಗಿನ ಮುತ್ತೈದಿ ನಾಲ್ಕು ಮಕ್ಕಳ ತಾಯಿ ಲಕ್ಷ್ಮಿಂಬಾಯಿ, ಹಾಗೆಯೇ ವೆಂಕಣ್ಣನ ಸಾವು ಪಂತ ಮನೆತನದ ಆನಿ ಬಲವೇ ಕುಸಿದಂತಾಯಿತು. ಆದರೆ ಮುಂದೆ ರಾಮು ಸ್ವತಂತ್ರ ಸಂಗ್ರಾಮದಲ್ಲಿ ಹೋರಾಟಕ್ಕೆ ಹೋದ ಮೇಲೆ ಮನೆಯ ಕಡೆಗೆ ಬಂದಿರಲಿಲ್ಲ. ಚಳುವಳಿ ಎಂದುಕೊಂಡು ಹೊರಗಡೆ ಸಭೆ, ಮೀಟಿಂಗ್, ಉಪ್ಪಿನ ಸತ್ಯಾಗ್ರವೆಂದು ನೂರೆಂಟು ರಾಜಕೀಯ ಕೆಲಸಕಾರ್ಯಗಳಲ್ಲಿ ಉತ್ಸಾಹಕವಾಗಿದ್ದನು.

ಆದಿನ ಒಂದು ಇಳಿಮಧ್ಯಾನ್ಹದಾಗ ತುಳಸಕ್ಕ ಹಿತ್ತಲದಾಗ ಹೂಬತ್ತಿ ಹೊಸೆಯುತ್ತ ಕುಳಿತದ್ದಳು. ಹತ್ತಿರವೇ ಸರಸ್ವತಿ ಅಕ್ಕಿ ಆರಿಸುತ್ತ ಕುಳಿತಿದ್ದಳು. ''ಮಾಗಿಯ ಸಂಜೆಯ ಮುಳುಗುವ ಬಿಸಿಲು ವಾತಾವರಣದಾಗೆಲ್ಲ ಏನೋ ಒಂದು ಮ್ಲಾನತೆಯನ್ನು ಹರಡುತ್ತಿತ್ತು. ಅದೇ ತುಳಸಿಕಟ್ಟೆ, ಅದೆ ಸವಳು ಮಣ್ಣಿನ ಒದ್ದೀ ವಾಸನೆ, ಅದೇ ಬೇವಿನ ಮರದ ಹಸಿರು ಅದರ ಮ್ಯಾಲ 'ಕಾ-ಕಾ' ಅಂತ ಸೋತ ಧ್ವನಿಯಲ್ಲಿ ಕೂಗುವ ಅವೇ ದರಿದ್ರ ಕಾಗೆಗಳು. ಬೇವಿನ ಮರದ ಕೆಳಗೆ ಅದೇ ಹತ್ತಿಕಟಿಗಿ ಕುಟ್ಟರಿ, ಅವೇ ಬಿರುಕು ಬಿಟ್ಟ ಮಣ್ಣಿನ ಗೋಡೆಗಳು, ಅದರೊಳಗ ಫಳ್ ಫಳ್ ಅಂತ ಹೊಳೆಯುವ ಒಂದೆರಡು ಬೆಣಚಗಲ್ಲುಗಳು, ಜೀವಮಾನದ ಹನ್ನೆರಡಾಣೆ ಭಾಗವನ್ನು ಈ ಮನೆಯ ನಾಲ್ಕು ಗೋಡೆಗಳ ಈ ಪರಿಸರದ ನಡುವೆ ಕಳೆಯುತ್ತಿದ್ದ ತುಳಸಕ್ಕಗ ಸಂಜೀ ಮುಂದಿನ ಈ ಹಿತ್ತಿಲಿನ ಮುಗಿಲು ಏನೋ ಒಂದು ಆಸರೆಯಾಗಿತ್ತು. ಆಕೆ ಈ ಮುಗಿಲು ನೋಡುತ್ತಾ ತನ್ನ ಬೇಸರದ ಏಕತಾನತೆಯನ್ನು ಮರೆಯುತ್ತಿದ್ದಳು. ಇವತ್ತು ಆ ಮುಗಿಲ

ಸಹಿತ ಯಾಕೋ ವಿಷಣ್ಣವಾಗಿತ್ತು. ಇಷ್ಟೆ ಸಾಲದೇನೋ ಎಂಬಂತೆ ಇವತ್ತ ಆ ಸುಡಗಾಡು ಗಿರಣೀ ಗೂಗೆ 'ಘೂಕ್-ಘೂಕ್' ಅಂತ ಕರ್ಕಶವಾಗಿ ಹೊಡಲಿಕ್ಕೆ ಹತ್ತಿತ್ತು ಎದೆಗೆ ಗುದ್ದಿದಂತೆ ಘುಕ್ಕರಿಸುತ್ತಿತ್ತು.''[೬೨]

ಈ ಮೇಲಿನ ಸಂಗತಿಯನ್ನು ಗಮನಿಸಿದಾಗ ಒಂದು ನವಲಗುಂದದ ಪ್ರದೇಶದ ಭೌಗೋಳಿಕ ವರ್ಣನೆಯನ್ನು ಮತ್ತು ಅಲ್ಲಿನ ವಾತಾವರಣ ಮಾಗಿಯ ಸಂಜೆಯ ಮುಳುಗುವ ಬಿಸಿಲು, ಸವಳು ಮಣ್ಣಿನ ಒದ್ದೀ ವಾಸನೆ, ಬೇವಿನ ಮರದ ಹಸಿರು, ಕಾಗೆಯ ಕೂಗು, ಹತ್ತಿಕಟ್ಟಿಗೆ, ಬಿರುಕು ಬಿಟ್ಟ ಮಣ್ಣಿನ ಗೋಡೆ, ಬೆಣಚುಕಲ್ಲುಗಳು ಗಿರಣಿಯ ಶಬ್ದ, ಗೂಗೆ 'ಘೂಕ್-ಘೂಕ್' ಅಂತ ಕರ್ಕಶ ಧ್ವನಿ ಮುಂತಾದವುಗಳು, ನವಲಗುಂದದ ಪ್ರಾದೇಶಿಕ ಪರಿಸರ ವಾಸ್ತವ ಚಿತ್ರಣವನ್ನು ಕಟ್ಟಿಕೊಡುತ್ತದೆ. ಹಾಗೂ ಗೂಗೆ ಕರ್ಕಶ ಧ್ವನಿ, ಕಾಗೆಯ ದರಿದ್ರ ಧ್ವನಿ, ಇವುಗಳು ಆ ಪ್ರದೇಶದ ಜನರಿಗೆ ಉಂಟುಮಾಡುವ ಅಪಶಕುನಗಲಾಗಿರುತ್ತವೆ. ಇವುಗಳಿಂದ ತಮ್ಮ ಬದುಕಿನಲ್ಲಿ ಅವಘಡ ಸಂಬಂವಿಸುತ್ತವೆ ಎಂಬ ನಂಬಿಕೆಗಳು ಆ ಜನರಲ್ಲಿ ಉಳಿದುಕೊಂಡು ಬಂದಿರುತ್ತವೆ. ಮುಂದೆ ನಡೆಯುವ ದುರತಂಕ್ಕೆ ಸೂಚನೆಯಾಗಿ ಕಾಗೆ, ಗೂಗೆಗಳು ಧ್ವನಿಗಳು ಮುನ್ನುಡಿಯಾಗಿ ನಿಲ್ಲುತ್ತವೆ. ಇಲ್ಲಿರುವ ಭೌಗೋಳಿಕ ಲಕ್ಷಣಗಳು ಮತ್ತು ಮೂಡನಂಬಿಕೆಗಳು ಪ್ರಾದೇಶಿಕತೆಯ ಒಂದು ಮಾನದಂಡಗಳಾಗುತ್ತವೆ.

ಹೀಗೆ ಗೂಗೆ ಕರ್ಕಶಧ್ವನಿ, ದರಿದ್ರಕಾಗೆಗಳು ಸೂಚನೆಯಂತೆ 'ರಾಮ'ನ ಸಾವು ಪಂತರ ಮನೆಗೆ ಶೋಕವನ್ನು ತಂದಿತು. ತುಳಸಕ್ಕ ರಾಮೂನ ಹೆಣದ ಬಳಿ ಕುಸಿದು 'ಏ ರಾಮಾ ಏನು ಮಾಡಿಕೊಂಡ್ಯೋ ಖೋಡಿ.....' ಎಂದ ಹತೋಟಿ ತಪ್ಪಿ ಅಳ ತೊಡಗಿದಳು. ಮುಂದ ನಿಂತ ಜನ ''ಬೋಲೋ ಭಾರತ ಮಾತಾಕೀ ಜೈ....'' 'ರಾಮು ಪಂತರಿಗೆ ಜಯವಾಗಲಿ' ಎಂದು ಘೋಷಣೆಗೆ ತೊಡಗಿದಾಗ ವಾಸುದೇವಾಚಾರ್ಯರು ದಿಗ್ಭ್ರಾಂತ್ರರಾಗಿ ಹಣೆ ಬಡಿದುಕೊಳ್ಳುತ್ತಾ ''ಇನ್ನೇನು ಜಯ ಆಗತದರ್‍ಯೋ ರಂಡೇ ಮಕ್ಕಳs 'ಇನ್ನೇನು ಜಯ ಆಗತದs, ಎನ್ನುತ್ತಾ ಶೋಕಿಸಿದರು.

ಪಂತರ ಮನೀ ಮ್ಯಾಲ ಇನ್ನೊಮ್ಮೆ ಸಾವಿನ ರೌದ್ರ ಕವಿಯಿತು. ಇಡೀ ಪಂತರ ಮನೆಯನ್ನು ಸಾವು ಆಕ್ರಮಿಸಿಕೊಂಡು ದುಃಖದಲ್ಲಿ ಮುಳುಗುವಂತೆ ಮಾಡಿತು.

ನವಲಗುಂದದ ದಿನನಿತ್ಯದ ದೈನಂದಿನ ಕೆಲಸದಲ್ಲಿ ಹಳ್ಳದ ಪಾತ್ರವು ಪ್ರಮುಖವಾಗಿದ್ದಿದು ಕಂಡುಬರುವುದು. ಆ ಉರನ್ನೆ ಗುರುತಿಸುವಂತಿದ್ದ ಆ ಬೆಣ್ಣೆ ಹಳ್ಳವು ಅರ್ಧಕ್ಕರ್ಧ ಭತ್ತಿ ಹೋಗಿದ್ದರೂ ವಿಶಾಲವಾದ ಹರವಿನ್ಯಾಗ ಅಲ್ಲೊಂದು ಇನ್ನೊಂದು ಚಿಕ್ಕ ದೊಡ್ಡ ಮಡುವುಗಳಲ್ಲಿ ನೀರು ನಿಂತಿತ್ತು ರುಕುಮಾ ನಾರಾಯಣಿ ಎಂದಿನಂತೆ ಬಟ್ಟೆಗಳನ್ನು ಒಗೆಯಲು ಹಳ್ಳಕ್ಕೆ ಬಂದಿದ್ದರು. ರುಕುಮಾ ಉಟ್ಟ ಸೀರೆಯನ್ನು ತೊಡೆಯುವರೆಗೆ ಏರಿಸಿ ಗಂಡುಗಚ್ಚೆಹಾಕಿ, ಹಳ್ಳದ ಮಡುವಿನಲ್ಲಿ ಚಾಚಿದ ಒಂದು ದೊಡ್ಡಕಲ್ಲಿನ ಮ್ಯಾಲ ರಪ್ಪರಪ್ಪಂತ ಒಂದೊಂದೇ ಬಟ್ಟೆ ಒಗೆದು ರುಕುಮಾ ಮ್ಯಾಲೆ ದಂಡೆಯ ಮ್ಯಾಲ ಬಿಸಿ ಒಗೆಯಬೇಕು,

ಅವುಗಳನ್ನು ಸೋನಕ್ಕ, ನಾರಾಯಣ ಇನ್ನೊಂದು ಮಡುವಿನ್ಯಾಗ ಭೋಲೋ ನೀರಿನ್ಯಾಗ ಮತ್ತೊಮ್ಮೆ ತೊಯಿಸಿ ಅಚೆಗೊಬ್ಬರು ಈಚೆಗೊಬ್ಬರು ಹಿಡಿದು ಜಗ್ಗಿ ತಿರುಗಿಸಿ ತಿರುಗಿಸಿ ಹಿಂಡಿ ಹಿಂಡಿ ಝಾಡಿಸಿ ಬಿಸಿಲಿಗೆ ಹರವಬೇಕು. ಬಟ್ಟೆಗಳ ಒಣಗಿದ ಮೇಲೆ ಮನಿಗೆ ತೆಗೆದುಕೊಂಡು ಹೋಗುವುದು ದಿನನಿತ್ಯದ ರೂಢಿಯಾಗಿದ್ದಿತು.

ನವಲಗುಂದ ಶಾಲೆಗಳು ಪ್ರಾರಂಭವಾಗಿ ಎರಡು ಮೂರು ವರ್ಷಗಳಾಗಿದ್ದವು. ಔಪಚಾರಿಕ ಶಿಕ್ಷಣ, ಪದ್ಧತಿ ನವಲಗುಂದಕ್ಕೆ ಇನ್ನೂ ಒಗ್ಗಿಕೊಂಡಿರಲಿಲ್ಲ ಹೋದವರು ಹೊದರು ಬಿಟ್ಟವರು ಬಿಟ್ಟರು ಅನಕೋತ ಕುಂಟಿಗೋ ಕೂರಿಗೋನೂ ಅನಕೋತ ನಡದಿತ್ತು ನಾರಾಯಣ ಈ ಕುಂಟಿಕೂ ಕೂರಿಗೂ ಆಗಿರಲಿಲ್ಲ. ಅವ ಹಳ್ಳದ ಮಠದ ಕೂಲಿ ಶಾಲೆಯೊಳಗ, ಪತ್ರಯ್ಯನವರ ಹತ್ತಿರ ಓದು ಕಲಿತಿದ್ದು ಒಂದೆರಡು ಗೀಗೀ ಪದ ನಾಲ್ಕು ತತ್ವಪದ ಕಲಿತಿದ್ದನು. ಆದರೆ ನಾರಾಯಣನ ವಯಸ್ಸಿನವರೇ ಆದ ವಾಸುದೇವಚಾರ್ಯರ ಮಗ ಬೋಧ, ವೆಂಕಣ್ಣನ ಮಗ ರಾಘು ಹಣಮ್ಯಾ ಇವರೆಲ್ಲರೂ ಶಾಲೆಗೆ ಹೋಗುತ್ತಿದ್ದರು.

ಅಂಬಕ್ಕೆ ಹಜಾಮರ ತಿಪ್ಯಾಗ ''ನೀ ಕರದಾಗ ಬರೋದಿಲ್ಲ ಬಿಡೋದಿಲ್ಲ ರಂಡೇಗಂಡ, ವರ್ಷಕಾಳು ವಯ್ಯಲಿಕ್ಕೆ ಮಾತ್ರ ಬರತೀ'' ಅಂತ ಒಂದ ಕಡೆ, ಇನ್ನೊಂದು ಕಡೆ ಝಾಡಮಾಲಿಗಳಿಗೆ ''ಈಗ ಸರಕಾರದವರು ಮುನಿಸಿಪಾಲಿಟಿ ಮಾಡಿ ನಿಮಗೆಲ್ಲಾ ಪಗಾರ ಕೊಡತ್ತಾರಲ್ಲ ಮತ್ತ ನಾವ್ಯಾಕ ಕೊಡಬಕು. ಅಣ್ಣಿಗೆರಿ ಹೊಲದ್ದು ಆಯಾ ನವಲುಗುಂದದಾಗ ಯಾಕ ಕೊಡಬೇಕು.'' ಹಿಂಗ ಧನೀ ಏರಿಸಿ ಝಗಳಕ್ಕ ನಿಂತಿದ್ದಳು. ಕೆಳವರ್ಗದ ಜನರ ಯಾವುದೇ ಪ್ರತಿರೋಧವು ಇರಲಿಲ್ಲ ಎಲ್ಲವನ್ನು ಸಹಿಸಿಕೊಳ್ಳುವ ವರ್ಗವಾಗಿ ನಾವು ನೋಡುತ್ತೆವೆ.

'ಈಗೀಗ ಪಂತ ಮನಿಯೊಳಗ ಇಂತಹ ರಾದ್ಧಾಂತ ಬಹಳ ಆಗಲಿಕ್ಕೆ ಹತ್ಯಾವ, ಅಂಬಕ್ಕ ಹತ್ತಕ್ಕ ಲಗ್ನಮಾಡಿಕೊಂಡು ಹನ್ನೆರಡಕ್ಕೆ ದೊಡ್ಡಾಕಿ ಆಗಿ ಹದಿಮೂರಕ್ಕ ಗಂಡನ್ನ ಕಳಕೊಂಡು ತಲಿ ಬೋಳಿಸಿಕೊಂಡು ಗಂಡ ಸತ್ತ ಕೂಡಲೇ ಅತ್ತಿಮನೀಯವರು ಅಂಬಕ್ಕನ ಮೈಮ್ಯಾಲಿನ ಬಂಗಾರ ಕಿತ್ತುಗೊಂಡು ತವರಮನೀಗೆ ತಂದು ಬಿಡುತ್ತಾರೆ. 'ಹೆಂತಾ ಸುಡಗಾಡು ಕಾಲ್ಗುಣನೋ ಏನೋ..... ಮನೀ ಮಗನ್ನ ನುಂಗಿ ಕೂತಿತು. ಸುಟ್ಟ ಬರಲಿ'' ಎಂದು ನೆಟಿಕೆ ಮುರಿದು ಹೋಗಿದ್ದರು. ಈಗ ಆಕಿಗೆ ಅಣ್ಣಂದಿರನ ಬಿಟ್ಟರೆ ಬ್ಯಾರೆ ಆಸರೇನs ಇರಲಿಲ್ಲ. ಅವರೂ ಅಕಿನ್ನ ಅತ್ಯಂತ ಪ್ರೀತಿಯಿಂದ ಸಲಹುತ್ತಿದ್ದರು. ವಾಸಣ್ಣನ ಹೆಂಡತಿ ತುಳಸಕ್ಕ, ವೆಂಕಣ್ಣ ಹೆಂಡತಿ ಲಕ್ಷ್ಮಿಂಬಾಯಿ ಚಕಾರ ಎತ್ತದೇ ಆಕೆಯ ಹಿರಿತನ ಒಪ್ಪಿಗೊಂಡಿದ್ದರು. ಗಾಣದೆತ್ತಿನ ಹಂಗ ದುಡಿತಾಳ ಆದರೆ ಎಷ್ಟು ದುಡಿದರು ಆಕಿನ ಬದುಕಿನ ಏಕಾಕಿತನ ತುಂಬೋದೆ ಇಲ್ಲ ಅದಕ್ಕೆ ಆಕೆ ಅಸಹಾಯಕ್ಕಾಗಿ ತನ್ನ ಅಂಧಕಾರಮಯ ಬದುಕಿನ ಅಭದ್ರತೆಯನ್ನ ಅಶಾಂತಿಯನ್ನ ಹೊರಗೆ ಹರಡುತ್ತಾಳೆ. ಹೀಗೆ ವಿಧವೆಯ ಬಾಳಿನ ಗೋಳಿನ ಕಥೆ ಆ ಪರಿಸರದಲ್ಲಿ ಮೂಡಿಬಂದಿದೆ.

ಧಾರವಾಡ ಸುತ್ತಮುತ್ತಲಿನ ಪರಿಸರದ ಬ್ರಾಹ್ಮಣ ಸಮುದಾಯದಲ್ಲಿ 'ಅಮ್ಮ' ಎಂಬುದು ಗಂಡ ಸತ್ತ ವಿಧವೆಗೆ ಸಂಭೋದಿಸುವುದು, ಅಷ್ಟೆ ಅವಳಿಗೆ ಗೌರವವನ್ನು ನೀಡುವುದು. ಗಂಡ ಸತ್ತ ವಿಧವೆಯಾದವಳು ತಲೆಯನ್ನು ಬೋಳಿಸಿಕೊಂಡು ಕೆಂಪು ಸೀರೆ ಉಡುವ ಪದ್ಧತಿ ಇದೆ. ಚಿಕ್ಕವಯಸ್ಸಿನಲ್ಲಿ ಮದುವೆಯಾಗಿ ಗಂಡ ಸತ್ತನಂತರ ತವರು ಮನೆ ಸೇರುವುದು ಆಗಿನ ಕಾಲದ ಕುಟುಂಬದ ಚಿತ್ರಣವನ್ನು ನೀಡಿ ಶ್ರೀನಿವಾಸ ವೈದ್ಯರು ಒಂದು ಸಮಾಜದ ನೀತಿ ನಿಯಮವನ್ನು ಪ್ರತಿಬಿಂಬಿಸಿದ್ದಾರೆ.

ಹತ್ತಿಪೈರು ಪ್ರಮುಖ ಬೆಳೆಗಳಲ್ಲಿ ಒಂದಾಗಿದ್ದು ಧಾರವಾಡ ಮತ್ತು ಹುಬ್ಬಳ್ಳಿ ಸುತ್ತಮುತ್ತಲಿನ ನವಲಗುಂದ, ನರಗುಂದ, ರೋಣಗಳಲ್ಲಿ ಸುತ್ತು ಹಳ್ಳೀ ಕಡೆ ರೈತರು ಕೂಲಿ ಹೆಣ್ಣುಗಳನ್ನು ಹಚ್ಚಿ, ಹತ್ತೀ ಬಿಡಿಸಿ ಬಿಡಿಸಿ ಬೃಹದಾಕಾರದ ಹತ್ತಿಯ ಅಂಡಿಗೆಗಳನ್ನು ಮಾಡಿಸಿ ಛಕ್ಕಡಿಯೊಳಗೋ ಇಲ್ಲವೋ ದೊಡ್ಡ ದೊಡ್ಡ ಗಂಟುಗಳನ್ನ ಕೂಲಿಯವರ ತಲೆಯ ಮೇಲೋ ಹೊರಸಿಕೊಂಡು, ನವಲಗುಂದದ ಮೇಲೆ ಹಾಯ್ದು ಇತ್ತಲಾಗ ಹುಬ್ಬಳಿ ಧಾರವಾಡದ ಪೇಟೆಗಳಿಗೆ ಸಾಗಿಸುತ್ತಿದ್ದರು. ಹತ್ತಿ ಕಾರಖಾನೆಗಳ ಮುಂದೆ ಸಾಲುಗಟ್ಟಿದ ಹತ್ತಿ ಛಕಡಿಗಳ ಹಿಂದಿನಿಂದ ಅಡನಾಡಿ ವಯಸ್ಸಿನ ಹುಡುಗರು ಕಳ್ಳ ಹೆಜ್ಜೆಯಲ್ಲಿ ಬಂದು ಕೈಗೆ ಸಿಕ್ಕಷ್ಟು ಹತ್ತಿಕಿತ್ತಕೊಂಡು ಓಡುತ್ತಿದ್ದರು. ಕಿತ್ತು ತಂದ ಹತ್ತಿಯನ್ನು ಅಂಗಡಿ ಕೊಟ್ಟು ಅದರಷ್ಟು ತೂಕದ ಕರದಂಟು ಪಡೆದು ತಿಂದು ಮಜಾಮಾಡುತ್ತಿದ್ದರು. ಅಷ್ಟೇ ಅಲ್ಲದೇ ಹತ್ತಿಯಿಂದ ಪಿಂಜಾರ ಕೈಲೆ ಗಾದಿ ಹಾಕಿಸೋದು, ಧಾರಣೆ ನೋಡಿ ಪೇಟೆಗೆ ಕಳಿಸೋದು ಇತ್ಯಾದಿ ವಣಿಕ್ ಚಾತುರ್ಯಗಳು ನಡೆಯುತ್ತಿದ್ದವು.

ಮದುವೆಯಾದ ಪಾಲಕ್ಷಿ ಸಂತೋಷದಿಂದಲೇ ವಿದ್ಯಾಭ್ಯಾಸಕ್ಕೆ ತಿಲಾಂಜಲಿಯನ್ನಿತ್ತಿದ್ದ ''ಥೂ..... ಆ ಸಂಸ್ಕೃತರೂ... ಆ ಕಾಸ್ಟಿಟ್ಯೂಶನಲ್ ಹಿಸ್ಟರಿ ಆಫ್ ಇಂಗ್ಲಂಡೂ.... ಆ ಅಲ್ಜಿಬ್ರಾ...... ಜಾಮಿಟ್ರೀ.... ನರಮನಿಶಾರಿಗೆ ಹೇಳಿದ್ದಲ್ಲ ಅವೆಲ್ಲ ಹಾರೂರಿಗೇ ಬರೋಬ್ಬರಿ.....'' ನವ ವಿವಾಹಿತ ವಧುವಿನ ಜತೆಗೆ ಸ್ವರ್ಗಕ್ಕೆ ಕಿಚ್ಚು ಹಚ್ಚ ತೊಡಗಿದ್ದ. ಆದರೆ ಒಮ್ಮೆ ಶಹರದ ಊರು ಧಾರವಾಡದ ರುಚಿಕಂಡ ಜೀವಕ್ಕೆ..... ನವಲಗುಂದ ತೀರ ನೀರಸಹಳ್ಳಿ ಅನಿಸುತ್ತಿತ್ತು. ಅಲ್ಲಿಯ ಅವರ ಸಂಬಂಧಿಕರು ಧಾರವಾಡ ಮನೆಗಳಿದ್ದವು. ಕೆಲಸ ಕಾರ್ಯಗಳಿಗೆ ಅಲ್ಲದೆ ಧಾರವಾಡ ಹುಬ್ಬಳ್ಳಿಗಳ ಅಡತಿ ಅಂಗಡಿಗಳಿಗೆ ಜೋಳ, ಗೋದಿ ಹತ್ತಿ, ಮಾರಾಟಕ್ಕೆ ಹಚ್ಚಿಬರಲು ಮಾರಾಟದ ಹಣತರಲು ಧಾರವಾಡಕ್ಕೆ ಹೋದಾಗೊಮ್ಮೆ ಪಂತರ ಹುಡುಗರ ಕೋಣೆಗೆ ಹೋಗಿ ಅವರನ್ನ ಕಂಡು ಬರುತ್ತಿದ್ದ ಪಾಂಡೂನ ಜತೆ ಸೇರಿ ಹೋಟೇಲ್‌ಗಳಿಗೆ ಹೋಗಿ ರುಚಿ ರುಚಿಯಾಗಿ ತಿಂದು ತಿರುಗುವುದು. ನಾಟಕ ದೊಡ್ಡಾಟಗಳಿಗೆ ಹೋಗುವುದು ರೂಢಿಯಾಗಿದ್ದವು. ಹೀಗೆ ಶಿಕ್ಷಣದಿಂದಾಗಿ ನವಲಗುಂದ ಮತ್ತು ಧಾರವಾಡ ಹುಬ್ಬಳಿ ಶಹರಗಳ ನಂಟು ಹೆಚ್ಚಾಯಿತು. ವ್ಯವಹಾರದ ಜೊತೆಗೆ ಮನರಂಜನೆಯನ್ನು ಒದಗಿಸುವ ಕೇಂದ್ರವಾಗಿ ಧಾರವಾಡ-ಹುಬ್ಬಳ್ಳಿಗಳು ನವಲಗುಂದದ ಜನರಿಗೆ ಚಿರಪರಿಚಿತವಾದವು.

ಕಮಲಾಚಾರ್ಯರ ಕುಟುಂಬ ಕತೆ ಜೊತೆಗೆ ನರಗುಂದ ನವಲಗುಂದ ಧಾರವಾಡ ಪ್ರಾದೇಶಿಕ ಚಿತ್ರಣ. ಉತ್ತರ ಕರ್ನಾಟಕದ ಬ್ರಾಹ್ಮಣರ ಭಾಷೆಯ ಬಳಕೆ ಬ್ರಾಹ್ಮಣರ ಕುಟುಂಬದ ಸಂಪ್ರದಾಯದ ಪ್ರಧಾನ ಧಾಟಿಯ ಬದುಕು ದುರ್ಬಲಗೊಂಡು, ನಂತರದ ಬದುಕಿನ ಸಾಧ್ಯತೆಗಳನ್ನು ಅನ್ವೇಷಿಸುವ ಮತ್ತು ದೇಶದ ಸ್ವಾತಂತ್ರ ಸಂಗ್ರಾಮದ ಹೋರಾಟ ಚಿತ್ರಣಗಳು ಆ ಕಾಲದ ಪ್ರಾದೇಶಿಕ ಮಾನದಂಡಗಳಾಗಿ ಕಾಣಸಿಗುತ್ತವೆ. ಒಟ್ಟಾರೆಯಾಗಿ ಆ ಪ್ರದೇಶದ ಜನಜೀವನ, ಸಂಸ್ಕೃತಿ ಮತ್ತು ಸ್ವಾತಂತ್ರ ಹೋರಾಟದ ಕಿಚ್ಚು. ಇವು ಪ್ರಮುಖವಾಗಿ ಕಾಣಸಿಗುತ್ತವೆ.

**ಅಡಿಟಿಪ್ಪಣಿಗಳು**

೧. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೮

೨. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೯

೩. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೯

೪. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೦೫

೫. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೦೪

೬. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೧೦

೭. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೧೧

೮. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೨೯

೯. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೩೭

೧೦. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೪೬

೧೧. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೪೭

೧೨. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೫೩

೧೩. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೭೪

೧೪. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೮೨

೧೫. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೦೦

೧೬. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೪೮

೧೭. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೨೨

೧೮. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೨೩

೧೯. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೨೩

೨೦. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೨೪

೨೧. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೨೫

೨೨. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೨೫

೨೩. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೬೭

೨೪. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೬೭

೨೫. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೧೬೨

೨೬. ಮೊಕಾಶಿ ಪುಣೇಕರ 'ಗಂಗವ್ವ ಗಂಗಾಮಾಯಿ' ಪುಟ ೨೦೩

೨೭. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೮

೨೮. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೧೮

೨೯. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೨೬

೩೦. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೨೮-೨೯

೩೧. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೫೮

೩೨. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೭೦

೩೩. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೧೫೬

೩೪. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೨೨

೩೫. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೩೦

೩೬. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೪೨

೩೭. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೧೨೨

೩೮. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೧೪೧

೩೯. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೧೩೪

೪೦. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೧೮೫

೪೧. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೧೮೪

೪೨. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪು.೨೫೨

• • •

# ಅಧ್ಯಾಯ ನಾಲ್ಕು

## 'ಗಂಗವ್ವ ಗಂಗಾಮಾಯಿ' ಮತ್ತು ಸಮಕಾಲೀನ ಪರಿಸರದ ಸ್ಥಿತ್ಯಂತರಗಳು

ಯಾವುದೇ ಸಮುದಾಯದ ಸಂಸ್ಕೃತಿ ವಿಕಾಸವಾಗುತ್ತ ಅನೇಕ ಕಾಲಘಟ್ಟಗಳ ಜೊತೆ ಮುಖಾ ಮುಖಿಯಾಗುತ್ತಾ ತನ್ನ ಅಸ್ತಿತ್ವರೂಪಿಸಿಕೊಳ್ಳುತ್ತವೆ. ಸಾಂಸ್ಕೃತಿಕ ಪ್ರತಿರೋಧದ ಶಕ್ತಿ ಬಹುರೂಪಗಳು ಯಾವ ಸಂಸ್ಕೃತಿಯಲ್ಲಿ ಜೀವಂತಿಕೆಯಲ್ಲಿ ವಿಸ್ತರಿಸುತ್ತವೆಯೋ ಅಂತಹ ಯಾವ ಸಮುದಾಯಗಳು ಮುಳುಗಿ ಹೋಗುವುದಿಲ್ಲ. ವೈಚಾರಿಕ ಅನ್ವೇಷಣೆಗಳು ಅಂತಹ ಸಂಸ್ಕೃತಿಗಳಲ್ಲಿ ನಿರಂತರವಾದ ಬದಲಾವಣೆಗಳನ್ನು ಅಪೇಕ್ಷಿಸುತ್ತಾ ನಾಗರೀಕತೆ ಕಡೆಗೆ ಪಯಣಿಸುತ್ತಿರುತ್ತವೆ. ನಮ್ಮ ರಾಷ್ಟ್ರದಲ್ಲಿ ಆಚರಣೆ, ಸಂಪ್ರದಾಯ, ಮೂಡನಂಬಿಕೆ ಮುಂತಾದವುಗಳು ಜನರ ಮನಸ್ಸಿನಲ್ಲಿ ಬೇರು ಬಿಟ್ಟು ಇವುಗಳಲ್ಲಿ ಗಟ್ಟಿಯಾಗಿ ಹಾಗೆ ಮುಂದಿನ ಜನಾಂಗಕ್ಕೆ ಸಾಗುತ್ತ ನಡೆಯುತ್ತವೆ. ಹಾಗೆಯೇ ಸಂಪ್ರದಾಯ ಮತ್ತು ಆಧುನಿಕತೆಯ ಸಂಘರ್ಷಗಳು ನಡೆದುಕೊಂಡು ಬರುತ್ತವೆ. ಮುಂದೆ ಸ್ಥಿತ್ಯಂತರವಾಗಿ ಕ್ರಮೇಣ ಆಧುನಿಕತೆಯನ್ನು ಸ್ವೀಕರಿಸುತ್ತಾ ಸಾಗುತ್ತವೆ.

ಗಂಗವ್ವ ಗಂಗಾಮಾಯಿ ಸ್ವಾತಂತ್ರ್ಯ ಪೂರ್ವ ಸಂದರ್ಭವನ್ನು ಧಾರವಾಡ ಶಹರದ ಅದಕ್ಕೆ ಪ್ರತಿಕ್ರಿಯಿಸದ ರೀತಿಯನ್ನು ಒಳಗೊಂಡಿವೆ. ವಸಾಹತುಶಾಹಿ ಕಾಲಘಟ್ಟದಲ್ಲಿನ ಸಾಂಸ್ಕೃತಿ ಪರಿಸರವನ್ನು ಕುಟುಂಬವೊಂದರ ಚಿತ್ರಣದ ಮೂಲಕ ಇಲ್ಲಿ ಬಿಂಬಿಸಲಾಗಿದೆ. ಕುಟುಂಬದ ರಕ್ತ ಸಂಬಂಧಗಳ, ಮತ್ತು ಕುಟುಂಬದ ಆಗುಹೋಗುಗಳ ಮೇಲೆ ವಸಾಹತುಶಾಹಿ ನೌಕರಿ, ಶಿಕ್ಷಣ, ಸ್ವಾತಂತ್ರ್ಯ ಚಳುವಳಿ ಇತ್ಯಾದಿ ಅಂಶಗಳು ಬೀರುವ ಪ್ರಭಾವ ಭಾರತೀಯ ಸಂಸ್ಕೃತಿಯಲ್ಲಿ ಪಲ್ಲಟಗಳು ಇವೆಲ್ಲ ಇಲ್ಲಿ ಹೆಚ್ಚು ಚರ್ಚಾಸ್ಪದ ಎನಿಸುತ್ತವೆ. ಈ ಸ್ಥಿತ್ಯಂತರಗಳನ್ನು ಇಲ್ಲಿ ಅಧ್ಯಯನ ಮಾಡುವ ಮೂಲಕ ಕಾದಂಬರಿ ಒಳಗೊಳ್ಳುವ ಬಹುಶಿಸ್ತೀಯ ನೆಲೆಗಳನ್ನು ಕೂಲಂಕಷವಾಗಿ ಗ್ರಹಿಸುವುದು ಇಲ್ಲಿನ ಧ್ಯೆಯವಾಗಿದೆ.

ಗಂಗವ್ವ ಗಂಗಮಾಯಿ ಸಂಪ್ರದಾಯ ಶರಣ ಕಾದಂಬರಿ ಎಂಬುದು ಹಲವಾರು ವಿದ್ವಾಂಸರ ಅಭಿಪ್ರಾಯ. ಇಲ್ಲಿ ಲೇಖಕರು ಸಂಪ್ರದಾಯವನ್ನು ಒತ್ತಾಯವಾಗಿ ಎಳೆದು ತಂದರೂ ಕಾದಂಬರಿಯ ಒಳನೋಟ ಇದನ್ನು ಒಪ್ಪುತ್ತಿಲ್ಲ. ಗಂಗವ್ವ ಗಂಗಮಾಯಿ ಸಂಪ್ರದಾಯಕ ಹೆಸರುಗಳಾದರೂ ಗಂಗವ್ವ ಪಾತ್ರದ ಅಂತರ್ಯ ತುಂಬಾ ಪ್ರಗತಿಪರ ಇಲ್ಲವೇ ಸಂಪ್ರದಾಯವನ್ನು ಸವಲಾಗಿ ಸ್ವೀಕರಿಸುವ ಮನೋವೃತ್ತಿಯದು. ಗಂಗವ್ವಳ ಗಂಗಾಜಲ ಪ್ರಸಂಗ, ಶಾಲಿಗ್ರಾಮ ಪ್ರಸಂಗ ಇದಕ್ಕೆ ಸ್ಪಷ್ಟ ನಿದರ್ಶನ, ಕಿಟ್ಟಿಯ ಅಂತರ್ಯವಾದರೂ ಇಲ್ಲಿ ಗಣನೀಯ ಸಂಗತಿ. ಸಂಧ್ಯಾವಂದನೆಯಾದರೂ, ಮನೆಯ ಶುಚಿ ಅಡುಗೆಯ ಸವಿ ಇದ್ದರೂ, ಲಂಚದ ಕ್ಯಾಂಟೀನ್ ಟಿಫನ್‌ಗೆ ಮನಸೋತ ಮಹಾಶಯ. ಚಂಡಕಿಯ ಸಂಪ್ರದಾಯ ವಿದ್ದರೂ ಕಳ್ಳತನದಲ್ಲಿ ಕನ್ನಡಿಯ ಮುಂದೆ ನಿಂತು ಕ್ರಾಪು ಬಾಚಿ ಮೇಲೊಂದು ಟೊಪ್ಪಿಗೆ ಧರಿಸುವ ನಯವಂಚಕ ಪ್ರವೃತ್ತಿ. ಇವೆಲ್ಲ ಒಂದು ಹಂತದಲ್ಲಿ ಸಂಪ್ರದಾಯವನ್ನು ಒಳ ಒಳಗೆ ವಿರೋಧಿಸುವ ಪ್ರವೃತ್ತಿಯಾಗಿ ಗೋಚರಿಸುವುದಕ್ಕಿಂತಲೂ ಸಮಕಾಲೀನ ಪರಿಸರದ ಸ್ಥಿತಿಗತಿಗೆ ಹೊಂದಿಕೊಳ್ಳಬೇಕೋ ಸಂಪ್ರದಾಯ ನಿಷ್ಠೆ ತೋರಿಸಬೇಕೋ? ಎಂಬೆಲ್ಲ ತರ್ಕಗಳು ತೊಳಲಾಟವನ್ನು ತೋರಿಸುವ ಬಗೆಯಾಗಿದೆ. ಇಲ್ಲಿ ಲೇಖಕರು ಸಂಪ್ರದಾಯದ ಪರವಾಗಿಯೇ ಮಾತನಾಡುತ್ತಾ ಬದಲಾದ ಪರಿಸ್ಥಿತಿಗೆ ಸಂಪ್ರದಾಯದ ಚೌಕಟ್ಟಿನಲ್ಲಿ ಇಕ್ಕಟ್ಟನ್ನು ಸೃಷ್ಟಿಸದೇ ಸಮತೂಗಿಸುವ ವಿಚಾರವನ್ನು ಅನೇಕ ಸಾಂದರ್ಭಿಕ ಅಗತ್ಯಗಳಾಗಿ ವಿವರಿಸಿದ್ದಾರೆ. ಸಂಪ್ರದಾಯ ನಿಂತ ನೀರಲ್ಲ, ಅದು ಗಂಗೆಯಷ್ಟೆ ಪವಿತ್ರ ಹಾಗೂ ಚಲನಶೀಲತೆಯನ್ನು ಬಯಸುವುದು ಎಂಬ ಮಾತನ್ನು ಕಾದಂಬರಿಯ ನಿರ್ಮಾತೃವಾಗಿ ಸ್ಪಷ್ಟಪಡಿಸಿದ್ದಾರೆ. ಜೀವನ ಕ್ರಮವಾಗಿ ಸಂಪ್ರದಾಯ ಕೂಡ ಒಂದು ಚಲನಶೀಲತೆಗೆ ತನ್ನನ್ನು ಒಗ್ಗಿಸಿಕೊಳ್ಳುತ್ತದೆ. ಹೊಸ ಪ್ರವಾಹ ಪವಿತ್ರ ನದಿಯಾಗುತ್ತದೆ ಎಂಬ ಸಂಕೇತಿಕತೆ ಇಲ್ಲಿ ನೀರಿನಷ್ಟೆ ಸ್ಪಷ್ಟ. ಈ ಹಿನ್ನೆಲೆಯಲ್ಲಿ ಇಲ್ಲಿ ಪ್ರಸ್ತಾಪಿತವಾದ ಹಲವು ಸಂದರ್ಭಗಳನ್ನು ಕ್ರಮವಾಗಿ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಇತ್ಯಾದಿ ಅಂಶಗಳನ್ನು ಚರ್ಚಿಸಲಾಗಿದೆ.

ಸಾಮಾಜಿಕ ಅಂಶಗಳಾಗಿ ಹಲವಾರು ಸ್ಥಾಪಿತ ಸತ್ಯಗಳ ವಿರುದ್ಧ ಕಾದಂಬರಿ ಹೋರಾಡುತ್ತದೆ. ಅಲ್ಲದೇ ಸಂಪ್ರದಾಯಗಳನ್ನ ಬಲವಂತವಾಗಿ ಮುರಿಯುವ ಪ್ರಯತ್ನಗಳು ಸಮಾಜದ ಹಿರಿಯರು ಹಾಕಿದ ನೀತಿ ನಿಯಮಗಳು ವಿರೋದಿಸುತ್ತದೆ. ಉದಾಹರಣೆಯಾಗಿ ಸಾಮಾನ್ಯವಾಗಿ ಹಿರಿಯರೇ ಕನ್ಯೆಯನ್ನು ನಿರ್ಧರಿಸುವುದು ಒಂದು ಸಾಂಸ್ಕೃತಿಕ ಸತ್ಯ. ಮಗ ಮತ್ತು ಮಗಳು ಅದಕ್ಕೆ ಬದ್ದರಾಗಬೇಕಾಗುವ ಕರ್ತವ್ಯದ ಹೋರತಾಗಿ, ಕಿಟ್ಟಿ ಗಂಗವ್ವಳ ಆಸೆ ಆಕಾಂಕ್ಷೆಗಳಿಗೆ ಬದ್ಧನಾಗದೆ ತಾನೆ ರತ್ನಾಳನ್ನು ಮದುವೆಯಾಗಲು ನಿರ್ಧರಿಸುವುದು ಒಂದು ಬಗೆಯ ಸ್ಥಿತ್ಯಂತರ ವೆನಿಸುತ್ತದೆ.

ರತ್ನಳನ್ನು ನೋಡಿದ ಕಿಟ್ಟಿಯು ಅವಳನ್ನು ಮದುವೆ ಮಾಡಿಕೊಳ್ಳಲು ಬಯಕೆ ಇನ್ನು ಹೆಚ್ಚಾದವು. ಕಿಟ್ಟಿಯು ತನಗೆ ಗೊತ್ತಿಲ್ಲದೇ ರತ್ನಳನ್ನು ಪ್ರೀತಿಸತೊಡಗಿದ ಕಟ್ಟಿಯ ಮಂಗ ಮನಸ್ಸು ಉಪಾಯವನ್ನು ಹುಡುಕ ತೊಡಗಿ ಅದನ್ನು ಕೃತಿಯಲ್ಲಿ ಇಳಿಸಲು ಧೈರ್ಯವಿರಲಿಲ್ಲ. ಆದರೆ ದೇಸಾಯಿಯರ ಮನೆಯಲ್ಲಿ

ಆದ ಕನ್ಯಪರೀಕ್ಷೆಯಿಂದ ಇದೀಗ ನೆವದೊರೆತಂತಾಯಿತು. ಒಮ್ಮೆ ಕಿಟ್ಟಿ ರಾಘಪ್ಪನಿಗೆ ಈ ವಿಷಯ ತಿಳಿಸಿ ತನ್ನ ನಿರ್ಧಾರವನ್ನು ತಿಳಿಸಲು ಪ್ರಯತ್ನಿಸುತ್ತಾನೆ.

''ದೇಸಾಯರು ಒಂದು ಕನ್ಯ ಮಾಡಿಕೋಲಂತ, ಆಗ್ರಹ ಮಾಡಲಿಕ್ಕೆ ಹತ್ಯಾರ, ಯಾವು ದೇಸಾಯರು? ರಾಘಪ್ಪ ಮುಖ್ಯ ಪ್ರಶ್ನೆಯನ್ನು ಬದಿಗೆ ಸರಿಸಿದನು ನಮ್ಮ ಮನಿ ಹತ್ತಿರ ಬಹದ್ದೂರ ದೇಸಾಯಿರು, ಸುಣ್ಣದ ಮನೆಯವರು. ಹಿಂಗೇನು? ಎಂದು ರಾಘಪ್ಪನು ಅಂದಾಗ,

'ನನ್ನದೇನೂ ಈಗ ಲಗ್ನದ ವಿಚಾರವಿಲ್ಲ, ಅಂತ ತಿಳಿಸೇನಿ.....' ಹಂಗಾದರ ಯಾವಗ ಮಾಡಿಕೊಳ್ಳಬೇಕಂತ ಮಾಡೀ ರಾಘಪ್ಪ ಕೇಳಿದಾಗ

ಅಲ್ಲಲ್ಲ ಅವರಿಗೆ ಹಂಗ ತಿಳಿಸೇನಿ! ಎಂದು ಕಿಟ್ಟಿ ನಾಚಿಕೆ ತೊರೆದು ಹೇಳಿದ. ಇಲ್ಲಿಲ್ಲ ನೀವೇನು ಚಿಂತೆ ಮಾಡುವ ಕಾರಣವಿಲ್ಲ, ನಿಮ್ಮ ಮಗಳ ಹೊರತು ಇನ್ನೂ ಯಾರನ್ನ ಮಾಡಿಕೊಳ್ಳೊದಿಲ್ಲ ಅಂತ ಹೇಳಿಬಿಡಬೇಕೆಂದು ಮಾಡಿದ್ದೆ, ಹಿರೇರು ಅಂತ ಸುಮ್ಮನೆ ಇದ್ದೆ''[9] ಎಂದು ಹೇಳುವ ಕಿಟ್ಟಿ ಮದುವೆಯಾಗ ಬೇಕೆಂದು ನಿರ್ಧರಿಸಿದ್ದನು. ಈ ನಿರ್ಧರವು ತನ್ನ ಸ್ವಂತದಾಗಿತ್ತು. ಯಾವುದೇ ಗುರುಹಿಯರ ಸಮ್ಮತಿಯನ್ನು ಕೇಳದ ತಾನೇ ನಿರ್ಧರಿಸುವ ಸಂಗತಿಯು ಇತ್ತೀಚಿನ ದಿನದಲ್ಲಿ ಹುಡುಗರಲ್ಲಾದ ಪಲ್ಲಟವೆಂದು ಗ್ರಹಿಸಲಾಗಿದೆ.

ದೇಸಾಯಿ ರಾಘಪ್ಪ ನಂತವರು ಜಮೀನ್ದಾರರಾಗಿದ್ದ ದೊಡ್ಡ ಭೂಹಿಡುವಳಿ ಹೊಂದಿದ್ದವರು ಧಾರವಾಡದಂತಹ ಪಟ್ಟಣಕ್ಕೆ ಬಂದಿದ್ದು, ಆಧುನಿಕ ಬದುಕಿಗಾಗಿಯೇ ಹೆಣ್ಣು ಮಕ್ಕಳಿಗೆ ಇಂಗ್ಲಿಷ್ ಶಿಕ್ಷಣ ಕೊಡಿಸಬೇಕು ಎಂಬ ಚಿಂತನೆ ಹೊಂದಿದವರು. ಹಣವೂ ಇವರಲ್ಲಿ ಹೊಸ ಮನುಷ್ಯತ್ವವನ್ನು ತುಂಬ ತೊಡಗಿತ್ತು. ತಾಯಿಯಂತೆ ಕಿಟ್ಟಿಯು ಮಡಿ ಮೈಲಿಗೆ ಎಂಬ ಸಂಪ್ರದಾಯಸ್ಥ. ಆದರೆ ನೌಕರಿ ಸಿಕ್ಕಿದ ಮೇಲೆ ಆಧುನೀಕರಣಕ್ಕೆ ಇಳಿಯುತ್ತಾನೆ. ಗಂಗವ್ವ ನಂತವರ ದೃಷ್ಟಿಯಿಂದ ದುರ್ಮಾರ್ಗವಾಗುತ್ತದೆ. ಅಷ್ಟೆ ಏನೋ ನಿಕ್ಯಾಂಟಿನಲ್ಲಿ ಚಹ ಕುಡಿಯೊದಿಲ್ಲಂತ, ಪರಾಳ ತಿನ್ನೋದಿಲ್ಲಂತ, ಸಿನಿಮಾ ನೋಡುವುದಿಲ್ಲಂತ, ಬೃಂಗ ಋಷಿ ಇದ್ದಹಂಗ ಇದ್ದೀಯಂತೆ ನಮ್ಮಪ್ಪ ವರ್ಣನೆ ಮಾಡುತ್ತಿರುತ್ತಾನೆ. ಅಂತೂ ಕಳ್ಳ ಬೆಕ್ಕಿನ ಹಂಗ ಒಳಗಿಂದೊಳಗ ಎಲ್ಲ ಇತ್ತು ಅನ್ನಾ ಎಂದು ವಸಂತರಾಯ ಹೇಳವುದನ್ನು ಕಾಣುತ್ತವೆ. ಹೀಗಾಗಿ ಈ ರೀತಿಯ ಎಲ್ಲ ಚಟುವಟಿಕೆಯನ್ನು ಹೊಸ ತಲೆಮಾರು ಬಯಸುವುದು ಸಹಜವಾಗುತ್ತದೆ.

ಆಧುನಿಕ ಚಿಂತನೆಯಂತೆ ಚಹಾ ಪರಾಳ ಸೇವಿಸುವುದು ಅಷ್ಟೊಂದು ಮಹತ್ವದಲ್ಲ ಆದರೆ ಗಂಗವ್ವನಂತಹ ಬ್ರಹ್ಮಣ ಕುಟುಂಬಗಳಿಗೆ ಆ ಕಾಲದಲ್ಲಿ ಇದು ಸಂಪ್ರದಾಯದ ಮುರಿತವಾಗುತ್ತದೆ. ಕುಟುಂಬದ ನಿಯಮದಂತೆ ಸಾರ್ವಜನಿಕವಾಗಿ ಬೇರೆಲ್ಲೂ ಕೂಡ ಚಹಾ ಸೇವಿಸುವಂತಿಲ್ಲ. ಸಿನಿಮಾ ನೋಡುವಂತಿಲ್ಲ. ಆದರೆ ಸಿನಿಮಾ ನೋಡದದ ಚಹ ಫಳಾರ ಸೇವಿಸದ ಲಂಚ ಸ್ವೀಕರಿಸದ ಯುವಕರ ಬದುಕು ಬದುಕೇ ಅಲ್ಲ,

ಎಂಬ ಭಾವನೆಯ ಹೊಸ ತಲೆಮಾರಿನ ಯುವಕರದ್ದು ಸಂಪ್ರದಾಯವನ್ನು ದಿಕ್ಕರಿಸಿ ಆಧುನಿಕ ಬದುಕಿನಂತೆ ತಾವೇ ಹುಡಗಿಯನ್ನು ನೋಡಿ ಪ್ರೀತಿಸಿ ವಿವಾಹವಾಗಬೇಕೆಂಬ ಹೆಬ್ಬಯಕೆಯನ್ನು ಹೊಂದಿದ್ದವರು. ತನಗೆ ಹೆಣ್ಣು ಕೊಡಲು ಬಂದ ವ್ಯಕ್ತಿಯನ್ನು ಕಂಡ ಕಿಟ್ಟಿಯು ''ಅನುಷ್ಠಾನ ಉಂಗುರುದ ಹಣೆಯ ಮೇಲಿನ ತ್ರಿಪುಂಡ್ರ, ಕೊರಳಲ್ಲಿಯ ರುದ್ರಾಕ್ಷಿ, ಹುರಿ ಕಟ್ಟಾದ ಗಿಡ್ಡದೇಹ, ಇವೆಲ್ಲವನ್ನು ಕಂಡ ಕಿಟ್ಟಿಗೆ ಸಾಕಷ್ಟು ಆದರ ಹುಟ್ಟಿದ್ದರೂ ಕೂಡ ಇಂಥವನನ್ನು ಮಾವನೆಂದಾಗ, ಸ್ವೀಕರಿಸುವುದರಲ್ಲಿ ಅನೇಕ ಲೋಪ ದೋಷಗಳು ಕಂಡವು. ಈ ತ್ರಿಪುಂಡ್ರ ಧಾರಿಗೆ ಮಾಮಲೇದಾರರ ಗುರುತು ಇರುವುದು ಸಾಧ್ಯವಿಲ್ಲ. ಬಹಳವಾದರೆ ಅವರ ಮನೆಯ ದೇವರ ಗುರುತು ಇರಬಹುದು. ಈ ಲಂಡ ಪಂಚದಾರಿಯಾದ ಕೃಷ್ಣಕಾಯನೊಡನೆ, ಬೀದಿಗಳಲ್ಲಿ ಓಡಾಡುವುದು ಕಷ್ಟ ಇವನೇ ಹೀಗೆಂದ ಮೇಲೆ ಇವನ ಮಗಳು... ಇವನೆತ್ತಾ, ಮ್ಯಾಂಚೆಸ್ಟರ ಧೋತರದ ಆರುಪೂಟು ಎತ್ತರದ, ಗೌರವರ್ಣದ ರಾಘುಪ್ಪನೆತ್ತಾ''[೨] ಎಂದು ಮನಸ್ಸಿನಲ್ಲಿ ತಳಮಳ ಗೊಳ್ಳುವುದನ್ನು ಕಾಣಬಹುದು.

ಇಲ್ಲಿ ಬಿಳಿಬಣ್ಣ, ಮಾಮಲೇದಾರರ ಗೆಳತನ ಮ್ಯಾಂಚೆಸ್ಟರ ಪಂಚೆ, ನಗರ, ವಾಸನೆಯುಳ್ಳ ಆಧುನಿಕ ಮನುಷ್ಯರು ಮಾಧರಿಯಾಗುತ್ತಿರುವುದನ್ನು ಗಮನಿಸಬೇಕು. ನಗರದ ಬೀದಿಗಳಲ್ಲಿ ತಮ್ಮ ಹೆಂಡತಿಯನ್ನು ಕರೆದುಕೊಂಡು ಹೋಗುವಾಗ ಆಗುವ ಅನುಭವಗಳನ್ನು ಮೊದಲೇ ಊಹಿಸಿಕೊಳ್ಳಬಲ್ಲರು ಇದೇ ತಾನೆ ಆಧುನಿಕ ಎಂದು ಹೊಸ ತಲೆಮಾರು ಹಾತೊರೆದು ಪಡೆದುಕೊಂಡದ್ದು. ಇಲ್ಲಿ ಕಿಟ್ಟಿಯ ಯಾವ ರೀತಿಯಾಗಿ ತನ್ನ ಚಿಂತನ ಲಹರಿಯು ಆಧುನಿಕರಣಕ್ಕೆ ಒಳಗಾದ ಸಂಬಂಧವನ್ನು ಹುಡುಕುತ್ತಾವೆಂಬುದು ಸ್ಪಷ್ಟವಾಗುತ್ತದೆ. ಜೊತೆಗೆ ವ್ಯಂಗವೆಂದರೆ, ಮ್ಯಾಂಚೆಸ್ಟರ್ ಪಂಚೆಯ ಮಾಮಲೇದಾರನ ಗುರುತಿರುವ ಆಧುನಿಕ ಮನಸ್ಸಿನ ರಾಘುಪ್ಪ ನಿಜ ಜೀವನದಲ್ಲಿ ಯಾರ ಬಾಳಿಗೂ ಮಾದರಿಯಾಗಿಲ್ಲ.

ಇಲ್ಲಿ ಬರುವ ಬ್ರಾಹ್ಮಣರ ಜೀವನ ಕ್ರಮ ವಿಶೇಷವಾಗಿದೆ. ಆಧುನಿಕ ಬದುಕಿನ ಸಂಗೀತ ಶೋಕಿಯ ಬ್ರಾಹ್ಮಣರು ಮತ್ತು ಇವರ ಮದುವೆಯ ಸಮಾರಂಭದಲ್ಲಿ ಮಂಟಪವನ್ನು ಒಬ್ಬ ಮುಸ್ಲಿಂ ಪಾತರದವಳು ಬಂದು ಸಿಂಗರಿಸುವುದು. ಮದುಮಗಳನ್ನು ಅಲಂಕರಿಸುವುದು. ಸೀರೆ ಧರಿಸುವ ಪ್ರಸಂಗವನ್ನು ಊಹಿಸಿಕೊಳ್ಳುವುದು ಹಾಗೂ ಬ್ರಾಹ್ಮಣರ ಮಡಿ ಮೈಲಿಗೆಯ ಮುಂದೆ ಮುಸ್ಲಿಂ ಹಾಜರಾತಿಯನ್ನು ಆ ಕಾಲಘಟ್ಟದಲ್ಲಿ ಊಹಿಸಿಕೊಳ್ಳುವುದು ಕೂಡ ಕಷ್ಟ. ಜೊತೆಗೆ ರೇವಿನ್ಯೂ ಇಲಾಖೆಯಲ್ಲಿ ಬ್ರಾಹ್ಮಣರೇ ಅಧಿಕವಾಗಿದ್ದು, ಇವರ ಕಛೇರಿಯ ವ್ಯವಹಾರಗಳು ಹಾಗೂ ಕಂದಾಯ ವಸೂಲಾತಿಗಾಗಿ ಹಳ್ಳಿ ಹಳ್ಳಿಯಲ್ಲಿ ಸಂಚರಿಸುವಾಗ ಬದುಕಿನ ವ್ಯವಹಾರ ತಕ್ಕಂತೆ ಬದಲಾದವರು. ಬ್ರಾಹ್ಮಣರಾದರೂ ಅನ್ಯೇತರ ವ್ಯವಹಾರಕ್ಕೆನೂ ಕಡಿಮೆಯಿಲ್ಲಿ ಅನೈತಿಕ ನಿಯಮ ಬಾಹಿರ ಎಂದೆನ್ನಿಸಿದರೂ ಲಂಚ ಸ್ವಿಕರಿಸುವುದನ್ನು ಕಾಣಬಹುದು. ಕಿಟ್ಟಿಯು ಕೂಡ ಇದಕ್ಕೆ ಹೊರತಾಗಿಲ್ಲ. ಇವನು ಕೂಡ ಅನೈತಿಕ ಲೈಂಗಿಕ ಸಂಪರ್ಕವನ್ನು ತಿಳಿದು ತಿಳಿಯದಂತೆ ಮಾಡುತ್ತಾನೆ. ಇದಕ್ಕೆ ಲೇಖಕರು

''ಕಾಲು ಜಾರದ ಸರಕಾರಿ ಕೆಲಸಗಾರರು

ಧರ್ಮರಾಜನೇ ಆಗಿರಬೇಕು.''[೩]

ಎಂದು ವ್ಯಂಗವಾಗಿ ವಿಡಂಬಿಸುತ್ತಾರೆ. ಮುಸ್ಲಿಂ ಜನರಿಂದ ಬ್ರಾಹ್ಮಣರು ತಂಬಾಕು ಸ್ವೀಕರಿಸುವುದು ಆಶ್ಚರ್ಯವೆನ್ನಿಸಬಹುದು. ಮದುವೆಯ ಮಡಿಮೈಲಿಗೆಯಲ್ಲಿ ಇವರ ಪ್ರವೇಶ ಹಾಗೂ ಮದುವೆ ಮಂಟಪವನ್ನು ಸಿಂಗರಿಸುವುದು ಲೇಖಕರ ಆಧುನಿಕ ಚಿಂತನೆಗೆ ಒಂದು ಕಡೆ ಸಾಕ್ಷಿಯಾಗಿ ನಿಂತಂತಿದೆ. ಇಲ್ಲಿ ಕೂಡ ಸಂಪ್ರದಾಯವನ್ನು ಮುರಿಯುವ ಪ್ರಸಂಗವನ್ನು ನೋಡಬಹುದಾಗಿದೆ.

ವರ್ಗ ಸಂಘರ್ಷವೆನ್ನುವುದು ತಲಾತಲಾಂತರದಿಂದ ನಡೆದುಕೊಂಡು ಬಂದಿದೆ. ಊರಲ್ಲಿ ದೇಸಾಯಿ, ಗೌಡ, ಉನ್ನತ ದರ್ಜೆಯಲ್ಲಿರುವರನ್ನೆ ಗೌರವದಿಂದ ನೋಡುತ್ತಿದ್ದ ಕೆಳದರ್ಜೆಯವರು, ಕ್ರಮೇಣ ಶಿಕ್ಷಣ ಪ್ರಸಾರದಿಂದಾಗಿ ಎಲ್ಲರಿಗೂ ಸಮಾನ ಶಿಕ್ಷಣ ದೊರತ ಕಾಲದಿಂದ ಕೆಳದರ್ಜೆವರು ಶಿಕ್ಷಣ ಪಡೆದು ಕೊಳ್ಳುವಂತಾಗಿ, ಸಮಾಜದಲ್ಲಿ ಸ್ಥಿತ್ಯಂತರಕ್ಕೆ ಅವಕಾಶ ಮಾಡಿಕೊಟ್ಟಿತ್ತು. ಎರಡು ವರ್ಗಗಳ ಪರಸ್ಪರ ಹೋರಾಟಕ್ಕೆ ಕಾರಣವಾಯಿತುವೆನ್ನಬಹುದು. ಊರಲ್ಲಿ ಬಣಗಳು ಎದ್ದು, ಊರನ್ನೆ ಅಶಾಂತಿಗೊಳಿಸಿದ್ದವು ಎರಡು ಪೈಪೋಟಿಗೆ ಇಳಿಯುವಂತೆಯಾದವು ಮ್ಯಾಟ್ರಿಕ್ ನಪಾಸಾದ ವಸಂತನಿಗೂ, ಪರೀಕ್ಷ ಪಾಸಾದ ರಾಮಗೌಡನಿಗೂ ಬದ್ದದ್ವೇಷ. ಅವರಿಬ್ಬರೂ ನಾಲ್ಕು ಬುಕ್ಕ್ ಓದಿದವರು. ಇಬ್ಬರು ಸಿರಿವಂತರು ಇಬ್ಬರು ಕಮತಿಗರು! ಪೈಪೋಟಿಯಿಂದ ಆರಂಭವಾದದ್ದು ದ್ವೇಷಕ್ಕೆ ತಿರುಗಿತು. ಇದೀಗ ತನ್ನ ಓಣಿಯ ಮೇಳವನ್ನು ಕೂಡಿಸಿ ಬಯಲಾಟವನ್ನ ಮಾಡಬೇಕೆಂದು ಸಿದ್ಧತೆ ಮಾಡಿಕೊಡಲೇ, ವಸಂತನ ಉಡಾಳ ಮಿತ್ರರು ಅವನನ್ನ ಹುರಿಗೊಳಿಸಿದರು. ಗೌಡ ಬಯಲಾಟ ಮಾಡಿದರೆ ತಾನು ನಾಟಕ ಹೊಡಸಿಯೇ ಬಿಡಬೇಕೆಂದು ನಿಶ್ಚಯಿಸಿ ಸಮೀಪ ಊರಿಂದ ಓರ್ವ ಸಂಗೀತದ ಭಾಗವತನನ್ನು ಊರಿಗೆ ಬರಮಾಡಿಕೊಂಡು ಮನೆಯಲ್ಲಿಯೇ ಮೇಳ ಹುಡಿದನು. ಈ ರೀತಿಯಾಗಿ ಸಮಾಜದಲ್ಲಿ ದೇಸಾಯರು, ದೇಶಪಾಂಡೆಯವರು ಗೌಡರಿಗೆ ಇರುವ ಯಜಮಾನಿಕೆ ಸರ್ವಮಾನ್ಯವಾದರೂ ಕತೆಯಲ್ಲಿ ದೇಸರ ಮಗ ವಸಂತರಾಯ ಮ್ಯಾಟ್ರಿಕ್ ಪೇಲಾದವ ಇನ್ನೊಬ್ಬ ವ್ಯವಸಾಯಗಾರನ ಮಗ ರಾಮೇಗೌಡ ಮ್ಯಾಟ್ರಿಕ್ ಪಾಸಾದವ, ವೃತ್ತಿ ಒಂದೇಯಾದರೂ ಶಿಕ್ಷಣದ ಪರಿಸರ ರಾಮೆಗೌಡ ವಸಂತರಾಯನ ವಿರುದ್ಧ ನಿಲ್ಲುವಂತೆಯಾಯಿತು.

ಧಾರವಾಡದಿಂದ ಹಳ್ಳಿಗೆ ಹೊಲವನ್ನು ನೋಡಿಕೊಳ್ಳುವ ನೆಪದಲ್ಲಿ ಹೋದ ವಸಂತರಾಯ, ಇನ್ನಷ್ಟು ಗುಣಸ್ವಭಾವದಲ್ಲಾದ ಪರಿವರ್ತನೆ, ದೇಸಾಯಿರನ್ನು ಚಿಂತೆಗೆ ಎಡೆಮಾಡಿಕೊಡುತ್ತಿದೆ. ಶಾಲೆಯಲ್ಲಿ ಒಂದು ರೀತಿಯ ಹುಂಬ ಜೀವನ ನಡೆಸಿ ಶಾಲೆಯಿಂದ ಹೊರಹಾಕಲ್ಪಟ್ಟ. ಇವನಲ್ಲಿ ಕೆಲವೊಂದು ದುಶ್ಚಟಗಳಾದ ಇಸ್ಪೀಟು ಆಡುವುದು, ಕುಡಿಯುವುದು, ಉಡಾಳರ ಸಂಗತಿ ಹರಟೆ, ಎತ್ತುಗಳಿಗೆ ಲೈನ್ ಬಜಾರದ ಪೇಡೆಗಳನ್ನು ತಿನ್ನುಸುವ ಹುಂಬ ಪ್ರವೃತ್ತಿ ಊರಲ್ಲಿಯ ದ್ವೇಷ ಕಲಹಗಳ ಉಲ್ಬಣಿಸುವಂತಾದವು ವಸಂತನ

ಬಗ್ಗೆ ಎಲ್ಲ ಸತ್ಯವನ್ನು ತಿಳಿದುಕೊಳ್ಳುವಲ್ಲಿ ದೇಸಾಯಿ ಹಿಂದೆಟು ಹಾಕುತ್ತಾರೆ. ಏಕೆಂದರೆ ಅವರಲ್ಲಿ ಅದನ್ನು ಸಹಿಸುವ ಶಕ್ತಿ ಇಲ್ಲವೆಂತನೆ ಹೇಳಬಹುದು. ರಾಘುಪ್ಪನ ಸಹವಾಸದಿಂದ ಇನ್ನು ದೊಡ್ಡ ಕಳವು ಸುಳ್ಳು ಹೇಳಿ ಇಡೀ ದೇಸಾಯಿರ ಮನೆ ಮನಸ್ಸನ್ನು ಗೊಂದಲವಾಗಿ ಮಾಡಿಬಿಡುತ್ತಾನೆ. ಹೊಲದಲ್ಲಿ ಬೆಳೆದಿರುವ ಜ್ವಾಳದ ಚೀಲವನ್ನು ಮಾರಿಕೊಳ್ಳುವುದು. ನಾಟಕ ಕಂಪನಿಯನ್ನು ತೆಗೆಯಬೇಕು ಅದರಲ್ಲಿ ರಾಜನ ಪಾತ್ರವನ್ನು ಮಾಡಬೇಕೆಂದು ಆಸೆ ಪಟ್ಟು, ರಾಘುಪ್ಪನ ಹೇಳಿದಂತೆ ತಂದೆಯನ್ನು ಆಸ್ತಿಯ ಪಾಲನ್ನು ಕೇಳಲು ತಯಾರಾಗುತ್ತಾನೆ. ಉನ್ನತ ನೈತಿಕ ಮೌಲ್ಯಗಳನ್ನು ಹೊಂದಿದ ದೇಸಾಯಿಯ ವಿರುದ್ಧವಾದ ಸ್ವಭಾವ ಬೆಳಸಿಕೊಂಡಿರುವುದು. ಅವನ ಸಹವಾಸದೋಷವೇ ಕಾರಣವಾಗುತ್ತದೆ. ಅನೈತಿಕ ದಾರಿಯ ಹಿಡುವಲ್ಲಿ ರಾಘುಪ್ಪನೇ ಕಾರಣವಾಗಿ ನಿಲ್ಲುತ್ತಾನೆ. ಇದರಿಂದ ಅವನ ತನ್ನ ಮಗಳನ್ನು ಕೊಡಬೇಕೆನ್ನುವ ಹಟವು ಇರುವುದು ಸಷ್ಟವಾಗುತ್ತದೆ.

ತರುಣ ಪೀಳಿಗೆಯವರು ಬೇರೆಯವರ ನಿಲುವಿಗೆ ಬದ್ಧರಾಗಿ ಮತ್ತು ತಮ್ಮ ನಿಲುವುಗಳಿಗೆ ಅಂಟಿಕೊಂಡು, ಇಷ್ಟಾನುಸಾರವಾಗಿ ವರ್ತಿಸಿ ತಂದೆ-ತಾಯಿ ಹೇಳಿದಮಾತು, ಕಷ್ಟಪಟ್ಟ ದಿನಗಳನ್ನು ನೆನಸಿಕೊಳ್ಳದೇ ಜವಬ್ದಾರಿಯನ್ನು ಅರಿಯದವರಾಗಿ ಉಳಿಯುತ್ತಾರೆ.

ಸಮಾಜದಲ್ಲಿ ದೇಸಾಯಿರಿಗೆ ಇರುವ ಗೌರವ ಉನ್ನತ ಮಟ್ಟದ್ದು ಅದರಲ್ಲೂ ಸಂಘ ಸಂಸ್ಥೆಗಳಿಗೆ ಡೋನರ್ ಆದರೆ ಅವರ ಪರಿಸ್ಥಿತಿ ಹೇಳತೀರದು ಇದಕ್ಕೆ ನಗರ ಗ್ರಾಮೀಣ ಎಂಬ ಭೇದ ವಿಲ್ಲ. ಆದರೆ ವಸಾಹತುಶಾಹಿ ನೀತಿಯಿಂದಾಗಿ ಜಾರಿಗೆ ಬಂದ ಶಿಕ್ಷಣದಿಂದಾಗಿ, ಈ ಅಸಮಾನತೆ ಕಡಿಮೆಯಾಗಿತು. ಶಿಕ್ಷಣ ಸಾಧನೆ ಜೀವನದ ಸಾಧನೆಯ ಹಂತಕ್ಕೆ ಬಂದಿತ್ತು ಎಂಬುದು ವಸಂತರಾಯ ಪರವಾಗಿ ಅಪರಾದಿ ಸ್ಥಾನದಲ್ಲಿದ್ದ ದೇಸಾಯರ ಅರಿವಿಗೆ ಬಂದಿತ್ತು ಹಾಗಾಗಿಯೇ ಅಲ್ಲಿ ಪರವಾದಕ್ಕಿಂತ ಶಿಕ್ಷೆಯ ಅಪೇಕ್ಷೆ ಅನಿವಾರ್ಯವಾಗಿತ್ತು ಎಂಬುದು ಈ ಸಂದರ್ಭದಿಂದ ಸ್ಪಷ್ಟಪಡಿಸಬಹುದು.

'ಮಾಸ್ತರ, ಈಗನಾ ಡೋನಾರ ಅನ್ನೋದನ್ನ ಮರೆತು ಬಿಡಿರಿ. ಆದರ ಹುಡುಗನ ತಂದಿ ಅನ್ನೋನಾತೆದಿಂದ ನನದೊಂದು ಪ್ರಾಥನಾ ಆದ. ಅದು ನಿಮಗೂ ನೀಗದಿದ್ದರೆ ನೀವು ಬಿಡೆ ಇಲ್ಲದೆ ಆಗೋದಿಲ್ಲ ಅನ್ನರಿ ಏನೂ ಚಿಂತೆ ಇಲ್ಲ"[೪] ಎಂದರು.

ಮಾಸ್ತರಿಗೆ ಚಿಂತನೆ ಶುರವಾಗಿ ದೇಸಾಯರು ಏನು ಹೇಳುತ್ತಾರೆ ಎಂದು ಬೇಸರದಿಂದ ಅವರು ಏನು? ಎಂದು ಕೇಳಿದರು.

'ನನ್ನ ಮಗನ ಹೆಸರು ಕಿತ್ತಹಾಕಲಿಕ್ಕೆ ನಾನು ಅರ್ಜಿಕೊಡತೇನಿ ಅವನ ಹೆಸರು ತೆಗೆದು ಹಾಕರಿ. ಅವನಗ ಸಾಲೀಪಾತಾಂಗಣದಾಗ ಕಾಲ ಹಾಕಬೇಡ ಅಂತ ತಾಕೀದ ಮಾಡತಿನಿ ಇಷ್ಟ ಮೀರಿ ಅವ ಬಂದರ ಎರಡನೇ ವಿಚಾರ ಇಲ್ಲದ ಶಿಪಾಯಿ ಹಚ್ಚಿ ಹೊರಗ ಹಾಕಿಸರಿ, ಒಬ್ಬನ ದಂಜಿಂದ ಇಡೀ ಸಾಲಿ ಕೆಡೋದು ಬೇಡ

ಸಾಲಿನೂ ಒಂದು ರೀತಿಯಿಂದ ನನ್ನ ಮಗನ! ನಿಮ್ಮ ಇಚ್ಛಾ ಇದ್ದರ ನಾ ಒಂದು ಕ್ಷಮಾಪಣೆಯ ಪತ್ರ ಬರಕೊಡತೇನಿ. ಆದರ ಸಾಲಿ ರಿಕಾರ್ಡನೊಳಗ ಮಾತ್ರ Expelled ಎಂಬ ಶಬ್ದ ಬ್ಯಾಡ''[೫] ಎಂದು ಪಾರ್ಥನೆ ಮಾಡಿಕೊಂಡರು.

ನ್ಯಾಯಕ್ಕೆ ಎಲ್ಲರೂ ತಲೆಬಾಗಲೇಬೇಕು ಅದು ಡೋನಾರಾಗಲೀ ದೊಡ್ಡ ವ್ಯಕ್ತಿಯಾಗಲೀ, ತಪ್ಪಾಮಾಡಿದವನಿಗೆ ಶಿಕ್ಷೆಯಾಗಲೇ ಬೇಕು ಎಂಬ ಮನೋಧೋರಣೆಯನ್ನು ತಳೆದ ದೇಸಾಯಿ ಆದರ್ಶ ವ್ಯಕ್ತಿಯ ಸಾಲಿಗೆ ಸೇರುತ್ತಾರೆ. ಹೀಗೆ ದೇಸಾಯಿರ ಒಂದು ಒಳ್ಳೆಯ ನಿರ್ಧಾರಗಳು ಆಗಿನ ಕಾಲದ ಸಮಾಜದ ವ್ಯಕ್ತಿಗಳ ಆದರ್ಶ ನೀತಿಯನ್ನು ಪ್ರತಿಬಿಂಬಿಸುತ್ತವೆ. ಆದರ್ಶವೆನ್ನುವ ಮಾನದಂಡ ವ್ಯಷ್ಟಿ ಪ್ರಜ್ಞೆಯಿಂದ ಸಮಷ್ಟಿ ಪ್ರಜ್ಞೆಯಾಗಿ ರೂಪುಗೊಳ್ಳುತ್ತಿರುವ ಸಂದರ್ಭ ಅದಾಗಿತ್ತು. ಆದರ್ಶಪ್ರಿಯತೆ ಹಳೆಯ ಪರಿಕಲ್ಪನೆಯಾದರೂ ಅದರ ನಿಯಮಬದ್ದ ಚಲಾವಣೆ ಆ ಕಾಲದ್ದು, ಚಿಕ್ಕವರಾದವರು ಹಿರಿಯರಾದ ತಂದೆ ತಾಯಿ ಗುರುಗಳಿಗೆ ಗೌರವ, ನಯ, ವಿನಯ, ಕ್ಷಮಾಪಣೆ ಮುಂತಾದ ಗುಣಗಳು ಒಂದು ಒಳ್ಳೆಯ ಹುಡುಗನ ಲಕ್ಷಣ, ಆದರೆ ವಸಂತರಾಯನಲ್ಲಿ ಇವು ಯಾವಗುಣಗಳು ಹುಡುಕಿದರು ಸಿಗದು. ಊರಿಗೆ ಒಬ್ಬ ಸಭ್ಯ, ಗೌರವಸ್ಥ ಕುಟುಂಬದ ದೇಸಾಯಿರನ ತಲೆತಗ್ಗಿಸುವ ಹಾಗೆ ಮಾಡಿದ, ಶಾಲೆಯಲ್ಲಿ ವಸಂತನು ನಾನಾ ರೀತಿಯ ಚೇಷ್ಟೆಗಳಿಂದಾಗಿ ಹೊರಹಾಕಲ್ಪಟ್ಟನು. ಅದು ಸ್ವತಃ ದೇಸಾಯಿರು ತೆಗೆದುಕೊಂಡ ನಿರ್ಧಾರವಾಗಿತ್ತು ಮಾಡಿದ ತಪ್ಪನ್ನು ವಸಂತರಾಯ ತಿದ್ದುಕೊಳ್ಳದೇ ಹೋಗುವನು. ಅಷ್ಟೆ ಅಲ್ಲದೆ ವೇಣುಬಾಯಿ ವಸಂತಾ ನನ್ನ ಕೈಬಿಡಬ್ಯಾಡಪಾ ನೋಡು, ನಿನ್ನೆ ನಿನ್ನ ದಶಿಂದ ಸ್ವಲ್ಪ ಸುದ್ದ ನಿದ್ದಿ ಹತ್ತಲಿಲ್ಲ, ರಾತ್ರೆಲ್ಲಾ ಹಿಂಗ ಎದ್ದು ಕೂತೇನಿ ಅವರಾದರೂ ನಿನ್ನ ಹೆಂಗ ರಾತ್ರೋರಾತ್ರಿ ಓಣಿ ಓಣಿ ಹುಡುಕಾಡಿದರು. ಎಷ್ಟು ತ್ರಾಸಮಾಡಿಕೊಂಡರು. ಹೋಗಪ್ಪಾ ''ನನ್ನದು ತಪ್ಪಾತು? ಇಷ್ಟಾ ಅವರ ಎದುರಿಗೆ ಹೇಳಿ ಬಾ ಅವರ ಮನಸ್ಸಿಗೆ ಒಂದಿಷ್ಟಾದರೂ ಹಗರು ಆದೀತು.''[೬] ಎಂದು ಬೆಡಿಕೊಂಡಳು. ವಸಂತನು ತಂದೆಯನ್ನು ಕ್ಷಮೆಕೇಳಲು ಸಿದ್ಧನಾಗಲಿಲ್ಲ. ಮತ್ತೆ ತಂದೆಯೇ ತನ್ನ ಶಾಲೆಯಿಂದ ಹೊರತೆಗೆದದ್ದು, ಸಿಪಾಯಿರನ್ನ ಹಚ್ಚಿ ಹೊರಗೆ ಹಾಕಲು ಮಾಸ್ತರರಿಗೆ ಹೇಳಿದ್ದ ನೆನಪಾಗಿ ಅವ್ವನ ಮಾತಿಗೆ ಸರ್ವಥಾ ಒಪ್ಪಲಿಲ್ಲ. ಈ ಕಥೆಯಿಂದಾಗಿ ತಂದೆ ತಾಯಿಗಳಿಗೆ ಗೌರವ ಕೊಡದ, ಕ್ಷಮಾಪಣೆ ಕೇಳಿಕೊಳ್ಳದ ವಸಂತರಾಯ ಇಂದಿನ ಮುಂದುವರೆದ ಶಿಕ್ಷಣದಿಂದಾಗಿ ದೇಸಾಯಿ ಎಂಬ ಅಹಂ ಒಂದು ಕಡೆಯಾದರೇ ಶಾಲೆಯ ನಾಲ್ಕಕ್ಷರ ಕಲಿತದ್ದರಿಂದಾಗಿ ಅವನಲ್ಲಿನ ವ್ಯಾತ್ಯಾಸಕ್ಕೆ ಕಾರಣವೆನ್ನಬಹುದು. ಹೊಸ ತಲೆಮಾರಿನಲ್ಲಿ ಕಂಡ ಈ ಬದಲಾವಣೆ ಹಳೆತಲೆಮಾರಿಗೆ ಚಿಂತನೆಗೆ ಎಡೆ ಮಾಡುತ್ತ ಹೋಗುತ್ತದೆ. ಹೊಸ ಪೀಳಿಗೆಯಲ್ಲಿ ಒಳ್ಳೆಯ ವ್ಯಕ್ತಿತ್ವದ ಗುಣಗಳು ಮಾಯವಾಗುವುದು ಸಹಜ. ಮನುಷ್ಯನು ಬದಲಾವಣೆಯನ್ನು ಬಯಸುತ್ತಾನೆ. ಒಂದೇ ರೀತಿಯಾಗಿ ಇರಲು ಸಾಧ್ಯವಿಲ್ಲ ಕಾಲದಿಂದ ಕಾಲಕ್ಕೆ ವ್ಯಕ್ತಿಯ ನಡತೆ ಗುಣಗಳಲ್ಲಿ ಬದಲಾವಣೆಗೆ

ನಗರೀಕರಣದ ಪ್ರಭಾವವೆಂತಲೂ ಹೇಳಬಹುದಾಗಿದೆ. ಆದುದರಿಂದ ಇಂತಹ ಒಂದು ಚಿತ್ರಣವನ್ನು ಪುಣೇಕರ ತಮ್ಮ ಕಥೆಯಲ್ಲಿ ಬಿಂಬಿಸಿದ್ದಾರೆ.

ವಸಾಹತುಶಾಹಿಯ ಕೊಡುಗೆಯಾಗಿ ಬಂದ ಶಿಕ್ಷಣ ಪ್ರಸಾರದಿಂದ ನೌಕರಿ ಪಡೆಯುವಂತೆಯಾಯಿತು. ನೌಕರಿ ಪಡೆದ ವ್ಯಕ್ತಿಯ ಮೇಲೆ ಗಾಡವಾದ ಪ್ರಭಾವ ಬೀರಿತು. ಬಾಹ್ಯ ಮತ್ತು ಆಂತರಿಕವಾಗಿ ಕಿಟ್ಟಿಯು ನೌಕರಿಯನ್ನು ಪಡೆದ ನಂತರ ಬದಲಾವಣೆಯಾದದ್ದು ನೋಡಬಹುದಾಗಿದೆ. ಕಛೇರಿಯಲ್ಲಿ ಹೊಸ ವ್ಯಕ್ತಿಗಳ ಸ್ನೇಹ ಪರಿಚಯವು ಇವನ ವ್ಯಕ್ತಿತ್ವವನ್ನೆ ಬದಲಾಯಿಸಿತು. ನೌಕರಿಯಿಂದ ಹಣವು ಆತನನ್ನು ಹೊಸ ಮನುಷ್ಯ ನನ್ನಾಗಿಸುತ ಬದಲಾಗದ ಜಗತ್ತಿನ ಕ್ಷಣ ಕ್ಷಣಕ್ಕೆ ಬದಲಾಗುತ್ತಿದ್ದ ಕಿಟ್ಟಿಗೆ ಉಸಿರುಗಟ್ಟುವ ಪ್ರಸಂಗಗಳು ಕ್ಷಣಕ್ಷಣಕ್ಕೆ ಬರುತ್ತಿದ್ದವು. ಲಂಡ ಚಣ್ಣ ಬಿಟ್ಟು ಪೈಜಾಮಗಳನ್ನು ಧರಿಸತೊಡಗಿದನು. ಕೂದಲು ಉದ್ದವಾಗಿ ಚಂಡಿಕೆಯ ಎಳೆಗಳ ಸಂಖ್ಯೆ ಕಡಿಮೆಮಾಡಿದ್ದು ಜೊತೆಗೆ ಕನ್ನಡಿಯೆದುರು ನಿಂತು ಬೈತಲೆ ತೆಗೆದುಕೊಳ್ಳುವ ಹವ್ಯಾಸ, ಅದನ್ನು ಮುಚ್ಚಲು ಟೊಪ್ಪಿಗೆಯೊಂದನ್ನ ಧರಿಸುವ ನಾಟಕೀಯತೆ ಇಂತಹ ಬದಲಾವಣೆಗಳು ಸಂಪ್ರದಾಯವನ್ನು ವಿರೋಧಿಸುವ ಮತ್ತು ಹೊಸತನ್ನು ಸ್ವಾಗತಿಸುವುದನ್ನು ಕಾಣುತ್ತೇವೆ. ಸಂಪ್ರದಾಯವು ಸದಾ ಚಲನ ಶೀಲತೆಯಿಂದ ಕೂಡಿರುತ್ತದೆ. ಎಂಬುದು ಸ್ಪಷ್ಟಪಡಿಸಬಹುದು. ಸಂಪ್ರದಾಯವೆನ್ನುವುದು ಸ್ಥಿರವಾಗಿದ್ದರೆ. ಜಿಡ್ಡುಗಟ್ಟಿದಂತಾಗುತ್ತದೆ. ಅದು ಯಾವಾಗಲೂ ಕಾಲದಿಂದ ಕಾಲಕ್ಕೆ ಪೀಳಿಗೆಯಿಂದ ಪೀಳಿಗೆಗೆ ಬದಲಾವಣೆಯನ್ನು ಬಯಸುತ್ತದೆ. ಕಿಟ್ಟಿಯು ಕೇವಲ ಒಂದು ಉಡುಪಿನಲ್ಲಿ ಮಾತ್ರ ಬದಲಾವಣೆಯನ್ನು ಕಾಣದೇ ಅವನು ಸೇವಿಸುವ ಆಹಾರ-ಪಾನೀಯಲ್ಲಾದ ವ್ಯತ್ಯಾಸವನ್ನು ಕಂಡುಕೊಳ್ಳಬಹುದು. ಒಂದು ಬ್ರಾಹ್ಮಣ ಸಮುದಾಯದಲ್ಲಿ ಬೆಳೆದ ಕಿಟ್ಟಿಯು ಮಡಿ ಮೈಲಿಗೆ ಎಂದು ಯಾವುದೇ ರೀತಿಯ ಹೊರಗಿನ ಹೊಟೆಲ್ ನೋಡದ ವ್ಯಕ್ತಿಯಾಗಿದ್ದ, ನೌಕರಿಯಾದ ನಂತರ ಕ್ಯಾಂಟಿನಿಗೆ ಹೋಗುವ ರೂಢಿ ಬೆಳೆಸಿಕೊಂಡನು. ಕ್ಯಾಂಟಿನಿಗೆ ಹೋದ ಕಿಟ್ಟಿಯು ಕೇವಲ ಒಂದು ಕಪ್ಪು ಹಾಲನ್ನು ಮಾತ್ರ ಸೇವಿಸುತ್ತಿದ್ದನು. ಕ್ರಮೇಣ ಹಾಲನ್ನು ಬಿಟ್ಟು ಚಹವನ್ನು ನಂತರ ಕೊಡಬಳೆ ಚಕ್ಕಲಿ ತಿನ್ನುವ ಹವ್ಯಾಸ ಬೆಳೆಸಿಕೊಂಡನು. ಮುಂದುವರೆದು ಫಳಾರವನ್ನು ಕ್ಯಾಂಟಿನಲ್ಲಿ ಮಾಡುವ ಅಭ್ಯಾಸ ಜಾರ್ಜನಿಂದ ಪಡೆದುಕೊಂಡನು.

ಒಂದು ಸುವ್ಯಸ್ಥಿತವಾದ ಬದುಕನ್ನು ಸಾಗಿಸುತ್ತಿದ್ದ ಗಂಗವ್ವ ಶೇರು ಬಂಗಾರ ಮೈಮ್ಯಾಲ ಇಟ್ಟುಕೊಂಡಿರುವಳು. ಒಳ್ಳೆ ಶ್ರೀಮಂತ ಜೀವನ ನಡೆಸುತ್ತಿದ್ದಳು ಎಂಬುದಕ್ಕೆ ಹೊಲ, ಮನಿ ಬಂಗಾರವೇ ಕುರುಹುಗಳಾಗುತ್ತವೆ. ಸ್ವಾಮಿರಾಯನು ಒಬ್ಬ ಉತ್ತಮ ವ್ಯಾಪಾರಿಯಾಗಿದ್ದು, ಗಂಗವ್ವನ ಮಾತಿನ ಪ್ರಸಂಗದ ಮೂಲಕ ತಿಳಿಯಬಹುದಾಗಿದೆ. ಇಂತಹ ಒಂದು ಆರ್ಥಿಕ ಪರಿಸ್ಥಿತಿಯಲ್ಲಿ ಉತ್ತಮವಾಗಿದ್ದ ಕುಟುಂಬಕ್ಕೆ 'ಜಾಮೀನು' ವೆನ್ನುವ ಭೂತ ಇವರ ಕುಟುಂಬವನ್ನು ಎಂತಹ ದುರ್ಗತಿಗೆ ತರುತ್ತದೆ. ಜಾಮೀನು ಆದ ತಪ್ಪಿಗೆ ಇವರು ಆಸ್ತಿ ಮನಿ ಕಳೆದುಕೊಳ್ಳುವಂತಾಯಿತು. ಮನ್ಯಾಗಿನ ಚೆಂದಾ ಚೆಂದದ

ಸಾಮಾನು ಚಿಲ್ಲರ ಕಿಮ್ಮತಿಗೆ ಲಿಲಾವು ಆಗಿಹೋದವು..... ಎಲ್ಲಾ ಮನಿ ತೊಳೆದು ಹೋತ್ತು. ಮುಂದೆ ಸ್ವಾಮೀರಾವ್‌ರವರು ಹೃದ್ರೋಗ ಹತ್ತಿ ನವದು ನವದು, ತಮ್ಮ ಪ್ರಾಣ ಬಿಟ್ಟರು. ಮತ್ತೆ ಬಡತನ ಛಾಯೆ ಆ ಮನೆಯನ್ನು ಆವರಿಸಿತು. ಗಳಿಸುವ ಕೈ ಕಣ್ಮರೆಯಾದ ಮ್ಯಾಲೆ ಮನೆತನದ ಗತಿ ದೇವರೇ ಬಲ್ಲ. ಎಂಟು ವರ್ಷಗಳವರೆಗೆ ಗಂಗವ್ವ ಸೋಸಿದ ಬವಣೆ ಅಷ್ಟಿಷ್ಟಲ್ಲ. ಕಿಟ್ಟಿಗಾಗಿ ತಾನೂ ಅರಹೊಟ್ಟೆಯುಂಡು ಅವನಿಗೆ ಉಣಿಸಿದಳು, ತಾನೂ ಹೆರವರಲ್ಲಿ ಅಡಿಗೆಮಾಡಿ ಕಿಟ್ಟಿಯನ್ನು ಶಾಲೆಗೆ ಕಳಿಸಿದಳು ಮಗನಿಗೆ ಮ್ಯಾಟ್ರಿಕ್ ಪರೀಕ್ಷೆ ಮುಗಿಸಿ ಒಂದು ನೌಕರಿಯನ್ನು ದೊರಕಿಸಿಕೊಡುವಂತವಳಾದಳು. ಹೀಗೆ ಒಂದು ಕುಟುಂಬದ ಆರ್ಥಿಕ ಪರಿಸ್ಥಿತಿಯನ್ನು ನೋಡಿದಾಗ ಕಾಲದಿಂದ ಕಾಲಕ್ಕೆ ಯಾವ ರೀತಿ ಸ್ಥಿತ್ಯಂತರ ಪಡೆದುಕೊಂಡು, ನಂತರ ಕಿಟ್ಟಿಯ ಕೆಲಸದಿಂದಾಗಿ ಸುಧಾರಣೆ ಹಾದಿಯನ್ನು ಕಂಡುಕೊಂಡಿತು ಎನ್ನಬಹುದು. ಇಂತಹ ಆರ್ಥಿಕ ಪ್ರಸಂಗದಲ್ಲಿ ಮಹಿಳೆ ಎದೆಗುಂದದೇ ಎಲ್ಲವನ್ನು ಎದುರಿಸುವ ಧೈರ್ಯ ಎಲ್ಲ ಮಹಿಳೆಯರಲ್ಲಿ ಕಾಣಲು ಸಾಧ್ಯವಿಲ್ಲ ಗಂಗವ್ವ ಧೈರ್ಯದಿಂದ ತನ್ನಲ್ಲಿರುವ ಬಂಗಾರವನ್ನು ತಿಪ್ಪಿಯಲ್ಲಿ ಎಸೆಯುವುದು. ನಂತರ ದೇಸಾಯಿರ ಕೈಯಲ್ಲಿ ತನ್ನ ವ್ಯವಹಾರ ಸಂಬಂಧವನ್ನು ಬೆಳಸಿದ ಇವಳಿಗೆ ಅವರೇ ಆಧಾರವಾಗಿ ಈ ಕುಟುಂಬದ ಹಿತವನ್ನು ಕಾಪಾಡುತ್ತಾರೆ.

ಮಾತನ್ನೂ ಬಂಡವಾಳ ಮಾಡಿಕೊಂಡ ರಾಘುಪ್ಪನು ಸೌಮ್ಯ ಸ್ವಭಾವದ ಸ್ವಾಮಿರಾವ್‌ರನ್ನು ಬಳಸಿಕೊಂಡು ಸ್ಥಿತಿವಂತರಾದ ಸ್ವಾಮಿರಾವರ ಕುಟುಂಬ ಅದೋಗತಿಗೆ ರಾಘುಪ್ಪನು ಕಾರಣವಾಗುತ್ತಾನೆ. ಸ್ವಾಮಿರಾಯನ ಕಾಲಿಗೆ ಬಿದ್ದು ''ಹೆಂಗಾರs ಮಾಡಿ ನನ್ನ ತಮ್ಮನ್ನ ಉಳಿಸಿಗೊಳ್ರಿ'' ಒಮ್ಮೆ ಮನೆತನದಂವ ತುರಂಗ ಸೆರಿದ್ದು ನಾಕು ಮಂದಿಗೆ ಗೊತ್ತಾತು ಅಂದರ ನನಗ ಈ ಉಟ್ಟೋ ಎರಡು ದುಡ್ಡು ಹುಟ್ಟಲಿಕ್ಕಿಲ್ಲ.''[೭] ಎಂಬ ಇತನ ನಾಟಕೀಯ ಮಾತಿಗೆ ಮರುಳಾದ ಸ್ವಾಮಿರಾವ್ ಐದು ಸಾವಿರಕ್ಕಾ ಜಾಮೀನ ಆಗಿ ವೆಂಕಟಿಯನ್ನ ಬಿಡಿಸಿಕೊಳ್ಳಲು ಮುಂದಾಗುತ್ತರೆ. ಆಗಿನ ಕಾಲದಲ್ಲಿ ಜೈಲಿಗೆ ಹೋಗಿ ಬಂದ ವ್ಯಕ್ತಿ ಮತ್ತು ಅವನ ಕುಟುಂಬವನ್ನು ಸಮಾಜ ನೋಡುವ ದೃಷ್ಟಿಕೋನದ ಬಗ್ಗೆ ವಿಚಾರ ಮಾಡಿದ ರಾಘುಪ್ಪ, ತನಗೂ ಊರಿನಲ್ಲಿ ಕೆಲಸ ಮತ್ತು ಗೌರವಕ್ಕೆ ದಕ್ಕೆ ಬರುವುದು ಎಂಬ ಕಾರಣಕ್ಕಾಗಿ ವೆಂಕಟಿಯನ್ನು ಬಿಡಿಸಿಕೊಂಡು ಬರುವಲ್ಲಿ ಮುಂದಾಗುತ್ತಾನೆ. ಈ ಒಂದು ಪ್ರಸಂಗ ಸಮಾಜದಲ್ಲಿ ತುರಂಗಿಗೆ ಹೋಗಿ ಬಂದ ವ್ಯಕ್ತಿಯ ಮೇಲೆ ಬೀರುವ ಪ್ರಭಾವ, ಮತ್ತು ಆ ಕುಟುಂಬದ ಪ್ರತಿಯೊಬ್ಬ ಸದಸ್ಯರನ್ನು ನೋಡವರೀತಿ. ಅವರಿಗೆ ಸಿಗುವ ಉದ್ಯೋಗ, ಸಮಾಜದಲ್ಲಿ ಸಿಗುವ ಗೌರವ, ಇವೆಲ್ಲವುಗಳಿಂದ ಆ ವ್ಯಕ್ತಿ ಮತ್ತು ಕುಟುಂಬ ದೂರ ಉಳಿಯಬೇಕಾಗುವುದು. ಎಂಬ ರಾಘುಪ್ಪನಲ್ಲಿದ್ದ ಒಂದು ಬದಲಾದ ವೈಚಾರಿಕ ಮನೋಭಾವವನ್ನು ಕಂಡುಕೊಳ್ಳಬಹುದಾಗಿದೆ. ತುರಂಗಿ ಎನ್ನುವುದು ಸಮಾಜದಲ್ಲಿ ತಪ್ಪುಮಾಡಿದವರಿಗೆ ವಿಧಿಸುವ ಶಿಕ್ಷೆ ಹೀಗೆ ಸೃಷ್ಟಿಯಾದ ಹೊಸ ಹೊಸ ಕಟ್ಟಲೆಗಳಿಗೆ ಮನುಷ್ಯನ ಪೂರ್ವಭಾವಿಯಾಗಿ ತನ್ನ ಮನೋವಿಚಾರವಾಗಿ ಕೈಗೊಳ್ಳುವ ನಿರ್ಧಾರಗಳು ಕೂಡ ಬದಲಾಗುತ್ತವೆ. ಅಂತಹ ವೈಚಾರಿಕ ಮನೋಭಾವವನ್ನು ಕೂಡ

ಹೊಂದಿರುವರು. ಹೀಗೆ ಆ ಕಾಲದ ಪರಿಸರ ಸ್ಥಿತ್ಯಂತರಕ್ಕೆ ದೇಸಾಯಿ ಮತ್ತು ಗಂಗವ್ವ ಕುಟುಂಬಗಳು ಕುರುಹುವಾಗಿ ಕಾಣಸಿಗುತ್ತವೆ.

ಅದೇ ರೀತಿಯಾಗಿ ರಾಘುಪ್ಪನ ಸ್ಥಿತಿಯು ಚಿಂತಾಜನಕವಾಗಿದ್ದಾಗ, ರಾಘುಪ್ಪನು ತನ್ನ ಮಾತಿನ ಬಂಡವಾಳದ ಮೂಲಕ ಎಲ್ಲ ಜನರನ್ನು ಮರಳು ಮಾಡುವ ಕಲೆಯು ಆತನ ಎಲ್ಲ ಚಿಂತಾಜನಕ ಪರಿಸ್ಥಿತಿಗಳು ಮಾಯವಾಗಿ ಒಳ್ಳೆಯ ಸ್ಥಿತಿವಂತನಾದನು. ಗ್ರಾಮದ ಮುಂದಾಳಾಗಿ ಒಕ್ಕಲುತನ ಕೆಲಸ ಕೋಳಿಸಾಕುವ, ಜೇನು ಸಾಕುವ, ಕೋರ್ಟ್ ಕಛೇರಿ ವ್ಯವಹಾರ ಇಷ್ಟಲ್ಲದೆ ಮಾತಿನ ಬಂಡವಾಳದ ಜೀವನ ಕ್ರಮ, ಎಲ್ಲ ಹೊಲವನ್ನು ಬಿಡಿಸಿಕೊಂಡು ಉತ್ತಮ ಸ್ಥಿತಿವಂತನಾಗದೊಡಗಿದ. ಮುಂದೆ ಧಾರವಾಡಕ್ಕೆ ಬಂದ ನಂತರ ರಾಘುಪ್ಪ ವೃತ್ತಿಯಲ್ಲಿ ಬದಲಾವಣೆ ಅಲ್ಲದೇ ಗಣ್ಯ ವ್ಯಕ್ತಿಗಳ ಸ್ನೇಹವನ್ನು ಕೂಡ ಸಂಪಾದಿಸಿದನು. ಬಿಂದುಗೊಳಗ್ರಾಮದಲ್ಲಿದ್ದ ಇತನ ವೃತ್ತಿ ವ್ಯವಹಾರಗಳು ಧಾರವಾಡಕ್ಕೆ ಬಂದನಂತರ ಬದಲಾಗುವುದರ ಜೊತೆಗೆ ಇನ್ನಷ್ಟು ಆರ್ಥಿಕ ಸ್ಥಿತಿಯು ಸುಧಾರಿಸುವಂತೆಯಾಯಿತು. ಈ ಕುಟುಂಬದ ಆರ್ಥಿಕ ಭವಣೆಯನ್ನು ನೀಗಿಸಲು ಅವನು ಮೋಸ ವಂಚನೆ, ಕಳುವು, ಸುಳ್ಳನ್ನು ಸರಾಗವಾಗಿ ಬಳಕೆಮಾಡಿಕೊಳ್ಳುತ್ತಿದ್ದನು. ವೆಂಕಟಿಯಲ್ಲಿರುವ ಹಣವನ್ನು ಮೋಸದಿಂದ ಲಪಟಾಯಿಸಿ ಹೆಂಡತಿಯ ಟ್ರಂಕಿನಲ್ಲಿರುವ ಬಂಗಾರ, ಹಣವನ್ನು ತಾನೇ ದೋಚಿ ನಾಟಕೀಯ ಮಾತುಗಳ ಮೂಲಕ, ಸುಳ್ಳಿನ ಕಂತೆಗಳ ಮೂಲಕ ತಾನು ಸಾಚಾವೆಂಬಂತೆ ಸಾಬೀತು ಮಾಡಿಕೊಡುವ ಕಲೆ ರಾಘುಪ್ಪನದಾಗಿತ್ತು. ಧಾರವಾಡಕ್ಕೆ ಬಂದ ನಂತರ ನಾಟಕ ಕಂಪನಿಗಳ ಸಂಘದಿಂದಾಗಿ ನಾನಾ ರೀತಿಯ ವ್ಯವಹಾರಕ್ಕೆ ಇಳಿಯುವಂತೆಮಾಡಿತು. ಬಿಂದುಗೋಳದಿಂದ ಧಾರವಾಡಕ್ಕೆ ಮಕ್ಕಳ ಶಿಕ್ಷಣದ ಸಲುವಾಗಿ ಬಂದರೂ ಮಕ್ಕಳ ಶಿಕ್ಷಣದಲ್ಲಿಯೂ ಪ್ರಗತಿಯಾಗುವುದರ ಜೊತೆಗೆ ಅವನು ಕೂಡ ಧಾರವಾಡ ಪರಿಸರ ಒಗ್ಗಿಕೊಂಡನು. ಗ್ರಾಮೀಣಕ್ಕಿಂತ ಶಹರ ಜೀವನದ ಸೂಕ್ಷ್ಮ ಪಲ್ಲಟವಾಗಿದ್ದು ಇಲ್ಲಿ ಕಂಡುಕೊಳ್ಳುಬಹುದು.

ಒಬ್ಬ ವ್ಯಕ್ತಿಯು ಬದಲಾಗಬೇಕಾದರೆ ಜೀವನದಲ್ಲಿ ಅವನು ಕಂಡುಂಡ ದುರಂತಗಳು ಅವನ ಮೇಲೆ ಪ್ರಭಾವ ಬೀರಿ ಇಡಿಯಾಗಿ ವ್ಯಕ್ತಿತ್ವದ ವೈಚಾರಿಕ ಮನೋಭಾವವನ್ನು ವರೆಗೆ ಹಚ್ಚಿನೋಡುವುದು. ಅಂತರ ಮುಖಿಯಾಗುವುದು ತಾನು ಮಾಡಿದ ಕಾರ್ಯಗಳು ಸರಿಯೇ ತಪ್ಪೇ ವಿಚಾರಗಳ ಸಂಘರ್ಷಕ್ಕೆ ಮನಸ್ಸನ್ನು ಕೊಡುತ್ತಾನೆ. ಅದೇ ರೀತಿಯಾಗಿ ರಾಘುಪ್ಪನು ಬರಾರಿತನ ಹಮ್ಮು ಈರ್ಷೆಗಳ ಬಾಹ್ಯ ಪ್ರಚೋದನೆಗಳಲ್ಲಿಯೇ ದುರ್ಮತೆಯನ್ನು ಮೆರೆದ ರಾಘುಪ್ಪ ಕೇವಲ ಬಹಿರ್ಮುಖ ವ್ಯವಹಾರಮುಖ ಮಾತ್ರನಾಗಿಯೇ ಇದ್ದುಕೊಂಡ ರಾಘುಪ್ಪನಿಗೆ, ಚಂಪಕ್ಕನ ಮರಳು ಆತನನ್ನು ಅಂತರ್ಮುಖಿಯನ್ನಾಗಿ ಮಾಡಲು ಹಚ್ಚುತ್ತದೆ. ತನ್ನ ಬದುಕಿನ ಹೆಜ್ಜೆಗಳು ಸಮತೋಲ ತಪ್ಪುತ್ತಿರುವ ಸೂಚನೆಗಳ ಸ್ವಂತದ ಪರಮರ್ಶೆಗೆ ಇಳಿಯುತ್ತಾನೆ. ಈ ಅಂತರ್ಮುಖದ ವೀಕ್ಷಣೆಯಲ್ಲಿ, ತೀರಾ ವಿರೂಪವಾಗಿ ಹೋದ ಜರ್ಜರಿತವಾದ ತನ್ನನ್ನೇ ಆತ ಕಾಣುತ್ತಾನೆ. ಇಂತಹ ವೀಕ್ಷಣೆಗಳಿಂದ ಯಾವುದೇ ಅಹಂಕಾರಿಗೆ ಆಗಬಹುದಾದ ಅಘಾತ ರಾಘುಪ್ಪನಿಗೂ ಆಗುತ್ತದೆ.

ಈ ಬಗೆಯ ಆತ್ಮವಿಮರ್ಶಕ ಕ್ಷಣಗಳಲ್ಲಿ ನೈತಿಕ ಅಧಃಪತನದ ಪೆಟ್ಟು ಹೆಚ್ಚು ತೀವ್ರವಾಗಿ ತಗುಲುವುದು. ಅನಿವಾರ್ಯವಾಗಿ ರಾಘುಪ್ಪ ಆತ್ಮಹತ್ಯೆಮಾಡಿಕೊಳ್ಳುತ್ತಾನೆ.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ತಾನು ತುಂಬಾ ಗಾಡವಾಗಿ ಪ್ರೀತಿಸಿದ್ದ ಮೆಹಬೂಬಳ ಮರಣಕ್ಕಿಂತ ಚಂಪಕ್ಕನ ಮರಣವೇ ರಾಘುಪ್ಪನನ್ನು ತುಂಬಾ ತೀವ್ರವಾಗಿ ಅಲ್ಲಾಡಿಸಿತು. ಇದಕ್ಕೆ ಕಾರಣ, ಚಂಪಕ್ಕನ ಮರಣದ ರೀತಿ ಮತ್ತು ಸತ್ತ ಕೂಸೊಂದನ್ನು ಹಡೆದು ಈಕೆ ಸತ್ತಾಗಲೇ ರಾಘುಪ್ಪನಿಗೆ ಮಾಡಿದಾದರೂ ಏನು ಎನ್ನುವುದು ಸ್ಪಷ್ಟವಾಗಿ ಅರಿವಿಗೆ ಬಂದಿತು. ''ಒಂದು ನೀಚವಾದ ಸ್ವಾರ್ಥಿ ಲಾಲಸೆಯಿಂದ ಪ್ರೇರಿತನಾಗಿ ಒಬ್ಬ ರೋಗಿಷ್ಟ ಹೆಂಡತಿಯನ್ನು ಹೆಚ್ಚು ಕಡಿಮೆ ಕೊಲೆಗೈದೆ ಎಂಬ ಬಾವ ಅಸ್ಪಷ್ಟವಾಗಿ ಮೂಡಿದೆ. ಅನೀತಿ ತನ್ನ ಪರಾಕಾಷ್ಠೆಯನ್ನು ತಲುಪಿದಾಗ ವ್ಯಕ್ತಿತ್ವದ ಮಹತ್ವದ ಅಂಗಗಳನ್ನು ಊನಗೊಳಿಸುವುದಷ್ಟೇ ಅಲ್ಲ. ಅದಕ್ಕೂ ಭಯಂಕರವಾಗಿ ಮುಕ್ತಾಯವೇ ಇಲ್ಲದ ಪಶ್ಚಾತಾಪವನ್ನು ಅದು ತಂದೊಡ್ಡುತ್ತದೆ. ಒಮ್ಮೆ ಧೀಂ ಎಂದು ಮೆರೆದ ರಾಘುಪ್ಪನಂಥವನಿಗೆ ಇದು ತಡೆಯಲಾಗದ ಕೊನೆಯ ಏಟಾಗಲು ಸಾಕೇ ಸಾಕು.''[೫]

ದೇಸಾಯಿರೊಂದಿಗೆ ನಡೆಸಿದ ಯುದ್ಧ ಸಂದರ್ಭಗಳು, ರಾಘುಪ್ಪ ಎದುರಿಸುತ್ತಿದ್ದ ದೇಸಾಯಿರ ಬೆನ್ನ ಹಿಂದಿನ ನೈತಿಕ ನಿಲುವು ಎಷ್ಟು ಗಟ್ಟಿಯಾಗಿದ್ದಿತ್ತು ಎನ್ನುವುದು ಮುಖ್ಯವಾಗುತ್ತದೆ. ಸ್ವಾರ್ಥರಹಿತವಾಗಿ ಕೇವಲ ತಮ್ಮನ್ನು ನಂಬಿದವರ ಕಲ್ಯಾಣವಾಗುತ್ತದೆ ಎಂಬ ಧ್ಯೇಯ ಮಾತ್ರದಿಂದಲೇ ಅವರು ಹೊರಟಿದ್ದರಿಂದ ಕ್ರಮೇಣ ರಾಘುಪ್ಪನ ಅಸ್ತ್ರಗಳು ಆತನಿಗೆ ಪ್ರತ್ಯಸ್ತ್ರಗಳಾಗತೊಡಗುತ್ತವೆ. ದೇಸಾಯಿರಿಗೆ ಬುದ್ಧಿ ಕಲಿಸುವುದಕ್ಕಾಗಿ ಅವರಿಗೆ 'ಛೂ' ಬಿಡಲು ಯಾವ ವಸಂತರಾಯನನ್ನು ಬುಟ್ಟಿಗೆ ಹಾಕಿಕೊಳ್ಳಬೇಕೆಂದು ಆತ ಯೋಚಿಸಿದ್ದನೋ ಅದೇ ವಸಂತರಾಯ ಆತನ ಮಗಳನ್ನ ಕದ್ದು ಬಿಡುವುದು ರಾಘುಪ್ಪನ ದುರಂತವೇ ಸೈ. ಹೀಗೆ ದೇಸಾಯಿರೊಂದಿಗೆ ನಡಿಸಿದ ಯುದ್ಧದ ಪರಿಣಾಮವು ಪ್ರಬಲ ಪ್ರೇರಣೆಯಿಂದಾಗಿ ರಾಘುಪ್ಪನ ಅಂತರ್ಮುಖಿ ಹೊರಳುವಿಕೆ ಯಾಗಿದ್ದು ಸೂಕ್ಷ್ಮವಾಗಿ ಗಮನಿಸಬಹುದು. ಇಡಿ ಒಂದು ಕಥೆಯ ಕಳನಾಯಕನ ಮನ ಪರಿವರ್ತನೆಯಾದದ್ದು ದೇಸಾಯಿಗೆ ಬರೆದ ಪತ್ರದಿಂದ ಕಂಡುಕೊಳ್ಳಲಾಗಿದೆ.

''ಹಳ್ಳಿಯ ನಾಟಕ ಅಂದರ ಮಾರಮಾಡಿ ಮಂದಿರುಮಾಲ ಇದ್ದಹಂಗ, ಅದನ್ನು ಹೆಂಗ ಸುತ್ತಿದರೂ ನಡೀತದ. ನಾಟಕ ಅಂದರ ಶಹರದ ಊರ ನಾಟಕನ ನಾಟಕ. ಒಂದು ಬಿಲ್ಲಿ ಚೆಲ್ಲೂ ಅಲ್ಲೆ ಎರಡು ಬಿಲ್ಲಿ ಚೆಲ್ಲಿದರ ನಾಟಕದ ಶೋಭಾನ ಬದಲು ಆಗತದ. ಅನುಭವಿತ ಹೆಣ್ಣು ಪಾರ್ಟಿ, ಉತ್ತಮ ಸಂಗೀತದವರು ಇದ್ದರೇ ಎಂಟು ಎಂಟು ಆಣಿ ತಿಕೀಟು ಇಟ್ಟರು ಮಂದಿ ಓಡಿ ಬರತಾರ. ನಾಟಕ ಅಂದರ ರಂಗಿ ಕೆಲಸ ಬಗಿಸಿಲೆ ದುಡ್ಡುಹಾಕಬೇಕು, ಸಲಿಕೀಲೆ ಎಳೆಬೇಕು.''[೬] ಅಂದರ ನಾಟಕ ಹಳ್ಳಿಗಿಂತ ಶಹರದಲ್ಲಿ ವಿಶಿಷ್ಟತೆಯನ್ನು ಪಡೆದುದ್ದಲ್ಲದೇ ಮೊದಮೊದಲು ನಾಟಕ ಸೌಮ್ಯ ಸ್ವರೂಪದ್ದಾಗಿದ್ದು, ನಂತರ ಶಹರದಲ್ಲಿ

ಶೇಷಶಾಯಿ ನಾಟಕ ಕಂಪನಿಗಳಾಗಿ ಉತ್ತಮ ಸ್ಥಿತಿಯಲ್ಲಿ ಹಣಗಳಿಕೆಯಲ್ಲಿ ಮುಂದಾಗಿ ವೈಭವದಿಂದ ಮರೆಯತೊಡಗಿದವು. ಹಾಗೆಯೇ ಧಾರವಾಡ ಜನಕ್ಕೆ ಮನರಂಜನೆಯನ್ನು ಪೌರಾಣಿಕ ಕಥಾವಸ್ತುಗಳನ್ನೆ ಬಳಸಿಕೊಂಡು ಕೊಡಲಾಯಿತು. ನಾಟಕ ಕಂಪನಿಗಳು ಉಚ್ರಾಯ ಸ್ಥಿತಿಯಲ್ಲಿ ಬೆಳೆದು ಬಂದವು. ಬಹುತೇಕ ನಾಟಕಗಳ ಹೆಣ್ಣಿನ ಪಾತ್ರವನ್ನು ಗಂಡಸರೇ ಮಾಡುತ್ತಿದ್ದರು. ಆಗಿನ ಕಾಲದಲ್ಲಿ ಹೆಣ್ಣು ಮಕ್ಕಳು ನಾಟಕ ಕಂಪನಿಯಲ್ಲಿ ಸೇರಿಕೊಳ್ಳುವುದು ಅವಳ ನಡತೆ ಗೌರವಕ್ಕೆ ಕುಂದುಬರುತ್ತಿತ್ತು. ಸಮಾಜದಲ್ಲಿ ಹೆಣ್ಣು ಹೊರಹೋಗಿ ನಾಟಕ ಪಾತ್ರಗಳನ್ನು ಮಾಡುವುದು ಇರಲಿಲ್ಲ. ಕ್ರಮೇಣ ಉತ್ತಮ ಸಂಗೀತ ಹಾಡನ್ನು ಕಲಿತ ನಾರಿ ನಾಟಕವನ್ನು ಪ್ರವೇಶಿಸುವಂತಾಗಿ ಉತ್ತಮ ಕಲಾವಿದೆಯಾಗಿ ಹೆಣ್ಣುಪಾತ್ರ ಮಿಂಚತೊಡಗಿದ್ದವು. ಆದರಿಂದಾಗಿ ನಾಟಕ ಸ್ವರೂಪ ಬದಲಾಗುವುದರ ಜೊತೆಗೆ ಅವರ ನಾಟಕ ಕಂಪನಿಗಳು ಹೆಚ್ಚಿನ ಹಣವನ್ನು ಗಳಿಸುವಲ್ಲಿ ಮುಂದಾದವು. ಹೆಚ್ಚಿನ ಸಂಖ್ಯೆಯಲ್ಲಿ ನಾಟಕವನ್ನು ನೋಡಲು ಮುಂದಾದರು. ಅದರಲ್ಲಿ ವಿಶೇಷವಾಗಿ ಹೆಣ್ಣಿನ ಪಾತ್ರಗಳಿಂದ ಜನರನ್ನು ಇನ್ನಷ್ಟು ಆಕರ್ಷಿಸಿತುವೆಂಬುದು ಮೆಹಬೂಬಳ ನಾಟಕ ಕಂಪನಿಯಲ್ಲಿ ನಡೆಸಿದ ಜೀವನದಿಂದ ಕಂಡುಕೊಳ್ಳಬಹುದು. ಹೀಗೆ ನಾಟಕ ಕಂಪನಿಗಳು ಬಂಡವಾಳ ಹಾಕಿ ಲಾಭವನ್ನು ಗಳಿಸುವ ಕೇಂದ್ರವಾಗಿ ಹೊರಹೊಮ್ಮಿ ಅನೇಕ ನಾಟಕಕಾರರ ಜೀವನಕ್ಕೆ ಈ ನಾಟಕ ಕಂಪನಿಗಳೇ ಆಧಾರವಾಗಿ, ವೈಭವ ರೀತಿಯಲ್ಲಿ ಬೆಳೆದುಬಂದವು. ಸಾಂಸ್ಕೃತಿಕ ಕೊಡುಗೆಯಾಗಿ ಹೊರಹೊಮ್ಮಿದವು.

ಮನುಷ್ಯ ಜೀವನದಲ್ಲಿ ಧಾರ್ಮಿಕ ನಂಬಿಕೆ ಸಂಪ್ರದಾಯಗಳು ಪ್ರಮುಖ ಪಾತ್ರವಹಿಸುತ್ತವೆ. ತಲೆತಲಾಂತರದಿಂದ ಮಾಡಿಕೊಂಡು ಬಂದಿರತಕ್ಕಂತ ನೀತಿ ನಿಯಮಗಳ ಆಚರಣೆಗಳನ್ನು ಮುಂದುವರೆಸಿಕೊಂಡು ಹೋಗುವುದು ಸಹಜವಾದುದು ಅಂತಹ ಧಾರ್ಮಿಕ ಸಂಪ್ರದಾಯವನ್ನು ಮುರಿಯುವ ಧೈರ್ಯಮಾಡುವವಳ ಈ ಕಥೆಯಲ್ಲಿನ ಗಂಗವ್ವ, ಒಂದು ಬ್ರಾಹ್ಮಣ ಸಮುದಾಯ ನೀತಿ ನಿಯಮ ಸಂಪ್ರದಾಯವನ್ನು ಪಾಲಿಸಿಕೊಂಡು ಬಂದಿರುವ ಕಟ್ಟಾ ಸಂಪ್ರದಾಯಸ್ಥ ಕುಟುಂಬದವಳು. ಜೀವನದಲ್ಲಿ ಕಾಶಿಯಾತ್ರೆಯನ್ನು ಮಾಡಿದರೆ ಸ್ವರ್ಗಕ್ಕೆ ಹೋಗುವರು ಎನ್ನುವುದನ್ನು ತಿಳಿದ ಗಂಗವ್ವ ಕಾಶಿದರ್ಶನ ಮಾಡಿ ಬರುವಾಗ ಅಲ್ಲಿ ಗಂಗೋದಕವನ್ನು ತೆಗೆದುಕೊಳ್ಳುತ್ತಾಳೆ. ಆ ಗಂಗೋಧಕವನ್ನು ತನ್ನ ಭಾಯಲ್ಲಿ ಕಿಟ್ಟಿಹಾಕಿದರೆ ತನಗೆ ಸದ್ಗತಿ ಎಂದು ಬಲವಾಗಿದ್ದ ನಂಬಿಕೆ ಬಲವಂತವಾಗಿ ಮುರಿಯುತ್ತಾಳೆ. ಆ ಗಂಗೋಧಕ ದಾರಿಯಲ್ಲಿ ಚೆಲ್ಲಿ ಬಿಡುತ್ತಾಳೆ ಏಕೆಂದರೆ ತಾನು ಬದುಕಬೇಕು. ಇನ್ನೂ ಕಿಟ್ಟಿಯ ಸಂಸಾರವನ್ನು ಕಣ್ಣುತುಂಬಾ ನೋಡಬೇಕು. ಬದುಕುವ ಆಸೆ ಸಾವಿನ ಕರೆ ಇವುಗಳ ತಿಕ್ಕಾಟದಿಂದಾಗಿ ಆ ಗಂಗೋಧಕ ಇವಳಿಗೆ ಯಮಪಾಶದಂತೆ ಕಾಣುತ್ತದೆ. ಅದಕ್ಕಾಗಿ ಬಿಂದಿಗೆಯಲ್ಲಿರುವ ಗಂಗೋಧಕ ಚಲ್ಲಿಬಿಡುತ್ತಾಳೆ. ಜೈ ಗಂಗಾಮಾತೇ ಎನ್ನುವ ಮಾತು ಪಿಸುಗುಟ್ಟುತ್ತಾಳೆ. ಇದರಿಂದ ಅವಳ ಮನಸ್ಸು ಸಾವನ್ನೆ ಗೆದ್ದಂತಾಗುತ್ತದೆ. ಇಂತಹ ಸಂಪ್ರದಾಯವನ್ನು ಮುರಿಯುವ ಒಂದು ದಿಟ್ಟಮನೋಭಾವ ಮಹಿಳೆಯೂ ಹೊರಹೊಮ್ಮುತ್ತಾಳೆ. ಧಾರ್ಮಿಕ ಸಂಪ್ರದಾಯಗಳು

ಒಂದೇ ರೀತಿಯಾಗಿ ನಿಲ್ಲದೇ ಅದು ಕಾಲ, ಪರಿಸರದಿಂದ ತನ್ನ ಬದಲಾವಣೆಯನ್ನು ಕಂಡುಕೊಳ್ಳುತ್ತಾ ಸಾಗುತ್ತದೆ. ಒಬ್ಬ ಪ್ರಗತಿಪರ ಚಿಂತಕಗಳಾಗಿ ಕಾಣಿಸಿಕೊಳ್ಳುತ್ತಾಳೆ.

ಅದೇ ರೀತಿಯಾಗಿ ಸಾಲಿಗ್ರಾಮದ ಒಂದು ಪ್ರಸಂಗವು ಕಂಗಾಲಾಗಿದ್ದ ಕಿಟ್ಟಿಗೆ ಧೈರ್ಯವನ್ನು ತುಂಬಿ ಆ ಸಾಲಿಗ್ರಾಮದ ಬಗ್ಗೆ ಸವಿವರವನ್ನು ಅವನಿಗೆ ನೀಡುವಲ್ಲಿ ಮುಂದಾಗುತ್ತಾಳೆ. ''ಸಾಲಿಗ್ರಾಮ ನಮ್ಮ ಮನೆಯ ಮುಖ್ಯದೇವರು ನೀ ಸಣ್ಣವ ಇದ್ದಿ ಅವರ ಹೋದಾಗ ಅದರ ಪೂಜೆದಲ್ಲಿ ಹೆಚ್ಚು ಕಡಿಮೆಯಾದೀತು ಅಂತ ಒಳಗೆ ಇಡಿಸಿದ್ದೆ ಯಾ ದೇವರು ಸಿಟ್ಟಿಗೆ ಏಳೂದಿಲ್ಲ. ಭಕ್ತಿ ಒಂದು ಇದ್ದರ ಎಲ್ಲಾರ ದೇವರೂ ಶಾಂತ ಇರತಾರ ನೀ ಏನೂ ಹೆದರ ಬ್ಯಾಡ ಇನ್ನ ನೀ ದೊಡ್ಡವ ಆದಿ, ನನಗ ದಿವಸ ಪೂಜೆ ಕಾಣಿಸು ಎಂದು ಸಾಲಿಗ್ರಾಮ ತಾನಾಗೆ ತಿಳಿಸಿ ಹೋಗ್ಯನ. ಅದು ಹಿರೇರ ಪುಣ್ಯ ಅಂತ ತಿಳಕೋ, ನಿ ಸಣ್ಣವ, ಸಾಲಿಗ್ರಾಮನ ಮರತಿದ್ದೀ ನಾ ಹೆಂಗ ಮರಿಲ್ಯಪಾ? ಮನುಷ್ಯನಲ್ಲಿ ಭಕ್ತಿಯೊಂದ ಇದ್ದರ ಯಾವ ದೇವರು ಏನೂ ಮಾಡಲು ಸಾಧ್ಯವಿಲ್ಲ. ಎಲ್ಲ ದೇವರು ಒಳ್ಳಿಯದು ಮಾಡ್ತರ, ಎಲ್ಲ ದೆವರು ಶಾಂತವಾಗಿರುತ್ತಾರೆ.''[೨೦] ಎಂಬ ಮಾತುಗಳು ಗಂಗವ್ವ ಸಂಪ್ರದಾಯಸ್ಥ ಮಹಿಳೆಯಾದರೂ ಅವಳಲ್ಲಿ ಪ್ರಗತಿಪರವಾದ ವಿಚಾರಗಳು ಇದ್ದವು ಎಂಬುದು ಈ ಮೇಲಿನ ಪ್ರಸಂಗದಿಂದ ಕಂಡುಕೊಳ್ಳಬಹುದಾಗಿದೆ. ಕಟ್ಟಾ ಸಂಪ್ರದಾಯಸ್ಥ ಮಡಿ ಮೈಲಿಗೆಯನ್ನು ನೀತಿ ನಿಯಮ ಆಚರಣೆಯನ್ನು ಹೊಂದಿರುವ ಇವಳು ಮುಂದುವರೆದ ಚಿಂತನಗ್ರಹಿಕೆಗಳನ್ನೊಳಗೊಂಡವಳಾಗಿದ್ದಳು. ಈ ಒಂದು ಸಾಲಿಗ್ರಾಮ ಪ್ರಸಂಗದಿಂದ ದೇವರ ಕೃಪೆಯಿಂದಾಗಿ ಗೃಹಶಾಂತಿಯು ನೆಲಸಲಿ ತಾಯಿ ಯೋಗಕ್ಷೇಮ ತೆಗೆದುಕೊಳ್ಳುವ ಕಿಟ್ಟಿಯ ಸ್ವಭಾವ, ರತ್ನಳು ಗಂಗವ್ವನ ಬಗ್ಗೆ ಇದ್ದ ತಿರಸ್ಕಾರ ಬಿಟ್ಟು ತನ್ನ ಪಾಲಿನ ದೈವದ ಒಂದು ಅಂಗವೆಂದು ಸ್ವೀಕರಿಸಿದಳು. ಇಂತಹ ಒಂದು ವಾತಾವರಣ ಬೆಳೆಯುವಲ್ಲಿ ಗಂಗವ್ವನ ಪ್ರಗತಿಪರ ಚಿಂತನೆಗಳು ಕಾರಣವಾದವು. ಸಾಲಿಗ್ರಾಮ ನಿತ್ಯ ಭಕ್ತಿಯಿಂದ ಪೂಜಿಸತೊಡಗಿದ. ಕಿಟ್ಟಿಯು ಕಛೇರಿಗೆ ಹೊರಡುವ ಮುನ್ನ ಸಾಲಿಗ್ರಾಮವನ್ನ ನೆನೆದು ಯಾವ ತಪ್ಪು ಆಗದಿರಲಿ, ನನ್ನ ಬುದ್ಧಿ ಚೆನ್ನಾಗಿ ನಡೆಯಲಿ ಮುಂತಾಗಿ ಮನದಲ್ಲಿ ಪ್ರಾರ್ಥಿಸಿ ಹೊಸ್ತಲ ಹೊರಕ್ಕೆ ಹೋಗುತ್ತಿದ್ದನು. ಒಮ್ಮೊಮ್ಮೆ ಸಾಲಿಗ್ರಾಮದ ನಿರ್ಮಾಲ್ಯ ತುಳಿಸಿ ಪತ್ರವನ್ನು ತನ್ನ ಕಿಸೆಯಲ್ಲಿ ಇಟ್ಟುಕೊಂಡು ಹೋಗುತ್ತಿದ್ದ. ದೈವಿ ಪಾತಳಿಯ ಮೇಲೆ ಸಾಲಿಗ್ರಾಮ. ಮನೆತನದ ಪಾತಳಿಯ ಮೇಲೆ ತಾಯಿ, ಇವರು ವಿಭೂತಿಗಳಾಗಿದ್ದರು. ಒಟ್ಟಾರೆ ಸಾಲಿಗ್ರಾಮ ಪ್ರಸಂಗದಿಂದ ಗಂಗವ್ವನ ಉನ್ನತವಾದ ವಿಚಾರಗಳು ಕಿಟ್ಟಿಯನ್ನು ಒಂದು ಆತಂಕದಿಂದ ದೂರಮಾಡಿ ಒಬ್ಬ ಹೊಸ ಮನುಷ್ಯನಾಗಿ, ಜವಬ್ದಾರಿಯುತ ವ್ಯಕ್ತಿಯಾಗಿ ಹೊರಹೊಮ್ಮಿದ. ಆಧುನಿಕ ಸೋಗು ಹಾಕಿದ್ದ ಕಿಟ್ಟಿ ಮತ್ತೆ ಒಳ ಒಳಗೆ ಸಂಪ್ರದಾಯವನ್ನು ಒಪ್ಪಿಕೊಳ್ಳುವಂತೆ ಮಾಡಿ ತಾಯಿ ದೈವಿಸ್ವರೂಪಳಾಗಿ ಕಾಣಿಸಿಕೊಂಡು ಸಾಲಿಗ್ರಾಮ ಪ್ರಸಂಗವು ಒತ್ತಾಯ ಪೂರ್ವಕವಾಗಿ ಸಂಪ್ರದಾಯವನ್ನು ಎಳೆದುತರುತ್ತದೆ.

ಉನ್ನತ ಶಿಕ್ಷಣಕ್ಕಾಗಿ ದೇಸಾಯಿ ಅವರು ತಮ್ಮ ಮಗನಾದ ಅಚ್ಯುತನನ್ನು ಮುಂಬೈ ಕಳಿಸುತ್ತಾರೆ. ಶಿಕ್ಷಣಕ್ಕಾಗಿ ಮುಂಬೈಗೆ ತೆರಳಿದ ಅಚ್ಯುತ ಒಳ್ಳೆಯ ಸುಸಂಸ್ಕೃತ ಹುಡುಗ. ರಾಜಕೀಯ ಪ್ರಭಾವ ಪ್ರೇರಣೆಯಿಂದಾಗಿ ತನ್ನ ಕಾಲೇಜಿನಿಂದ ಜೈಲುವಾಸ ಅನುಭವಿಸುವಂತೆಯಾಯಿತು. ಏಕೆಂದರೆ ಇವನು ಉತ್ಸಾಹಿ. ಪಟ್ಟ ದೇಶಾಭಿಮಾನ ಉಳ್ಳ ಹುಡುಗ, ಕಾಲೇಜಿನಲ್ಲಿಯ ಎಲ್ಲರಿಗೂ ಚಳುವಳಿ, ಸತ್ಯಾಗ್ರಹ ಮುಂತಾದವುಗಳಿಗೆ ಪ್ರೋತ್ಸಾಹ ಬೆಂಬಲ ನೀಡುವದಕ್ಕಾಗಿ ಅಚ್ಯುತ ಮತ್ತು ಇಬ್ಬರು ಸ್ನೇಹಿತರು ಜೈಲು ಸೇರುವಂತಾಯಿತು. ಆದರೆ ಇಬ್ಬರು ಸ್ನೇಹಿತರು ಕ್ಷಮೆಯನ್ನು ಯಾಚಿಸಿ ಜೈಲಿನಿಂದ ಹೊರಗೆ ಬಂದು ಕಾಲೇಜಿಗೆ ಸೇರಿದರೆ, ಅಚ್ಯುತ ಮಾತ್ರ ಕ್ಷಮೆ ಬೇಡದ್ದಕ್ಕೆ ಒಂದು ತಿಂಗಳ ಜೈಲುವಾಸಮಾಡಿ, ನಂತರ ಕಾಲೇಜಿನಿಂದ ಹೊರಹಾಕಲ್ಪಟ್ಟ ಶಿಕ್ಷಣಕ್ಕಾಗಿ ಬಂದಂತಹ ಅಚ್ಯುತ ರಾಜಕೀಯ ರಂಗದಲ್ಲಿ ಆಸಕ್ತಿವಹಿಸಿ ಚಳುವಳಿ ಸತ್ಯಾಗ್ರಹ ಮುಂತಾದ ರಾಜಕೀಯ ಚಟುವಟಿಕೆಯಲ್ಲಿ ಉತ್ಸಾಹದಿಂದ ಪಾಲ್ಗೊಂಡ ಇವನು ತನ್ನ ವೇಶ ಭೂಷಣಗಳು ಬದಲಾಯಿಸಿದನು. ಅವನ ಮೀಸೆ ಗಾಂಧಿ ಟೊಪ್ಪಿಗೆ ಉತ್ಸುಕವಾದ ಮುಖದಿಂದ ಅವನ ವ್ಯಕ್ತಿತ್ವ, ಉಡುಪು ಸಂಪೂರ್ಣವಾಗಿ ಬದಲಾವಣೆಗೊಂಡದ್ದನ್ನು ನೋಡಬಹುದಾಗಿದೆ. ರಾಜಕೀಯ ಕ್ಷೇತ್ರದಲ್ಲಿ ಈತನ ಮನಸ್ಸು ತಿರುಗಿತು. ಶಿಕ್ಷಣವನ್ನು ಸ್ಥಗಿತಗೊಳಿಸಿದನು. ಉಪ್ಪಿನ ಸತ್ಯಗ್ರಹದಲ್ಲಿ ವಿದ್ಯಾರ್ಥಿಗಳು ಭಾಗವಹಿಸುವಂತೆ ಪ್ರಚಾರನಡೆಸಿದನು. ನೂರಾರು ವಿದ್ಯಾಥಿಗಳನ್ನು ಹುರಿದುಂಬಿಸಿ ಒಂದು ತಂಡವನ್ನು ರಚಿಸಿ ಸಮುದ್ರ ದಂಡೆಗುಂಟ ಹೋಗುವ ರಸ್ತೆಯ ಮೇಲೆ ಮೆರವಣಿಗೆಯಲ್ಲಿ ಹೋಗಿ ಉಪ್ಪಿನ ಲೂಟಿಮಾಡಿದರು. ಕೆಲವೊಬ್ಬರು ಕ್ಷಮೆ ಬೇಡಿ ಪಾರಾದರೆ, ಇನ್ನೂ ಕೆಲವರು ಸಂತೋಷದಿಂದ ಜೈಲುವಾಸವನ್ನೇ ಸ್ವೀಕರಿಸಿದರು. ದೇಶಾಭಿಮಾನದ ವಾತಾವರಣದಲ್ಲಿ ಇನ್ನೂ ಇದೇ ಮೈಚಳಿ ಬಿಟ್ಟ ಅಚ್ಯುತನಿಗೆ ಆ ವಿಷಯವೊಂದನ್ನು ಬಿಟ್ಟು ಬೇರೆ ಮಾತೇ ಹೊಳೆಯಲೊಲ್ಲವು. ಗಾಂಧೀಜಿಯವರ ಉಪ್ಪನ್ನ ಸತ್ಯಾಗ್ರಹದ ವಾರ್ತೆ, ಅವರ ದಾಂಡೀ ಕೂಚು, ಇವುಗಳಲ್ಲಿ ದಿನ ದಿನ ವೃತ್ತಗಳು ವರ್ತಮಾನ ಪತ್ರಗಳಲ್ಲಿ ಬರತೊಡಗಿ, ಇದೇ ದೇಶಾಭಿಮಾನದ ಗಾಳಿ, ಧಾರವಾಡಕ್ಕೂ ಬೀಸಿತು ಧಾರವಾಡದ ಕಾಲೇಜಿನ ವಿದ್ಯಾರ್ಥಿಗಳು ಕೂಡ ಚಳುವಳಿಯಲ್ಲಿ ಪಾಲ್ಗೊಳ್ಳುವಂತಾಯಿತು. ಒಟ್ಟಾರೆಯಾಗಿ ಅಚ್ಯುತ ಒಬ್ಬ ರಾಷ್ಟ್ರಾಭಿಮಾನ ಉಳ್ಳ ನಾಯಕನಾದನೆಂಬುದು ಅವನು ಧರಿಸಿದ ಗಾಂಧಿ ಟೊಪ್ಪಿಗೆ, ಅವನ ಮನಸ್ಸಿನ ತುಂಬಾ ಚಳುವಳಿಯ ಸತ್ಯಾಗ್ರಹವನ್ನೆ ತುಂಬಿದ ಉತ್ಸಾಹದ ಯುವಕ, ಕಾಲೇಜಿನ ಶಿಕ್ಷಣದಿಂದ ಏನೂ ಪ್ರಯೋಜನವಿಲ್ಲ ಎಂದು ಅಚ್ಯುತ ಮುಂಬೈಯಲ್ಲಿ ತನ್ನ ಎಲ್ಲ ಸಮಯವನ್ನು ಹೋರಾಟಕ್ಕಾಗಿ ಮೀಸಲಿಡುತ್ತಾನೆ. ಬಿಡುವಿನ ವೇಳೆಯಲ್ಲಿ ವರ್ತಮಾನ ಕೆಲಸಕ್ಕೆ ಕೈಹಾಕುತ್ತಾನೆ. ಇದು ಒಂದು ರೀತಿಯ ಸ್ಥಿತ್ಯಂತರವೆನ್ನಬಹುದಾಗಿದೆ. ಅದೇ ತಾನೇ ಹದಿಹರೆಯದ ವಯಸ್ಸಿನ ಹುಡುಗ ಶಿಕ್ಷಣ ಕಲಿಯಬೇಕಾಗಿದ್ದನು. ರಾಷ್ಟ್ರೀಯ ಜವಾಬ್ದಾರಿಯನ್ನರಿತ ಯುವಕನಾಗಿ ಪರಿವರ್ತಿತನಾಗುತ್ತಾನೆ.

ಭಾರತೀಯ ನಾರಿಯರು ಪತಿಯನ್ನು ದೈವಾಂಶ ಸಂಭೂತವೆಂದು ತಿಳಿದವರು. ಅವನಲ್ಲಿ ಅತಿಯಾದ ನಂಬಿಕೆ ಗೌರವವನ್ನು ಇಟ್ಟುಕೊಂಡಿರುತ್ತಾರೆ. ಆ ನಂಬಿಕೆಯು ಕಳೆದುಕೊಂಡ ಪತಿಯೆಂದರೆ ಅವಳು ಸಹಿಸುವುದಿಲ್ಲ. ಆದರೆ ಈ ಕಥೆಯಲ್ಲಿ ತನ್ನ ಗಂಡ ಪರಸ್ತ್ರೀಯೊಂದಿಗೆ ಲೈಂಗಿಕ ಸಖ್ಯ ಬೆಳೆಸಿಕೊಂಡಿದ್ದರೂ, ಸಹ ಟೀಕಿಸದ ಚಂಪಕ್ಕ.

''ಬಿರುಕು ಬಿದ್ದ ಮನೆ ನೋಡುವಾಗ ಯಾವ ನೋವು ಆಗುತ್ತದೆಯೋ ಅಂಥದ್ದೇ ನೋವು, ಅದರ ಸಹಸ್ರಪಟ್ಟು ಪ್ರಮಾಣದಲ್ಲಿ ಒಬ್ಬ ಗಂಭೀರ ಮನುಷ್ಯ ಹಾಳಾಗುವುದನ್ನು ನೋಡಿದಾಗ ಉಂಟಾಗುತ್ತದೆ.''

ಇದಕ್ಕಾಗಿ ಅತ್ತಿತ್ತ ಕೀಳು ಕಸಬೆಯಲ್ಲಿ ಅಡ್ಡಾಡಿ ಎಲ್ಲ ಆರೋಗ್ಯ ಕೆಡಿಸಿಕೊಳ್ಳುತ್ತಾನೋ ಎಂಬ ಭೀತಿ ಸುರುವಾಯಿತು. ಕೊನೆಗೆ ಒಂದು ದಿನ ಚಂಪಕ್ಕ ತಾನೆ ಮೆಹಬೂಬಜಾನಳ ಮನೆಗೆ ಬಂದು ರಾಘಪ್ಪನ ಪಾಲನೆಯನ್ನು ಅವಳಿಗೆ ಒಪ್ಪಿಸಿದಳು ಅಂದಿನಿಂದ ಮೆಹಬೂಬ.

''ಅಕ್ಕ ಅವರ ಮನೆಯ ಗೃಹದೇವತೆಯಾದಳು.''[೧೧]

ಇಂತಹ ಸನ್ನಿವೇಶಗಳು ನೈಜತೆಗೆ ದೂರವೆನಿಸಿದರೂ ಕೃತಕವೆನಿಸಲಾರವು. ಚಂಪಕ ತನ್ನ ಗಂಡನ ಆರೋಗ್ಯದ ದೃಷ್ಟಿಯಿಂದ ಸ್ತ್ರೀಯಲ್ಲಿರಬೇಕಾದ ಸಹಜಸ್ವಭಾವವು ಮಾಯವಾಗಿ ಮೆಹಬೂಬಳನ್ನು ಆಧರಿಸುತ್ತಾಳೆ. ತಂಗಿಯಾಗಿ ಸ್ವೀಕರಿಸುತ್ತಾಳೆ. ಮೆಹಬೂಬಳು ಕೂಡ ಅಷ್ಟೆ ಪ್ರಾಮಾಣಿಕಳು ತನ್ನ ಜೀವನವನ್ನೆ ಒತ್ತೆಯಿಟ್ಟು ಹಣತಂದು ನಿಂತು ಹೋದ ರತ್ನಳ ಮದುವೆಯನ್ನು ಮಾಡಿಸುತ್ತಾಳೆ. ಈ ಹಣ ತೀರಿಸಲು ದುಡಿತದ ದಣಿತದಲ್ಲಿಯೇ ಕಾಯಿಲೆ ಬಿದ್ದು ಸಾಯುತ್ತಾಳೆ. ಒಂದು ಬ್ರಾಹ್ಮಣ ಕುಟುಂಬವು ಮಡಿ-ಮೈಲಿಗೆಯಿಂದ ಈಕೆಯನ್ನು ದೂರವಿಟ್ಟ ಅನೇಕ ರೀತಿಯ ಹಿಂಸೆಗಳನ್ನು ಕೊಡುತ್ತದೆ. ಆದರೆ ಅವಳಿಂದಲೇ ಮದುಮಗಳ ಅಲಂಕಾರ ಮತ್ತು ಮದುವೆಮಂಟಪ ಅಲಂಕಾರ, ನಿಂತು ಹೋದ ಮದುವೆ ನಡೆಯುವುದು ಅವಳ ಹಣದಿಂದಲೇ, ಈ ಕಥೆಯಲ್ಲಿ ಒಬ್ಬ ಆದರ್ಶನಾರಿಯಾಗಿ ಬದಲಾವಣೆಗೊಂಡಿರುವುದು ಇವಳ ವ್ಯಕ್ತಿತ್ವ ಮನೋವಿಕಾಸಕ್ಕೆ ರಾಘಪ್ಪನ, ಮೇಲೆ ಇಟ್ಟಿರುವ ಪ್ರೀತಿ ಮತ್ತು ವಿಶ್ವಾಸವೇ ಕಾರಣವಾಗಿವೆ.

ತರುಣ ಪೀಳಿಗೆಯ ಯುವಕರು ತಮ್ಮ ವೈಯಕ್ತಿಕ ನಿಲುವಗಳಿಗೆ ಅಂಟಿಕೊಂಡು, ತಮ್ಮ ಇಷ್ಟಾನುಸಾರ ವರ್ತಿಸಲು ಬಹುಪಾಲು ಯತ್ನಿಸುತ್ತಾರೆ. ಹೀಗಾಗಿ ತಂದೆ-ತಾಯಿ ಪಟ್ಟ ಕಷ್ಟ ಇಟ್ಟ ಹೆಜ್ಜೆಯನ್ನು ನೆಡೆದುಕೊಳ್ಳಲಾರರು.

''ಅವ್ವ ಹಳೆಯ ಪೀಳಿಗೆಯವಳು ತಾನು ಹೊಸ ಪೀಳಿಗೆಯವ, ಒಂದೊಂದು ಪೀಳಿಗೆಗೂ ಒಂದೊಂದು ಸಮಸ್ಯೆ ಮತ್ತು ಅವ್ವ ನಿನ್ನ ಉಪಕಾರ ದೊಡ್ಡದು ಆದರೆ ನನಗೂ ಒಂದು ವ್ಯಕ್ತಿತ್ವ ಇಲ್ಲ ಏನು ನನ್ನ ಆಶಾ ಆಕಾಂಕ್ಷಕ್ಕೆ ಬೆಲೆ ಇರಬಾರದೇನು?''

"ನಾ ಏನು ಈಗ ನಿನ್ನ ಕೈ ಗೊಂಬೆಯಲ್ಲ! ಈ ಹಳೆಯ ಹೆಂಗಸರಿಗೆ ಈ ತರುಣ ಪೀಳಿಗೆಯ ನಡತಿ ತಿಳಿಯುವುದಿಲ್ಲ." ಎಂಬಂತಹ ನಿಲುವುಗಳನ್ನು ಹೊಂದಿದ್ದವರು. ಹೆಚ್ಚಿನ ಹಣಗಳಿಸುವುದನ್ನು ಹೇಳಿದರೆ. ಇತರರು ಬೇಡಿಯಾರೆಂದು ಕಿಟ್ಟಿಯ ಯೋಜನೆ, ಹೀಗಾಗಿ ಕಛೇರಿಯಲ್ಲಿ ಬ್ರಷ್ಟಾಚಾರಕ್ಕಿಳಿದು ಲಂಚ ಸ್ವೀಕರಿಸುತ್ತಾನೆ. ಹಳೆ ಹೊಸ ಪೀಳಿಗೆಯ ಒಂದು ರೀತಿಯ ಸಂಘರ್ಷವೆಂಬುದು ಮೇಲನೋಟಕ್ಕೆ ಅನಿಸಿದರು. ಹೊಸ ಪೀಳಿಗೆ ಮೇಲೆ ಆದ ಆಧುನಿಕ ಪ್ರಭಾವವು ಯುಕರನ್ನು ಹೊಸ ಹೊಸ ದಾರಿಗೆ ಕೊಂಡೊಯ್ಯುತ್ತವೆ. ಲಂಚ, ಬ್ರಷ್ಟಾಚಾರವನ್ನು ಮೊದಲು ಕಿಟ್ಟಿಯು ನೌಕರಿ ಪಡೆದ ನಂತರವೇ ಈ ಒಂದು ದಾರಿಯ ಕಡೆಗೆ ಕೊಂಡೊಯ್ಯುತ್ತದೆ. ಆಗಿನ ಕಾಲದ ಕೃಷಿ ಪ್ರಧಾನವಾದ ಸಮಾಜ, ಆ ಸಮಾಜದಲ್ಲಿರುವ ಉದ್ಯೋಗಗಳು ಪ್ರಾಮಾಣಿಕತನದಿಂದ ದುಡಿದ ರೈತನಿಗೆ ಸಿಗುವ 'ಕೂಲಿ' ಅವನ ಜೀವನಕ್ಕೆ ಅಧಾರವಾಗಿತ್ತು. ವಸಾಹತುಶಾಹಿಯ ಪ್ರಭಾವ ನಮ್ಮ ದೇಶದ ಮೇಲೆ ಸಾಕಷ್ಟು ಆಗಿದೆ. ಅದು ಎಲ್ಲ ರಂಗವನ್ನು ಪ್ರವೇಶಿಸಿದೆ. ಉದ್ಯೋಗ ಸೃಷ್ಠಿಯು ಕೂಡ ಅದರ ಒಂದು ಕೊಡುಗೆ. ಇಂತಹ ಉದ್ಯೋಗ ಗಳಿಸಿದವರು. ಹೊಸ ನೌಕರಿಯನ್ನು ಪಡೆದುಕಳ್ಳುವುದರ ಜೊತೆಗೆ ಇಂತಹ ಲಂಚಸ್ವೀಕರಿಸಿ ಪ್ರಷ್ಟಾಚಾರಕ್ಕೆ ಇಳಿಯುವಂತೆಮಾಡಿತ್ತು. ಹೀಗೆ ಪ್ರಾಮಾಣಿಕತನದಿಂದ ದುಡಿಯುವ ಆಗಿನ ಕಾಲದ ಜನರು ಕ್ರಮೇಣ ಲಂಚ ತೆಗೆದುಕೊಂಡು ಬ್ರಷ್ಟಾಚಾರವನ್ನು ಸಮಾಜದಲ್ಲಿ ಸೃಷ್ಟಿಮಾಡಿದಂತಾಗಿದೆ. ಉತ್ತಮವಾದ ಸಮಾಜವನ್ನ ಒಂದು ಅನ್ಯಾಯ ಅನೀತಿ ಬ್ರಷ್ಟಾಚಾರಕ್ಕೆ ಎಡೆಮಾಡಿಕೊಟ್ಟಂತಾಗಿದೆ.

ಬಿಂದುಗೋಳದಿಂದ ಧಾರವಾಡಕ್ಕೆ ಶಿಕ್ಷಣಕ್ಕಾಗಿ ಆಗಮಿಸಿದ ರಾಘಪ್ಪನ ಕುಟುಂಬ, ಆತನ ಕುಟುಂಬದಲ್ಲಿ ಅನೇಕ ಬಗೆಯ ಸ್ಥಿತ್ಯಂತರವಾದದ್ದನ್ನು ಕಾಣುತ್ತೇವೆ. ಮಕ್ಕಳಿಗೆ ಶಿಕ್ಷಣ ಕೊಡಿಸಿದನು. ಕೊನೆಯ ಶಾಂತಳು ರತ್ನಳಿಗಿಂತ ಹೆಚ್ಚು ಕಲಿತವಳು. ಹೆಣ್ಣು ಕೇವಲ ನಾಲ್ಕು ಗೋಡೆಯ ಮದ್ಯ ಇರುತ್ತಿದ್ದವಳು. ಅವಳಿಗೆ ಶಿಕ್ಷಣ ಕೊಡುವ ಮುಲ್ಕಿ ಮತ್ತು ಮ್ಯಾಟ್ರಿಕ್ ಪರೀಕ್ಷೆಯವರೆಗೂ ಓದಿಸುತ್ತಿದ್ದರು. ಆದರೆ ಶಾಂತಳು ಎಲ್ಲರಂತೆ ಶಾಲೆಗೆ ಹೋಗುವುದರ ಜೊತೆಗೆ ಧೈರ್ಯವನ್ನು ಬೆಳಸಿಕೊಂಡಿದ್ದಳು. ಯಾವುದೇ ಸಾಂಸ್ಕೃತಿಕ ಚಟುವಟಿಕೆಯಲ್ಲಿ ಭಾಗವಹಿಸಲು ಹಿಂಜರಿಯುತ್ತಿದ್ದ ಕಾಲದಲ್ಲಿ ಶಾಂತಳು ಮುಂದುವರೆದು ಎಲ್ಲ ಕಾರ್ಯಕ್ರಮಗಳಿಗೆ ಭಾಗವಹಿಸುತ್ತಿದ್ದಳು. ಅದರಲ್ಲಿ ಸ್ವಾತಂತ್ರ ಹೋರಾಟದಲ್ಲಿ ಸ್ತ್ರೀಯರು ಎಂದಿಗೂ ಪಾಲ್ಗೊಳ್ಳುತ್ತಿರಲಿಲ್ಲ. ಕೇಲವು ವಿದ್ಯಾರ್ಥಿನಿಯರು ಹದಿನಾರು ವರ್ಷ ಮೀರಿದವರಾಗಿದ್ದ ಮೂಲಕ ಅವರು ನಾಚಿಕೆಯಿಂದ ಮೆರವಣಿಗೆ ಮುಂತಾದ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಇಚ್ಛೆಪಡುತ್ತಿರಲಿಲ್ಲ, ಇನ್ನುಳಿದವರು ಹಳೆಕಾಲದ ವಾತಾವರಣದಲ್ಲಿ ಬೆಳೆದವರು. ತಂದೆ-ತಾಯಿಗಳು ಶಾಲೆ ಬಿಡಿಸುತ್ತಾರೆ ಎಂಬ ಕಾರಣಕ್ಕಾಗಿ ಭಾಗವಹಿಸುತ್ತಿರಲಿಲ್ಲ. ಆದರೆ ಶಾಂತಳಿಗೆ ಮನೆಯಲ್ಲಿ ಸ್ವಾತಂತ್ರ್ಯವಿತ್ತು. ಆಗ ವಯಸ್ಸು ಚಿಕ್ಕದು ಇನ್ನೂ ಹನ್ನೆರಡು ವರ್ಷದ ಹಸುಳೆ ಆದ್ದರಿಂದ ಚಳುವಳಿಯಲ್ಲಿ ಭಾಗವಹಿಸಲು ನಾಚಿಕೆ ಅನಿಸಲಿಲ್ಲ. ವಿದ್ಯಾರ್ಥಿಗಳ ಮೆರವಣಿಗೆಗಳಲ್ಲಿ ಎಲ್ಲಕ್ಕೂ ಮುಂದೆ ಕೈಯಲ್ಲಿ ಝುಂಡಾಗಳನ್ನು ಹಿಡಿದುಕೊಂಡು ಝುಂಡಾ ಉಂಚಾ

ಹಾಡುತ್ತ ಜಯ ಜಯ ಕಾರ ಮಾಡುತ್ತಾ ದೊಡ್ಡ ರಸ್ತೆಗಳಲ್ಲಿ ಅಡ್ಡಾಡಿದರು."[೨] ಹೀಗೆ ಒಂದು ಸ್ವತಂತ್ರ ಚಳುವಳಿಯಲ್ಲಿ ಸ್ತ್ರೀಯರು ಭಾಗವಹಿಸಿ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡಸ್ತರ ಎಂದು ಭಾಷಣಕಾರರು ಇವರನ್ನು ಹೊಗಳಿದರು. ಕಾಲವು ಬದಲಾದಂತೆ ವ್ಯಕ್ತಿತ್ವವು ಕೂಡ ಬದಲಾಗುತ್ತದೆ. ಅದರಲ್ಲೂ ಸ್ತ್ರೀಯರ ಮೊದಲ ಬಾರಿಗೆ ಹೋರಾಟಕ್ಕೆ ಇಳಿಯುವ ಇಂತಹ ಪ್ರಸಂಗಗಳು ಸ್ತ್ರೀಯರ ವ್ಯಕ್ತಿತ್ವ ಪರಿವರ್ತನೆಗೆ ಇಲ್ಲಿ ಶಾಂತಳು ನಿದರ್ಶನವಾಗುತ್ತಾಳೆ.

ಮುಂಬೈಯಲ್ಲಿ ಅಚ್ಯುತನ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುವುದು. ಶಾಂತ ಕಾಲೇಜಿನಲ್ಲಿ ಸ್ವಾತಂತ್ರ ಸಂಗ್ರಾಮದ ಮೆರವಣಿಗೆಯಲ್ಲಿ ಮುಂದಾಳುತನ ವಹಿಸುವುದು. ಈ ಎರಡು ಘಟನೆಗಳನ್ನು ಮತ್ತು ಅವುಗಳ ಪರಿಣಾಮಗಳನ್ನು ಜೊತೆಯಾಗಿ ನೋಡಿದರೆ. ಸಂಪ್ರದಾಯ ಶರಣ ಬದುಕಿನ ಏಕತಾನವನ್ನು ವ್ಯತ್ಯಾಸಗೊಳಿಸುವ ಒಂದು ಶಕ್ತಿಯಾಗಿ ಕಾದಂಬರಿಕಾರರು ಗಮನಿಸಿದ್ದಾರೆ.

ರಾಘುಪ್ಪನು ದೇಸಾಯಿರಿಗೆ ಬರೆದಿರುವ ಪತ್ರವೂ ತಪ್ಪೊಪ್ಪಿಗೆಯ ಪತ್ರವಾದರೂ, ಮೆಹಬೂಬಜಾನ ಹಾಗೂ ಚಂಪಕ ಇವರ ಬಗ್ಗೆ ತನಗಿದ್ದ ಪ್ರೀತಿಯ ಆಳ ಎಂತಹದು ಎಂಬುದನ್ನು ತಿಳಿಸುವ ಪ್ರೇಮ ಪತ್ರವೂ ಸಹ ಆಗಿದೆ. ಅದೇ ರೀತಿ ಆಸ್ತಿ ಪತ್ರವು ಆಗಿದೆ. ಈ ಪತ್ರದಲ್ಲಿ ಆಧುನಿಕ ಬದುಕಿನ ಲೌಕಿಕ ಉದ್ದೇಶಗಳ ಅಂಶಗಳು ಇವೆ. ತನ್ನ ನಂತರ ಆಸ್ತಿಯಾರಿಗೆ ಸಲ್ಲಬೇಕು. ಮಗಳನ್ನು ಯಾರು ಮದುವೆಯಾಗಬೇಕು ಎಂಬುದನ್ನು ಸಹ ತಿಳಿಸುತ್ತದೆ. ರಾಘುಪ್ಪನ್ನಲ್ಲಿ ಬದಲಾದ ಆಧುನಿಕ ಪ್ರಗತಿಪರ ಚಿಂತನೆಗಳನ್ನು ಒಳಗೊಂಡ ಅಂಶಗಳು ಎದ್ದು ಕಾಣುತ್ತಿದ್ದು. ಆತನ ಮೋಸ ವಂಚನೆ, ನಾಟಕೀಯ ಬದುಕಿನ ಪಶ್ಚಾತಾಪದ ಮನ ಪರಿವರ್ತಿತವಾದ ಅಂತರ್‌ಮುಖಿನೋಟ ಪ್ರತಿಬಿಂಬ ಈ ಪತ್ರವಾಗಿತ್ತು. ಎಂಬುದನ್ನು ಗಮನಿಸಲಾಗಿದೆ.

ಬೆಣ್ಣೆಯೊಳಗೆ ವಿಷಹಾಕಿದಿ ಎಂದು ತವನಪ್ಪನಿಗೆ ಗದರಿಸಿದರು. ತವನಪ್ಪ ಕಕ್ಕಾಬಿಕ್ಕಿಯಾಗಿ,

'ಯಪ್ಪಾ ಏನು ಆಗೆತ್ಯೋ ನನಗೊಂತು ಆಗವಲ್ಲದರಿ' ನಿನಗೆ ಹೆಂಗ ಗೊಂತು ಆಗತದೋ..... ಭಲೆದೊಡ್ಡ ತುತ್ತಿನ ಮನಶ್ಯಾ ನೀನು. ಸರಕಾರಿ ಅಮಲದಾರರಿಗೇ ವಿಷ ಹಾಕೋ ಅವ ನೀನು..... ಯಾಕೋ ಅಮಲದಾರನ ನಿಗಚಿ ದೊಡ್ಡವ ಅನಿಸಿಗೋಬೇಕಂತ ಮಾಡದಿಯೇನು? ಆತ್ಯು ಬಾ, ತುರಂಗದಾಗ ನಾಕು ಒಪ್ಪತ್ತು ಕಳೆದು ಬರಿವಂತಿ, ಲಕ್ಷ್ಮಣರಾವ್ ಕಂಪ್ಲೇಟು ದಾಖಲು ಮಾಡು ತೊಗೋ ಅವನ ಸ್ಟೇಟಮೆಂಟು ಪೋಲಿಸ ಪಾಟೀಲರೂ ಇಲ್ಲೆ ಇದ್ದರ ಗೌಡರ ನೀವು ಇದಕ್ಕ ಸಾಕ್ಷಿ ಹಾಕಬೇಕಾಗತದ....."[೧೩]

ಈ ಮೇಲಿನ ಸಂಗತಿಯಿಂದ, ಏನೂ ತಪ್ಪಮಾಡದ ತವನಪ್ಪನನ್ನು ತುರಂಗ, ಖಟ್ಲೆ, ಕಂಪ್ಲೇಟು, ಸ್ಟೇಟಮೆಂಟು, ಅಂತ ಹೊಸ ಶಬ್ದಗಳ ಪ್ರಯೋಗ ಮಾಡಿ ಅವನನ್ನು ದಂಗು ಬಡಿಯುವಂತೆ ಮಾಡುತ್ತಾರೆ. ಹಳ್ಳಿಜನ ರೈತರು ಮುಗ್ಧ ಮನೋಭಾವದವರು. ಯಾವುದೇ ಕಟ್ಲೆ, ತುರಂಗ, ಕಂಪ್ಲೇಟು ಸ್ಟೇಟಮೆಂಟುಗಳ

ತಂಟೆಗೆ ಹೋದವರಲ್ಲ ಇವುಗಳ ಪರಿಚಯ ಕೂಡವಿಲ್ಲ. ಗ್ರಾಮೀಣ ಪ್ರದೇಶದಲ್ಲಿ ಮೊದಲು ಪಂಚಾಯಿತಿ ಕಟ್ಟೆಯಲ್ಲಿ ನ್ಯಾಯಗಳು ಬಗೆಹರಿಯುತ್ತಿದ್ದವು. ಪಂಚಾಯಿತೆ ಕಟ್ಟೆಯ ನ್ಯಾಯಾಲವಾಗಿದ್ದರೆ, ಅಲ್ಲಿನ ತೀರ್ಪುಗಾರ ಊರಾಗಿನ ದೊಡ್ಡ ದೇಸಾಯಿ ಗೌಡರ ಮೂಲಕ ತೀರ್ಪನ್ನು ತೀರ್ಮಾನಿಸಲಾಗುತ್ತಿತ್ತು. ವಸಾಹತುಶಾಹಿಯ ಪ್ರಭಾವವು ಪ್ರತಿಯೊಂದು ಹಳ್ಳಿ ಶಹರದ ಮೇಲೆ ಆಯಿತು. ಪೋಲಿಸ್, ಪೋಲಿಸ್‌ಠಾಣೆ ಪ್ರಾರಂಭವಾಗಿ ಬರುಬರುತ್ತಾ ತುರಂಗ ಕಟ್ಲೆ, ಕಂಪ್ಲೇಟುಗಳ ಪರಿಚಯಿಸ ತೊಡಗಿದವು. ಊರಲ್ಲಿ ಯಾವುದೇ ನ್ಯಾಯ ಅನ್ಯಾಯವನ್ನು ದಾಖಲಿಸುವ, ಅದಕ್ಕೆ ಶಿಕ್ಷೆಯನ್ನು ವಿಧಿಸುವ ಇಂತಹ ಹೊಸ ವ್ಯವಸ್ಥೆಗಳು ಪರಿಚಯವಾಗಿ ಸಾಕಷ್ಟು ರಾಜಕೀಯ ವಲಯದಲ್ಲಿ ಸುದೀರ್ಘವಾದ ಪಲ್ಲಟಗಳು ಪ್ರಾರಂಭವಾದವು ಎಂಬುದನ್ನು ಈ ಕಥೆಯಲ್ಲಿ ಕಂಡುಕೊಳ್ಳಲಾಗಿದೆ.

ಹೀಗೆ ಕಾದಂಬರಿಯಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಕ್ಷೇತ್ರದಲ್ಲಾದ ಪರಿವರ್ತಿತ ಅಂಶಗಳನ್ನು ಚರ್ಚಿಸಲಾಗಿದೆ.

### ಅಡಿಟಿಪ್ಪಣಿಗಳು

೧. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೧೦೦

೨. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೯೬

೩. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೧೭೮

೪. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೬೭

೫. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೬೭

೬. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೭೪

೭. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೨೪

೮. ನಾಯಕ ಹಾ.ಮಾ. (ಸಂ) ಕೃಷ್ಣಕುಮಾರ, ಸಿ.ಪಿ. ವೆಂಕಟಾಚಲ ಶಾಸ್ತ್ರಿ ಟಿ.ವಿ.ರ 'ಸ್ವಸ್ತಿ' ಪು.೭೯೨

೯. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೨೦೬

೧೦. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೧೭೪

೧೧. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೬೧

೧೨. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೨೧೩

೧೩. ಶಂಕರ ಮೊಕಾಶಿ ಪುಣೇಕರರ ಕಾದಂಬರಿ 'ಗಂಗವ್ವ ಗಂಗಾಮಾಯಿ' ಪುಟ.೧೪೨

• • •

## ಅಧ್ಯಾಯ ಐದು

# ಹಳ್ಳ ಬಂತು ಹಳ್ಳ ಮತ್ತು ಸಮಕಾಲೀನ ಪರಿಸರದ ಸ್ಥಿತ್ಯಂತರಗಳು

ಹಳ್ಳ ಬಂತು ಹಳ್ಳ ಕಾದಂಬರಿ ಶೀರ್ಷಿಕೆಯಂತೆ ಕಥನ ಕ್ರಮದ ಸಂದರ್ಭಗಳು ಇದ್ದಕ್ಕಿದಂತೆ ಉದ್ಭವವಾಗುವ ಹಳ್ಳದ ಮಾದರಿಯಲ್ಲಿಯೇ ಇವೆ. ಹಳ್ಳವು ಮಳೆಯೆಂಬ ಆಕಾಲಿಕ ಘಟನೆಯಿಂದಾಗಿ ಮೂಡಿ ಬರುವಂತೆ, ಕಥೆಯು ಸ್ವಾತಂತ್ರ್ಯ ಸಮರದ ನಡುವಿನ ನವಲಗುಂದಕ್ಕೆ ಬಂದ ಕಮಲನಾಭ ಪಂತದಿಂದ ಉದ್ಭವವಾಗುತ್ತದೆ. ನದಿಯ ಮೂಲ ಎಂಬ ನುಡಿಯಂತೆ ಇದು ಸಾಗರ ಸೇರುವ ಗುರಿಯೊಂದಿಗೆ ಮೂಲದಲ್ಲಿನ ಅನೇಕ ಮಾರ್ಪಾಡುಗಳೊಂದಿಗೆ ಸಾಗರ ಸೇರುವ ನದಿಯಂತೆ ಕಂಡು ಬರುತ್ತದೆ. ಕಥಾ ಪ್ರತಿಮೆಯಂತೆ ಇದ್ದಕ್ಕಿದ್ದಂತೆ ಉದ್ಭವಗೊಂಡ ನೆಲೆ ಹುಡುಕುತ್ತಾ ಸಾಗುವ ಹಳ್ಳದಂತೆ ಅಲ್ಲಲ್ಲಿ ಪ್ರವಾಹಕ್ಕೆ ಒದಗುವ ಅರೆ ಕೊರೆಗಳನ್ನು ಸ್ಥಿತ್ಯಂತರಗೊಳಿಸುವ ಪರಿಯಂತೆ ಕಥನ ಕ್ರಮ ನಿರೂಪಿತವಾಗಿದೆ. ಹಾಗಾಗಿ ಈ ಕಾದಂಬರಿಯ ಕಥನ ಕ್ರಮ ಹಲವಾರು ಸ್ಥಿತ್ಯಂತರಗಳ ಸಂದರ್ಭಗಳನ್ನು ತನ್ನಲ್ಲಿ ಹುದಗಿಸಿಕೊಂಡಿದೆ.

ಮುನ್ನುಡಿಯಲ್ಲಿ ಕೆ.ವಿ. ಅಕ್ಷರರು ಹೇಳಿರುವಂತೆ ಹಳ್ಳ ಬಂತು ಹಳ್ಳ ಕಾದಂಬರಿಯಲ್ಲಿ ಸಾದ್ಯಂತವಾಗಿ ಬರುವ ಒಂದು ಪ್ರತಿಮೆ ನದಿಯದು, ಕಾದಂಬರಿಯ ಹೆಸರಿನಲ್ಲಿ ಒಂದು ನದಿಯ ಚಿತ್ರವಿದ್ದು ಇಡಿಯ ಕಾದಂಬರಿಯು ವಿಭಜಿತವಾಗಿರುವುದೂ ನದಿಯ ವಿವಿಧ ಅವಸ್ಥೆಗಳನ್ನು ಸೂಚಿಸುವ ನುಡಿಗಟ್ಟುಗಳನೊಳಗೊಂಡ ಅಧ್ಯಾಯ ಶೀರ್ಷಿಕೆಗಳ ಮೂಲಕ ಇದು ನದಿಮೂಲ ದಿಂದ ಆರಂಭವಾಗಿ ನಾನಾ ರೀತಿಯ ವ್ಯಕ್ತ ಅವ್ಯಕ್ತ ಪ್ರವಾಹಗಳಲ್ಲಿ ಹರಿದು ಸಾಗರಮ್ ಪ್ರತಿಯಲ್ಲಿ ಪರ್ಯವಸನಗೊಳ್ಳುತ್ತದೆ.

ಯಾವುದೇ ನದಿಯಿರಲಿ, ಅದರಲ್ಲಿ ಈ ಕ್ಷಣಕ್ಕೆ ಹರಿದ ನೀರು ಮರುಕ್ಷಣಕ್ಕೆ ಹರಿಯಲಾರದು. ಆದ್ದರಿಂದ ಪ್ರತಿಕ್ಷಣವು ಬದಲಾಗುತ್ತಲೇ ಸಾಗುತ್ತದೆ. ಅದರಂತೆ ಜೀವನವು ಒಂದು ನದಿ ಇದ್ದಂತೆ, ಇದು ಸದಾ ಒಂದು ಕಾಲದಿಂದ ಮತ್ತೊಂದು ಕಾಲಕ್ಕೆ ಬದುಕಿನ ಸ್ತರಗಳಲ್ಲಿ ಸ್ಥಿತ್ಯಂತರವನ್ನು ಪಡೆದುಕೊಂಡು ಸಾಗುತ್ತದೆ. ಈ ಕಾದಂಬರಿಯಲ್ಲಿ ವಾಸುದೇವಚಾರ್ಯರ ಪಂತ ಮನೆತನವು ಮೂರು ತಲೆಮಾರುಗಳವರೆಗೂ

ಅನೇಕ ಹಂತಗಳಲ್ಲಿ ಪಲ್ಲಟಗಳ ಸ್ವರೂಪದ ಸಂಕೀರ್ಣ ಚಿತ್ರವೊಂದನ್ನು ನಮ್ಮೆದುರಿಗೆ ಸೃಷ್ಟಿಸುತ್ತಾ ಬಂದಿರುವುದು ಹಲವಾರು ಪ್ರಸಂಗದ ಮೂಲಕ ನೋಡಬಹುದಾಗಿದೆ. ಕಾದಂಬರಿಯ ಪ್ರಾರಂಭವೇ ಹೊರ ನಾಡಿನ ಕಾನಪುರದಿಂದ ಕಮಲನಾಭನ ಆಗಮನವು ಮುಂದೆ ನವಲಗುಂದದ ಪಂಥ ಮನೆತನಕ್ಕೆ ನಾಂದಿಯಾದ ಇವನು ಕುಟುಂಬದ ಸ್ಥಿತ್ಯಂತರಕ್ಕೆ ಅಡಿಪಾಯವಾಗಿ ನಿಲ್ಲುತ್ತಾನೆ. ಇವನ ಬಾಳ ಸಂಗಾತಿಯಾಗಿ ಕೈಹಿಡಿದ ಸಾವಿತ್ರ ಬಾಯಿ, ಪರಕೀಯ ನಾಡುಕುಲಗಳಿಂದ ಬಂದ ಕಮಲ ಪಂತನನ್ನು ಪಕ್ಕ ಮದ್ವಸಂಪ್ರದಾಯಕ್ಕೆ ಬದಲಾಯಿಸುತ್ತಾಳೆ. ಅವನಿಗೆ ಮದ್ವಸಂಪ್ರದಾಯದ ಆಚಾರ ವಿಚಾರ ನಡೆನುಡಿ, ಮಡಿ, ಮೈಲಿಗೆ, ಹಬ್ಬ, ಹುಣ್ಣಿವಿ, ಮುಂತಾದವುಗಳ ಬಗ್ಗೆ ತಿಳಿಹೇಳುತ್ತಾಳೆ. ಅಲ್ಲದೇ ಬ್ರಾಹ್ಮಣ ಸಮುದಾಯದಲ್ಲಿ ಮದುವೇ ಸಮಾರಂಭಗಳಲ್ಲಿ ಒಗಟು ಹೇಳಿ ಅದರ ಮೂಲಕ ಗಂಡನ ಹೆಸರನ್ನು ಹೇಳುವ ಸಂಪ್ರದಾಯ, ಆ ಒಗಟಿನ ಮೂಲಕ ಕಮಲನಾಬನು ಕಮಲ ಚಾರ್ಯರನಾಗುತ್ತಾನೆ.

"ಸಮಸ್ತ ಜಗದೋದ್ದರಕ್ಕೆ ಹುಟ್ಟಿ ಬಂದವರು ಉಡಪಿನ ಮದ್ವಚಾರ್ಯರು: ಮುನವಳಿ ವೆಂಕಣ್ಣಯಚಾರ್ಯ ಮಗಳು ಸಾವಿತ್ರಿಬಾಯಿಯ ಉದ್ದಾರಕ್ಕೆ ಹುಟ್ಟಿಬಂದವರು ನವಲಗುಂದದ ಕಮಲಚಾರ್ಯರು"[7]

ಈ ರೀತಿ ಗಂಡನ ಹೆಸರು ಹೇಳುವುದರ ಮೂಲಕ ಕಾಣ್ವನೋ, ಮಾಧ್ಯ್ವವಿಕನೋ ಕನೋಜಯೋ ಕಾಠೇವಾಡಿಯೋ ಎಂಬ ಸಂಶಯಕ್ಕೆ ಎಡೆಮಾಡಿ ಕೊಟ್ಟಂತಹ ಕಮಲಯ್ಯನನ್ನು ಶುದ್ಧ ಮಾದ್ವ ಸಂಪ್ರದಾಯದ ವೈಷ್ಣವನ್ನಾನ್ನಾಗಿ ಮಾಡಿಬಿಟ್ಟಳು.

ಮದುವೆಯಾದ ವರುಷ ನೂಲು ಹುಣ್ಣಿವಿಯ ದಿವಸ ಕಮಲಚಾರು ದೇವಸ್ಥಾನದೊಳಗೆ ಸಕಲ ವಿಪುರ ಮಧ್ಯ ಕುಳಿತು "ಯಜ್ಞೋಪ ವಿತಂ ಪರಮಂ ಪವಿತ್ರಂ ಯಜ್ಞೋಪವಿತಂ ಬಲಮಸ್ತು ತೇಜ"[3] ಅನುಕೋತ ಭಾರದ್ವಾಜ ಗೋತ್ರೋತ್ಪನ್ನ ಕಮಲಾಚಾರ್ಯ ಶರ್ಮಣ: ಅಪಸ್ತಂಬ ಯಜುರ್ವೇದ ಬೆಲ್ಲ ಹಿಟ್ಟು. ಎಂದು ಹೇಳಿ ಪಂಜಗವ್ಯೆತಗೊಂಡು ಆ ಮೇಲೆ ಬೆಲ್ಲಹಿಟ್ಟು ಬಾಯಿಗ ಹಾಕಿಕೊಂಡರು. ಈ ರೀತಿಯಾಗಿ ಕಮಲ ನಾಭನು. ನೂಲ ಹುಣ್ಣವಿಯ ಪ್ರಸಂಗದ ಮೂಲಕ ಎಲ್ಲರಿಗೂ ಕಮಲಚಾರ್ಯನಾಗಿ ಪರಿಚಯಿಸಿಕೊಳ್ಳುವುನು ಜೊತೆಗೆ ಗೋತ್ರ ಹೇಳುವುದರ ಮೂಲಕ ಪಂಚಗವ್ಯೆ ತೆಗೆದುಕೊಂಡು ಆಚಾರ ಸಂಪ್ರದಾಯಕ್ಕೆ ಕ್ರಮೇಣ ಬದಲಾಗುವ ಕಮಲಾಚಾರ್ಯ ಪಂಥನನ್ನು ಕಾಣಬಹುದಾಗಿದೆ.

ಸಾವಿತ್ರಿ ಬಾಯಿಗೆ ಮದುವೆಯಾದ ನಂತರ ತನ್ನ ತಂದೆಯು ಮನೆಯಲ್ಲಿರುವಾಗ ಉಡಿ ತುಂಬುವುದು ಮಡಿಲು ಬರಿದಾಗೋದು ಈ ಪ್ರಕ್ರಿಯೆ ನಡೆದು ಪ್ರತಿ ವರ್ಷ ಚಿಗುಟಿದ ಬಳಿ ಕೂಡಿಯನ್ನು ಹಸಿರು ಬಿದಿರಿನ ಹೊಸ ಮರದೊಳಗೆ ಹಾಕಿಕೊಂಡು ಬಿಳಿ ವಸ್ತು ಮುಚ್ಚಿಕೊಂಡು ಮರಳಿ ಭೂಮಿ ತಾಯಿಗೇ ಒಪ್ಪಿಸುವ ಕೆಲಸ ನಡದೇ ಇತ್ತು. ಹೊಸಮನ್ಯಾಗ ಬಾಣಂತನ ನಡೆದ ಮೇಲೆ ಸಂತಾನ ಭಾಗ್ಯ ಪ್ರಪ್ತಿಯಾಗಿ ಯಂಕಣ್ಣಾ, ಅಂಬಕ್ಕ ಅನಂತ, ತಿಪ್ಪಯ್ಯ ಭಾಗೀರತೀ.. ಒಂದರ ಮ್ಯಾಲೊಂದು ಮಕ್ಕಳು.. ದೇಸಾಯಿರ

ಕಾಲಕ್ಕೆ ಗೃಹ ಪ್ರವೇಶ ಮಾಡಿದ ಹೊಸಮನಿ ಅಗ್ಗಿಷ್ಟೆಗಿ ಆರಲೇ ಇಲ್ಲ. ಹಳೆ ಮನೀ ಅಲ್ಪ ಸಂತಾಲ ಅರಿಷ್ಟಮನಿ ಎಂದು ಸಾವಿತ್ರಿಬಾಯಿ ಎನ್ನುವ ಮಾತುಗಳು ನಿಜವಾಗಿಯೂ ಸಾವಿತ್ರಿದು ಅತಿಸಂತಾನವಾದರೇ ಸಾವಿತ್ರಿ ತಾಯಿದು ಅಲ್ಪ ಸಂತಾನ ಮನಿ ಆತು. ಹೀಗೆ ಈ ಎರಡು ಪೀಳಿಗೆಯಲ್ಲಾದ ಬದಲಾವಣೆಯ ಪ್ರತಿಕವಾಗಿ ಹೊರ ಹೊಮ್ಮಿದ ಸಂತಾನದ ಪ್ರಾಪ್ತಿಯನ್ನು ಕಂಡುಕೊಳ್ಳಲಾಗಿದೆ. ಹೀಗೆ ಹರಿದ ಜೀವನದಿ ಈಗ ನೆಲ ಚಿಮ್ಮಿಕೊಂಡು ಬರಲು ಹಾತೊರೆಯುತ್ತಿತ್ತವೆನ್ನಬಹುದಾಗಿದೆ.

ನಾರಾಯಣ, ರುಕ್ಮರವರು ಪಂತರ ಮನೆತನದ, ಸದಸ್ಯರಲ್ಲದಿದ್ದರೂ ಈ ಮನೆಯವರ ಮಕ್ಕಳ ಹಾಗೆ ನೋಡಿಕೊಳ್ಳುವ ವಾಸುದೇವಚಾರ್ಯ ಮತ್ತು ತುಳಸಕ್ಕ ಅವರು ವಯಸ್ಸಿಗೆ ಬಂದಾಗ ಮದುವೆ ಮಾಡುವ ವಿಚಾರವನ್ನು ಮಾಡಿದವರು. ಎಲ್ಲರೂ ರುಕ್ಮ ನಾರಾಯಣನನ್ನು ಗುರುತಿಸುವಲ್ಲಿ ಪಂತರ ಮನಿ ರುಕ್ಮ ಎಂದು ಕರೆಯುವ ಮಾತೇ ಸಾಕು. ಇವರು ಆ ಮನೆಯ ಅವಿಭಕ್ತ ಕುಟುಂಬದ ಸದಸ್ಯರಾಗಿ ಕಾಣುವ ನಾರಾಯಣ ಬೇರ ಜಾತಿಯ ಮೈನಾಳನ್ನು ಮದುವೆಯಾದ ಮೇಲೆ ಇಡೀ ಪಂತರ ಮನೆಯವರು ಮನೆ ಮತ್ತು ಮನಸ್ಸಿನಿಂದ ದೂರ ಮಾಡುವ ಪ್ರಯತ್ನ ಮಾಡಿದ್ದರು. ಎಂಬುದನ್ನು ಕೆಲವೊಂದು ಪ್ರಸಂಗದಿಂದ ಸ್ಪಷ್ಟಪಡಿಸಬಹುದಾಗಿದೆ.

"ಯಲ್ಲಾನು ಮೈಲಗಿ ಆದಾಂಗ ಅಪವಿತ್ರ ಅಥಂಗ, ಅನಸತಿತ್ತು, ಆಗೆಲ್ಲ ಅವರು ಒಂದು ಸಾಲಿಗ್ರಾಮ ಒಂದು ದೊಡ್ಡದೇವರ... ಛೇ ರಂಡೇ ಮಗ ಇಡೀ ಮನೀ ಮೈಲಗಿ ಮಾಡಿಟ್ಟ... ಏಕರಸ ಮಾಡಿ ಬಿಟ್ಟ."[೩]

ಎಂದು ವಾಸುದೇವಚಾರ್ಯರು ನಾರಾಯಣ ಕಂಡ ಬಗೆ.

ತುಳಸಕ್ಕನಿಗೆ ಗುಂಡಚಾರ್ಯರು ಹೇಳುವ ನುಡಿಗಳ ಈ ರೀತಿಯಾಗಿದ್ದವು.

"ಮನ್ಯಾಗ ಎರಡೆರಡು ಲಗ್ನಕೆ ಬಂದ ಕನ್ಯ ಅವ ಅಂತಿರಿ.. ಹಿಂಗೆ ವಿಜಾತಿಯಾಕಿನ್ನ ಕಟ್ಟಿ ಗೊಂಡ ರಂಡೆಗಂಡ ಮನ್ಯಾಗ ಯಲ್ಲಾ ಅಡ್ಯಾಡಿದರ.. ನಾಳಿ ಒಂದೋಗಿ ಒಂದಾದೀತು. ಹೇಳಿ ಕೇಳಿ ನವಲಗುಂದ ಸಣ್ಣ ಊರು... ಹುಡುಗಿಯರ ಲಗ್ನ ಕಠಿಣ ಆದಿತು."[೪]

ಈ ನುಡಿಗಳಿಂದ ತುಳಸಕ್ಕನಿಗೆ ಮಕ್ಕಳ ಮದುವೆ ಚಿಂತೆ ಉಂಟಾಗಿ ನಾರಾಯಣನನ್ನು ಮನೆಯಿಂದ ದೂರ ಮಾಡುವ ಬಗೆ ಹೇಗೆ ಎಂದು ಆಲೋಚಿಸಿದ್ದಳು ಎಂಬುದು ಕಂಡುಕೊಳ್ಳಲಾಗಿದೆ. ಅದೇರೀತಿ ಅಂಬಕ್ಕನಿಗೆ ಹೇಳಿದಾಗ ಅವಳು ಪ್ರತಿಕ್ರಿಯಿಸಿದ್ದು ಈ ರೀತಿಯಾಗಿತ್ತು.

"ಅಯ್ಯ ಹೆಣ್ಣು ಹುಡಗೇರ ಲಗ್ನ ಮುಖ್ಯ....

ಈ ನಾರ್ಣ್ಯರಂಡೆ ಗಂಡಂದೇನು? ಹೇಂಗೋ ನಡೀತನ ಎಂದು ಹೇಳುವ ಮಾತುಗಳು ಪಂತದ ಮನೆಯವರು ನಾರಾಯಣನನ್ನು ನೋಡುವ ದೃಷ್ಟಿಕೋನದಲ್ಲಿ ಮೊದಲಿಗಿಂತ ಹೊರಗಿನವವೆನ್ನುವ ವ್ಯತ್ಯಾಸ ಕಂಡುಕೊಳ್ಳುವಲ್ಲಿ ಇಂತಹ ಪ್ರಸಂಗಗಳು ಸಾಕ್ಷಿಯಾಗಿ ನಿಲ್ಲುತ್ತವೆ.

ಹಳೆಪೀಳಿಗೆಯ ಸಂಪ್ರದಾಯ, ಮಡಿಮೈಲಿಗೆ ಆಚಾರ, ವಿಚಾರಗಳಲ್ಲಿ ಹೊಸ ಪೀಳಿಗೆಗೆ ಬಗ್ಗಿಕೊಳ್ಳದೇ ತಮ್ಮ ವೈಯುಕ್ತಿಕ ಹಿತಕ್ಕಾಗಿ ಬೆಳೆದುಕೊಂಡು ಬಂದ ಇವರು ಹಿರಿಯ ಪೀಳಿಗೆಯು ಪದ್ಧತಿಗೆ ವಿರುದ್ಧವಾಗಿ ನಡೆದು ವೈರುದ್ಯಗಳನ್ನು ಬೆಳೆಸಿಕೊಂಡು ಪಂತದ ಮನೆತನವನ್ನು ಗೊಂದಲಮಯವಾಗಿ ಮಾಡುತ್ತಿದ್ದರಲ್ಲದೇ, ಈ ಎರಡು ಪೀಳಿಗೆಯ ತಿಕ್ಕಾಟವು, ಹಳೆಯದನ್ನು ಬಿಡದ ಹೊಸದನ್ನು ಸ್ವೀಕರಿಸಲಾಗದೇ ಹಾಗೆ ಸಾಗಿದ ಇದಕ್ಕೆ ಕಡಿವಾಣ ಹಾಕಲು ಅಂಬಕ್ಕನ ಬೈಗುಳಗಳು ಗುಡಗಿನಂತೆ ನಾರಾಯಣ, ಭೋದ, ಹಣಮ್ಯಾಯ್ಯ ಮೇಲೆ ಹರಿ ಹಾಯುತ್ತಿದ್ದವು.

ವಾಸಣ್ಣ ಈ ನಾರಾಯಣನ್ನ ಹದ್ದು ಬಸ್ತಗೆ ತರಲಿಕ್ಕೆ ಬೇಕಾ ಇಲ್ಲದಿದ್ದರ ಒಂದು ಹೋಗಿ ಒಂದಾಗೀತು ನೋಡು ರಾಮಲಿಂಗನ ಕಾಮಣ್ಣಾನ ಮಂಟಪದಾಗ ಯಾರ ಯಾರದೇ ಸಂಗ್ತೀ ಹಲಗೀ ಬಾರೆಸತಾನಂತ... ಮತ್ತು ಮುನೀಗ ಬಂದು ನೀರು ನಿಡಿಯಲ್ಲಾ ಏಕರಸ ಮಾಡತಾನ... ನಾವೆಲ್ಲಾ ಮನ್ಯಾಗ ಇರಬೇಕೋ ಬ್ಯಾಡೋ... ನಾರ್‍ಯಾ ಒಬ್ಬವ ಹಾಳಾಗಿ ಹೋದರ ಹೋಗಲಿ ಅಂದರ ಈ ಭೋಧ್ಯ... ರಾಘ್ಯ ಹಣಮ್ಯಾ ಎಲ್ಲರೂ ಮ್ಹಾಂತಪ್ಪನ ಅಂಗಡ್ಯಾಗ ಶಿಣ್ಣಿ ಕರದಂಟು ತಿಂತಾರಂತ.. ಇದೇನು ಶುಚಿರ್ಭೂತ ಬ್ರಾಂಬ್ರ ಮನೀನೋ ಏನು ಸೂದ್ರ ಗುಡಿಸಲೋ'"[9] ಎಂದು ಕಿರುಚಿದಳು.

ಮನೆಯಲ್ಲಿ ರುಚಿಕರವಾದ ತಿಂಡಿಗಳನ್ನು ಮಾಡಿದರೂ ಈ ಹುಡಗರಿಗೆ ಮಾಂತಪ್ಪನ ಅಂಗಡಿ ಶಿಣ್ಣಿಕರದಂಟು ತಿನ್ನ ಬೇಕನ್ನವ ಇವರ ಚಪಲವು ಮನೆಗಿಂತ ಅಂಗಡಿ ತಿನುಸುಗಳಲ್ಲಾದ ವ್ಯತ್ಯಾಸವು ಯಾವುದೇ ಮಡಿ, ಮೈಲಿಗೆ ವಿಚಾರಕ್ಕೆ ಎಡೆಮಾಡಿ ಕೂಡದೇ ಹೋಗುತ್ತವೆ. ಇದು ಇವರ ತಿನುಸಿನಲ್ಲಾದ ಮಾರ್ಪಡನ್ನು ತೋರಿಸುತ್ತದೆ. ಮಡಿಮೈಲಿಗೆಯನ್ನು ವಿರೋಧಿಸುವ ಇವರು ಒಂದು ರೀತಿಯಲ್ಲಿ ಆಧುನಿಕರಣಕ್ಕೆ ಒಳಗಾಗುತ್ತಾರೆ.

ವೆಂಕಣ್ಣನು ಬ್ರಹ್ಮಣ ವರ್ಗದ ಸಂಪ್ರದಾಯ ಕುಟುಂಬದ ಸದಸ್ಯನಾದ ಇತನು ಚಂಡಕಿಯನ್ನು ಎಲ್ಲರಂತೆ ಬಿಟ್ಟರೂ ಕೂಡ ಅದು ಕಾಣದ ಹಾಗೆ ಅದ್ಕೆ ರುಮಾಲುನ್ನು ಸುತ್ತಿಕೊಳ್ಳುವನು. ಅಷ್ಟಲ್ಲದೇ ನುಸಳಿ ಜಂಡಕಿ ಹೊರಬಂದರೂ ಅದನ್ನು ಒಳಕ್ಕೆ ಹಾಕಿ ಅದು ಕಾಣದ ಹಾಗೆ ನೋಡಿಕೊಳ್ಳುವ ಇತನ ನಾಟಕೀಯ ಉಡುಪು ಸಂಪ್ರದಾಯದಿಂದ ಆಧುನಿಕತೆಯ ಕಡೆಗೆ ಸಾಗುವ ಪರಿಯನ್ನು ಇತನ ವೇಷ ಭೂಷಣದಿಂದ ಕಂಡುಕೊಳ್ಳಲಾಗಿದೆ.

ಯಾವುದೇ ಒಂದು ಹೆಣ್ಣಿಗೆ ಮದುವೆ ಮಾಡಬೇಕಾದರೆ ಹುಡಗ ನಾದವನು ಒಳ್ಳೆಯ ಸಂಸ್ಕೃತಿಯಿಂದ ಬಂದ ತಂದೆ ತಾಯಿಗಳನ್ನು ಒಳಗೊಂಡ ಸುವ್ಯವಸ್ಥಿತವಾದ ಮನೆತನ, ಆಸ್ತಿಯನ್ನು ಹೊಂದಿರಬೇಕು. ಅಂತವರಿಗೆ ಹೆಣ್ಣುಕೊಡುವುದನ್ನು ನಿರ್ಧರಿಸುತ್ತಿದ್ದ ಸಮಾಜವು, ಇದು ಯಾವುದನ್ನು ಇಲ್ಲದ ನಾರಾಯಣ ನಿಯೋಗದ ನಾರಾಯಣವೆಂದು ಕರೆಸಿಕೊಳ್ಳುವ ಇವನಿಗೆ ತಿಪ್ಪಕ್ಕಳು ತನ್ನ ಮಗಳಾದ ಚಂಪಾನ ಕೊಡುವಲ್ಲಿ ಹಿಂಜರಿಯುವಳು ಅವಳ ಮಾತಿನಲ್ಲಿ ಹೇಳುವುದಾದರೆ

‘‘ನಾರಾಯಣ ಪರದೇಶಿ ಖೋಡಿ...

ತಂದಿ ಇಲ್ಲ ತಾಯಿ ಇಲ್ಲ ಊರಾಗ ಮನೀ ಇಲ್ಲ. ಅಡಿವ್ಯಾಗ ಹೊಲ ಇಲ್ಲ, ಚಿಲಕವಾಡದೊಳಗ ಒಂದು ಮನೀ ಅದ ಅಂತ ಖರೆ ಆದ್ರ ಅದನ್ನು ಯಾರು ನೋಡಿಲ್ಲ ಬಿಟ್ಟಿಲ್ಲ... ಈ ಉಳಿದುದು... ಕೇಳವಿ, ನನ್ನ ಮಗಳ ಚಂಪನ್ನ ನಾರಾಯಣ ಮರ್‍ಯೋ ಅಂದ್ರ ಕೊಡೂದಿಲ್ಲ.’’[೬]

ತಿಪ್ಪಕ್ಕ, ಒಂದು ಪುರುಷ ಪ್ರಧಾನ ಸಮಾಜದಲ್ಲಿ ತನ್ನ ಮಗಳ ಭವಿಷ್ಯದ ಬಗ್ಗೆ ತೆಗೆದುಕೊಳ್ಳುವ ನಿರ್ಧಾರಗಳು ಅತ್ಯಂತ ಆಲೋಚನೆಯಿಂದ ಕೂಡಿದ ನಿರ್ದಾರಗಳಾಗಿದ್ದು, ಆಗಿನ ಕಾಲದಲ್ಲಿನೂ ಹೆಣ್ಣಿನ ವಿಚಾರಕ್ಕೆ ಮನ್ನಣೆಯಿತ್ತು. ಹೆಣ್ಣು ಹೇಳಿದ ಸಂಗತಿಗೆ ವಿಚಾರಕ್ಕೆ ಬೆಲೆಕೊಡವುದು. ಇವಳ ಮಾತಿನ ಹಾಗೆ ವಾಸುದೇವಚಾರ್ಯರು ನಡೆದುಕೊಳ್ಳುವರು. ಇದರಿಂದಾಗಿ ನಾನು ಈ ಮನೆಯ ಸದಸ್ಯನೆಂದುಕೊಂಡಿದ್ದ ನಾರಾಯಣ ಮೊದಲನೇ ಸಲ ಅವನಿಗೆ ಪರದೇಶಿ ಅನಿಸಲಿಕ್ಕೆ ಹತ್ತಿತು. ಮನೆಯಲ್ಲಿ ಸಮಯ ಕಳೆಯಬೇಕಾದವ ಹೊರಗಡೆ ಹೆಚ್ಚಿನ ಸಮಯ ಕಳೆಯುವಂತಾಯಿತು. ಇದು ಕೂಡ ಆಗಿನ ಪರಿಸರದಲ್ಲಾದ ಸ್ಥಿತ್ಯಂತರವೆನ್ನಬಹುದು.

ಈ ಅವಿಭಕ್ತ ಕುಟುಂಬದ ಪಂತರ ಮನೆಯಲ್ಲಿ ಮದುವೆಗಳು ಸಂಪ್ರದಾಯಬದ್ಧವಾಗಿ ನಡೆದುಕೊಂಡು ಬರುತ್ತಿದ್ದವು ಎನ್ನುವುದಕ್ಕೆ ಕಮಲಚಾರ್ಯರ ಮದುವೆ ಸಾಕ್ಷಿಯಾಗಿ ನಿಲ್ಲುತ್ತದೆ.

‘‘ಮನವಳ್ಳಿಯಂಕಣ್ಣಾಚಾರ ಪುತ್ರ ಚಿ|| ಕು|| ಸಾವಿತ್ರಿ ಬಾಯಿಗೂ, ಕಾಶಿಯ ಭಾರದ್ವಜ ಗೋತ್ರದ ಕಮಲನಾಬಾಯ್ಯನೆಂಬ ವರನಿಗೂ ಶ್ವೇತ ವರಹಕಲ್ಪನೆ, ವೈವಸ್ವತ ಕಲಯಗೆ ಇತ್ಯಾದಿ ನವಲಗುಂದ ನಾಮಗ್ರಾಮೀ, ಗುರುಹಿರಿಯರ ಸಮುಖದಲ್ಲಿ ಭಜಂತ್ರಿ ಜಮಾತಾಸನು, ತರತರದ ಫಲಗಳಿಂದ ಉಡಿಯ ತುಂಬಿರೇ ಎಂಬ ಪಾರಂಪರಿ ಆರತಿ ಹಾಡಿನ ದಾಟಿಗೆ ಭಜಂತ್ರಿ ಬಾರಿಸುತ್ತ ವಿಜ್ರಂಬಣೆಯಿಂದ ವಿವಾಹ ಮಹೋತ್ಸವ ನೆರವೆರಿತು.’’[೭]

ಗುರುಹಿರಿಯರ ಸಮ್ಮುಖದಲ್ಲೇ ಮುಂಜಿ ಮದುವೆಗಳು ನಡೆದು ಬಂದು ಸಂಪ್ರದಾಯವನ್ನು ಬಿಟ್ಟಿರಲಿಲ್ಲ. ಸೋನಿ, ಬೋಧ, ರಾಘವ, ಹಣಮು ನಾಲ್ಕು ಮದುವೆಯನ್ನು ಮಾಡಿದ ವಾಸುದೇವಚಾರ್ಯರು ವಿಜ್ರಂಬಣೆಯಿಂದ ಆಚಾರ ವಿಚಾರದ ಮೂಲಕ ಪದ್ಧತಿ ಪ್ರಕಾರವಾಗಿಯೇ ತಲೆಮಾರುಗಳಿಂದಲೇ ಮದುವೆಗಳು ಸಾಗಿ ಬರುತ್ತಿದ್ದವು. ಆದರೆ ನಾರಾಯಣ ಅಂತರಾಜಾತಿಯ ವಿವಾಹ ಪಂತರ ಮನೆಯನ್ನು ಅಲ್ಲೋಲ ಕಲ್ಲೋಲ ಮಾಡಿತು. ಪಂತರ ಕುಟುಂಬದಲ್ಲಿ ಮೊದಲ ಬಾರಿಗೆ ಗುರು ಹಿರಿಯರ ಒಪ್ಪಿಗೆ ಪಡೆಯದೇ ತನ್ನ ಇಚ್ಛೆಹಾಗೆ ನಡೆದುಕೊಂಡು ತಾನು ಮೆಚ್ಚಿದ ಹುಡುಗಿಯನ್ನು ಮದುವೆಯಾಗುವುದು. ಒಂದು ರೀತಿಯಲ್ಲಿ ಸಂಪ್ರದಾಯವನ್ನು ಮುರಿಯುವ ಆಧುನಿಕತೆಯನ್ನು ಸ್ವಾಗತಿಸುವುದು ಎಂದು ಪ್ರಸಂಗದ ಮೂಲಕ ತಿಳಿದುಕೊಳ್ಳಲಾಗಿದೆ. ಮದುವೆ ವಿಚಾರದಲ್ಲಿ ಆದಂತಹ ಸ್ಥಿತ್ಯಂತರವು ಈ ಕಥೆಯ ಮೂಲಕ ಕಂಡುಕೊಳ್ಳಲಾಗಿದೆ. ಹೀಗೆ ಜೀವನ ಎಂಬ ನದಿ ಬೇರೆ ದಿಕ್ಕನತ್ತ ಹರಿಯುತ್ತಿರುವುದು ಕಂಡುಬಂದಿದೆ.

ಪ್ಲೇಗಿನ ಕ್ಯಾಂಪ್‌ನಿಂದ ಮರಳಿ ಬಂದ ಊರಿನ ಜನರು ಸಾವು ನೋವುಗಳಿಂದ ತತ್ತರಿಸಿದ್ದರು. ಇದನ್ನು ಕಂಡ ವಾಸುದೇವ ಚಾರ್ಯರು ವೈದಿಕ ವೃತ್ತಿಗಿಂತ ವೈದ್ಯವೃತ್ತಿಯಲ್ಲಿ ತಮ್ಮ ಹೆಚ್ಚಿನ ಸಮಯವನ್ನು ಕಳೆಯ ತೊಡಗಿ, ಒಮ್ಮೊಮ್ಮೆ ದೇವರು ಸಾವನ್ನ ತಡೆಯಲಾಗದಿದ್ದರೂ ರೋಗವನ್ನು ನಿವಾರಿಸುವ ವೃತ್ತಿ ಕೊಟ್ಟಿರುವನೆಂದು ಈ ವೃತ್ತಿಯ ಬಗ್ಗೆ ಇನ್ನೂ ಹೆಚ್ಚಿನ ಶ್ರದ್ಧೆ, ನಿಷ್ಠೆಗಳಿಂದ ಕಾರ್ಯದಲ್ಲಿ ತೊಡಗಿಕೊಳ್ಳುತ್ತಾರೆ. ಮೊದಲಿಗಿಂತ ಇತ್ತೀಚೆಗೆ ಹೆಚ್ಚಿನ ಸಮಯವನ್ನು ರೋಗಿಗಗಳನ್ನು ನೋಡುವುದರಲ್ಲಿ ಕಳೆಯುತ್ತಾರೆ. ಸಂಜೆಯವರೆಗೆ ಸಹ ರೋಗಿಗಳನ್ನೂ ನೋಡುತ್ತಾರೆ. ಹಳ್ಳ ಮಠದ ಸ್ವಾಮಿಗಳನ್ನು ನೋಡುವಾಗ ಆ ಭಾಗದ ರೋಗಿಗಳನ್ನು ನೋಡುವುದಾಗಿತ್ತು. ವಾಸುದೇವಚಾರ್ಯರು ಕೈಗುಣ ಬಹಳ ಛೋಲೋ ಅದ ಅಂತ ಮೆಚ್ಚಿಕೊಂಡು ಜನ ಸಾಗರವೇ ಇವರ ಬಳಿಗೆ ಬರುತ್ತಿದ್ದರು.

ಹೀಗೆ ವಾಸುದೇವ ಚಾರ್ಯರಲ್ಲಿ ಪ್ಲೇಗ ಎಂಬ ಮಾರಿಯಿಂದ ಉಂಟಾದ ಅಗಾದವಾದ ಸಾವು ನೋವು ಅಕ್ರಂದಗಳು ಇವರನ್ನು ವಿಚಿತ್ರವಾದ ಬದಲಾವಣೆಗೆ ದಾರಿಮಾಡಿಕೊಟ್ಟಿತು.

ನವಲಗುಂದವು ಸಮೃದ್ಧವಾಗಿ ಬೆಳದ ಬೆಳೆಗಳಿಂದಾಗಿ ಆರ್ಥಿಕ ಸ್ಥಿತಿಯು ಸುವ್ಯವಸ್ಥೆತವಾಗಿದ್ದವು. ಮೊದಲಿನ ದಿನಗಳು ದುಡ್ಡಿನ ದಿನಗಳಾಗಿರಲಿಲ್ಲ. ಏನಿದ್ದಿರೂ ಹಗೇದ ತುಂಬಾ ಜೋಳ ಅಡ್ಡಣಗಿ ಮ್ಯಾಲ ನಾಲ್ಕಾರು ಚೀಲಗೋದಿ, ಪೆಂಟಿಬೆಲ್ಲ ಅಂಡಗಿಹತ್ತಿಚಿಲ, ಮೆಳಸಾನಕಾಯಿ, ಪುಂಡಿಪಲ್ಲೆ, ಹಳ್ಳದ ಬದನೀಕಾಯಿ ಘಟ್ಟ ಹಾಲು, ಗಡಿಗಿ ಮೊಸರು, ಡಬರಿಬೆಣ್ಣೆ, ಕಾಸಿದ ತುಪ್ಪ, ಹೀಗೆ ಧಾನ್ಯ ಲಕ್ಷ್ಮೀಯದಿನಗವಾಗಿದ್ದ ಆ ಕಾಲವು ಪ್ಲೇಗು ಮತ್ತು ಎರಡು ವರ್ಷದ ಮಳೆಬಾರದ ಕಾರಣ ರೈತರ, ಕೂಲಿಕಾರರ, ಗೌಡರ, ಪಂತರ, ಜೀವನವು ಚಿಂತಾಜನಕವಾಗಿದ್ದಿತು. ಬೆಳೆ ಕೈಗೇ ಹತ್ತಲಿಲ್ಲ. ಸಾವು ನೋವುಗಳ ನವಲಗುಂದ ಜನರನ್ನು ತತ್ತರಿಸಿದವು. ಪ್ರತಿವರ್ಷವೂ ಬರುವ ಕೂಲಿ ಸಿಗದಂಗ ಆಗಿತ್ತು. ವಾಸುದೇವಚಾರ್ಯರ ಕೊಟ್ಟ ಕೊರಪಾಲ ಬೆಳೆ ಕೈಗ ಹತಿಲಿಲ್ಲ. ಲಾವಣೆ ದುಡ್ಡ ಕೂಡ ಬರಲಿಲ್ಲ. ಸಮೃದ್ಧವಾಗಿದ್ದ ನವಲಗುಂದ ಪ್ಲೇಗ ಮತ್ತು ಬರಗಾಲದಿಂದಾಗಿ ಇಲ್ಲಿ ಆಗಿನ ಕಾಲದಲ್ಲಿ ಆರ್ಥಿಕ ಸ್ಥಿತಿಗತಿಗಳಲ್ಲಾದ ಪಲ್ಲಟಗಳನ್ನು ಕಂಡು ಕೊಳ್ಳಬಹುದಾಗಿದೆ.

ಅದುವರೆಗೂ ಹಣಕಾಸಿನ ವಿಷಯ ತಿಳಿಯದು ನವಲಗುಂದದ ಜನರಿಗೆ ಹುಬ್ಬಳ್ಳಿ ಧಾರವಾಡದಂತಹ ದೊಡ್ಡ ದೊಡ್ಡ ಊರುಗಳ ಸಂಪರ್ಕ ಬರಲಿಕ್ಕೆ ಹತ್ತಿ, ಇಪ್ಪತ್ತನೆ ಶತಮಾನದ ಆರಂಭಕ್ಕೆ ದುಡ್ಡಿನ ಬೆಲೆ ಹೆಚ್ಚಾಗುತ್ತಾ ಹೊಯಿತು. ಧಾರವಾಡ ಹುಬ್ಬಳಿಗೆ ವ್ಯವಹಾರಕ್ಕಾಗಿ ಹೋದ ಜನರು ಬರೆ ದುಡ್ಡಿನ ಮಾತೆ ಆಡುತ್ತಿದ್ದರು. ಎರಡಾಣೆ ಸೇರು ಬೆಣ್ಣೆ, ರೂಪಾಯಿಗೆ ಬೆಲ್ಲ, ರೂಪಾಯಿಗೆ ನಾಲ್ಕು ಚಿಟ್ಟಿ ಜೋಳ, ದುಡ್ಡಿಗೆ ಪಾವು ಹಾಲು, ಎರಡು ಬಿಲ್ಲಿಗೆ ಅಚ್ಚೇರು ಸೇಂಗಾ, ನಾಲ್ಕುಣೆಕ್ಕಾ ಮೂರು ಸೇರು ಕುಸುಬಿಯೆಣ್ಣೆ, ಹೀಗೆ ಹುಬ್ಬಳ್ಳಿ ಧಾರವಾಡದ ಕಡೆಯ ಮಂದಿ ಬರೇ ದುಡ್ಡಿನಮಾತೆ ಆಡುತ್ತಿರುವರು. ಒಂದು ವಸ್ತುವಿ ಬೆಲೆಯು,

ವ್ಯವಹಾರದಲ್ಲಾದ ಈ ತರದ ಬದಲಾವಣೆಯು ನವಲಗುಂದದ ಜನರ ಮೇಲೆ ಸಾಕಷ್ಟು ಪ್ರಭಾವ ಬೀರಿ ಪಾವು, ಸೇರು, ಅಣೆ, ರೂಪಾಯಿ, ಎಂದು ವಸ್ತುಗಳ ಮೌಲ್ಯದಲ್ಲಿ ಪರಿವರ್ತಿತ ವಾದುದನ್ನು ಗಮನಿಸಬಹುದಾಗಿದೆ. ಹುಬ್ಬಳ್ಳಿ ಧಾರವಾಡದ ಹೆಚ್ಚಿನ ಸಂಪರ್ಕದಿಂದಾಗಿ ಆ ವ್ಯವಹಾರಕ್ಕೆ ಹೊಂದಿಕೊಳ್ಳಲಿಕ್ಕಹತ್ತಿದ್ದರು. ಹೀಗೆ ನವಲಗುಂದವು ಹುಬ್ಬಳಿ ಧಾರವಾಡ ನಂಟುಬೆಳೆಯಿತು.

ನವಲಗುಂದದ ಬ್ರಾಹ್ಮಣರು ಮಡಿ ಮೈಲಿಗೆಯೆಂದು, ಹೊರಗಿನದನ್ನು ಸೇವಿಸದ ಅವರು ಕೃಷ್ಣಗಡ್ಡೆಯು ತಿನ್ನುವುದು ಮೈಲಿಗೆ, ಎಂದು ಭಾವಿಸಿದರು. ಆದರೆ ಬ್ರಾಂಬ್ರವ ಕೃಷ್ಣ ಭಟ್ಟ ಅಂತ ಘಟ್ಟದ ಕಡೆಯವನು ನವಲಗುಂದಾಗ ದಶಮಿ ಅಂಗಡಿ ತಗದ ಮೇಲೆ ನವಲಗುಂದದ ಕೆಲವು ಬ್ರಾಹ್ಮಣ ಸಹಿತ ಕಳುವಿನಿಂದ ದಶಮಿ ಅಂಗಡಿಗೆ ಹೋಗಿ ಎರಡು ದಶಮಿ, ಚಟ್ನಿಪುಡಿ, ಮ್ಯಾಲೆ ಉಳ್ಳಾಗಡ್ಡಿ ಹಾಕಿದ ಬರಪೂರ ರಸಬಾಜಿ ರುಚಿಕರವಾದದನ್ನು ಸವಿಲಿಕ್ಕೆ ಶುರುಮಾಡಿದರು. ಹೆಸರಿಗೆ ಬ್ರಾಂಬ್ರ ಅಂಗಡಿಯಾದರೂ ಕೃಷ್ಣಗಡ್ಡೆಯ ಬಳಕೆಯನ್ನು ಮಾಡುತ್ತಿದ್ದರು. ನವಲಗುಂದದ ಬ್ರಾಹ್ಮಣರು ಮನೆ ಊಟಕ್ಕಿಂತ ಕೃಷ್ಣಭಟ್ಟನ ದಶಮಿ, ಅಂಗಡಿಗೆ ಹೋಗುವಂತಹದು. ಅವರು ಸಂಪ್ರದಾಯವನ್ನು ಮುರಿದು ದಶಮಿ ಅಂಗಡಿಯ ಪ್ರವೇಶ, ಅದರಲ್ಲಿ ಕೃಷ್ಣಗಡ್ಡಿಯನ್ನು ಉಪಯೋಗಿಸುವುದು. ಆ ಸಮುದಾಯದಲ್ಲಿ ಆಹಾರದ ಕ್ರಮದಲ್ಲಿನ ವ್ಯತ್ಯಾಸವನ್ನು ಗುರುತಿಸಲಿಕ್ಕೆ ಸಾಧ್ಯವಾಗಿದೆ. ಹೊಟಲಿನಲ್ಲಿ ಚಹವನ್ನು ಸೇವಿಸದವರು, ಕದ್ದು ಮುಚ್ಚಿ ಚಹವನ್ನು ಸೇವಿಸಿ ತಮ್ಮ ನಾಲಿಗೆಯ ಚಪಲವನ್ನು ತೀರಿಸಿಕೊಳ್ಳುವಲ್ಲಿ ಮುಂದಾದರು.

ಚಕ್ಕಡಿ, ಕುದರೆ, ಮೂಲಕವೇ ತಮ್ಮ ಸಂಪರ್ಕ ಸಾಧನವನ್ನಾಗಿ ಮಾಡಿಕೊಂಡ ನವಲಗುಂದದ, ಜನರಲ್ಲಿ ಕ್ರಮೇಣ ಹುಬ್ಬಳ್ಳಿ ಧಾರವಾಡದ ಸಂಪರ್ಕದಿಂದಾಗಿ ಸಂಪರ್ಕ ಸಾಧನಗಳಲ್ಲಿ ಸ್ವಲ್ಪ ಮಟ್ಟಿಗೆ ಬದಲಾವಣೆ ಪಡೆದುಕೊಂಡಿತು. ಚಿಕ್ಕ ಮಕ್ಕಳಿಗೆ ಬೈಸಿಕಲ್‌ನ್ನು ಕೊಡಸಲಿಕ್ಕೆ ಶುರು ಮಾಡಿದರು. ಚಕ್ಕಡಿ ಬಿಟ್ಟು ಟಾಂಗಗಳು ಬಳಕೆಯು ಹೆಚ್ಚಾಯಿತು. ಕ್ರಮೇಣ ಒಂದು ಊರಿಂದ ಇನ್ನೊಂದು ಊರಿಗೆ ಹೋಗುವಲ್ಲಿ ಮಾಟಾರುಗಳು ಪ್ರಾರಂಭವಾದವು. ಈ ಕಾದಂಬರಿಯ ಆರಂಭದಲ್ಲಿ ಕುದರೆ ಸವಾರಿನಿಂದ ಕಮಲ ಪಂತನ ಆಗಮವಾದರೆ ಕಾದಂಬರಿಯ ಕೊನೆ ಕೊನೆಗೆ ಮೋಟಾರುಗಾಡಿಯ ಮೂಲಕ ಧಾರವಾಡದಿಂದ ಇಳದ ಕೇಶವಾ, ಈ ಪ್ರಸಂಗವನ್ನು ಗಮನಿಸಿದಾಗ ಒಂದನೇ ತಲೆಮಾರಿನಿಂದ ಮೂರನೇ ತಲೆಮಾರಿನ ವರೆಗೂ ಸಂಪರ್ಕ ಸಾಧನಗಳಲ್ಲಾದ ಬದಲಾವಣೆಯನ್ನು ಕಂಡುಕೊಳ್ಳಲಾಗಿದೆ. ಕುದರೆ ಸವಾರಿ ಕಡಿಮೆಯಾಗಿ ಸೈಕಲ್, ಮೋಟಾರು, ಟಾಂಗಗಳ ಬಳಕೆಯು ದಿನನಿತ್ಯ ಹೆಚ್ಚಾಗಲಿಕ್ಕೆ ಹತ್ತಿದವು. ನಗರೀಕರಣ ಛಾಯೇ ನವಲಗುಂದದ ಮೇಲೆ ಆಗಲಿಕ್ಕೆ ಹತ್ತಿದವುದನ್ನು ಗಮನಿಸಬಹುದಾಗಿದೆ.

ಇಡೀ ಪಂತದ ಮನೆಯ ಆರ್ಥಿಕ ಸ್ಥಿತಿಯು ನಿಂತಿರುವುದು ಹೊಲಗಳ ಮೇಲೆ ದುಡಿಯು ಕೈಗಳು ಕಡಿಮೆಯಾಗಿ ಉಣ್ಣುವ ಬಾಯಿಗಳು ಹೆಚ್ಚಾದಾಗ ವಾಸುದೇವಚಾರ್ಯರಿಗೆ ಹೆಚ್ಚಿನ ಜವಾಬ್ದಾರಿಯನ್ನು ನಿಭಾಯಿಸಲಿಕ್ಕೆ ಆಗದೇ ಕೆಲವೊಮ್ಮೆ ಮನೆಯಲ್ಲಿ ಕುರುಕ್ಷೇತ್ರಗಳು ಆಗಗ ಸಂಭವಿಸುತ್ತಿದ್ದವು. ಎರಡು

ವರ್ಷ ಮಳೆ ಬಾರದ ಕಾರಣ ಹೊಲಗಳ ಕೊರು, ಲಾವಣಿ ದುಡ್ಡು ಕೈಗೆ ಸಿಗದೇ, ರೈತನಾದ ಮಹಾದೇವಪ್ಪ ಲಾವಣಿ ದುಡ್ಡು ಕೊಡದೇ ಬಹಳ ರೊಸದಿಂದ "ಹಾರೋವರ ನೀವು ಕುಂತ ತಿಂತೀರಿ"[೮] ಎಂದು ನುಡಿದನು. ರೈತರು ಭೂಒಡೆಯನಿಗೆ ವಿಧಯಕ ನಾಗಿರದೇ ಉದ್ದಟತನ, ಅಧಿಕ ಪ್ರಸಂಗತನ ಮಾತುಗಳು ಕೆಳವರ್ಗದ ಜನರಲ್ಲಿ ಆಡಿದ್ದನ್ನು ಗಮನಿಸಿದಾಗ ರೈತರ ಗುಣಸ್ವಭಾವದಲ್ಲಿದ ಪ್ರತಿಭಟನಾ ಸ್ವರೂಪವು ಆಗಿನ ಕಾಲದಲ್ಲಾದ ಒಂದು ಬಗೆಯ ಸ್ಥಿತ್ಯಂತರವೆನ್ನಬಹುದಾಗಿದೆ.

ಹೀಗೆ ಲಾವಣಿಯಿಂದಾಗಿ ಆಚಾರ್ಯರಲ್ಲಿ ಅಸಮಾಧಾನ ಅತೃಪ್ತಿ ಉಂಟಾಯಿತು. ಏಕೆಂದರೆ ಇದುವರೆಗೂ ಹೊಲದ ಎಲ್ಲಾ ಕೆಲಸವನ್ನು ವೆಂಕಟಿ ನೋಡುಕೊಳ್ಳುತ್ತಿದ್ದ, ಆದರೆ ಅವನ ಸಾವು ಪಂತರ ಮನೆತನವು ಅಸ್ತವ್ಯಸ್ತಕ್ಕ ಕಾರಣವಾಯಿತು ವೆನ್ನಬಹುದು. ಈತನ ಕೊರತೆಯಿಂದಾಗಿ ತುಂಬಿದ ಮನೆಯು ಅರಕಳಿ ಆಯಿತು. ಆ ಅವಿಭಕ್ತ ಕುಟುಂಬದ ಯಜಮಾನಿಕೆ ಯಾವಗಲಿಂದಲೂ ವಾಸುದೇವ ಚಾರ್ಯರದು, ಇದ್ದರೂ, ಅದರ ಯಜಮಾನಿಕೆ ನಿಭಾಸದೊರಳಗ ವೆಂಕಣ್ಣನದು ಆನಿಬಲ ಆಗಿತ್ತು. ಊರಾಗಿನ ಅನೇಕ ಜನರನ್ನು ಆಕರ್ಷಿಸಿದ್ದ ತಿಂಗಳ ತಿಂಗಳ ಹೊರಗಿನ ಉತ್ಪನ್ನಾ ತರುವುದು, ಅಣ್ಣಿಗೇರಿ ಯಮನೂರು ಕೋರಪಾಲ, ಹೊಲಗಳ ರೈತರ ಮ್ಯಾಲ ಅವನ ಭಜನೆ, ವರ್ಷಪಾಲು ತಂದು ಮನಿಗೆ ಹಚ್ಚುವುದು ಇಂತಹ ಮನೆಯ ಮುಕ್ಕಾಲು ಪಾಲು ಕೆಲಸವನ್ನು ನಿಭಾಯಿಸುತ್ತಿದ್ದವನು ಇಲ್ಲವಾದಗ ಆ ಮನೆಯು ಜವಬ್ದಾರಿಯ ಕೆಲಸಗಳಲ್ಲಾದ ವ್ಯತ್ಯಾಸಗಳನ್ನು ಸರಿದೂಗಿಸುವಲ್ಲಿ ವಾಸುದೇವಚಾರ್ಯರ ಶತಪ್ರಯತ್ನಗಳು ಹಾಗೆ ಸಾಗಿದ್ದವು. ಈ ಜವಾಬ್ದಾರಿಯಿಂದ ಆಚಾರ್ಯರಿಗೆ ಹಣೆ ಮ್ಯಾಲ ಮೊದಲೇ ಪದೋದಿತ ಹದಿನಾರು ಗೆರೆ ಮೂಡಿರುತ್ತಿದ್ದವು. ಈಗ ವೆಂಕಣ್ಣಾ ಸತ್ತಮ್ಯಾಲೆ ಅವು ಇಪ್ಪತ್ತು ಗೆರೆಯಾಗಿದ್ದವು.

ಮಡಿಮ್ಯೆಲಿಗೆ, ಸಂಧ್ಯವಂದನೆ, ವಾಯುಸ್ತುತಿ, ಏನೂ ಬರುವುದಿಲ್ಲವೆಂದು ಅಂಬಕ್ಕನು ನಾರಾಯಣನನ್ನು ಯಾವಾಗಲೂ ಬೈಗುಳಗಳ ಸುರು ಮಳೆಯನ್ನು ಸುರುಸುತ್ತಿರುವಳು. ಆದರೆ ಅದೇ ನಾರಾಯಣ ಪಟಹಾರಿಸಿ ಬೆಳ್ಳಿ ನಾಣ್ಯವನ್ನು ಪಡೆದುಕೊಂಡು ಮೆರವಣಿಗೆಯಿಂದ ಮನೆಗೆ ಬಂದಾಗ ಅವನಿಗೆ ದೃಷ್ಟಿಯನ್ನು ತೆಗೆಯುವಲ್ಲಿ ಮುಂದಾಗುತ್ತಾಳೆ. ಹಳೇ ಪೀಳಿಗೆಯಲ್ಲಿಯೂ ಕೂಡ ದ್ವೇಷಗಳ ಮನೆಮಾಡಿ ಕೊಂಡಿರಲಿಲ್ಲ. ನಾರಾಯಣನ್ನು ಪ್ರಿತಿಸುವ ವಾತ್ಸಲ್ಯದ ಕರುಣಾಮಯಿಯಾಗಿ ಅಂಬಕ್ಕ ಗೋಚರಿಸುತ್ತಾಳೆ.

ಅದೇ ಅಂಬಕ್ಕನು, ನಾರಾಯಣ ಅಂತರ್‌ಜಾತಿ ವಿವಾಹವಾದಾಗ ನೋಡುವ ಬಗೆ ಈ ರೀತಿಯಾಗಿತ್ತು.

"ಅವ್ವ ನನಗೂ ಹಸಿವಿ ಆಗೇದ ನಾನು ಇಲ್ಲೇ ಊಟಮಾಡಿ ಬಿಡ್ತೇನಿ" ಎನ್ನುತ ಒಂದು ಊಟದ ಎಲಿತಕ್ಕೊಂಡು ಬೋಧನ ಬಳಿಗೆ ಕೂಡ್ರಲು ಬಂದ... ಅಂಬಕ್ಕ ಧಾವಿಸಿ ಬಂದು.

"ನಿನಗೆ ಇಲ್ಲೇ ಬ್ಯಾಡ ಅಲ್ಲೇ ಹಿತ್ತಲದಾಗ ಹಾಕ್ತೇನಿ ಬಾ... ರುಕುಮಾ ಒಬ್ಬಾಕೀನ ಕೂತಿ ರತ್ನಾಳ ಆಕಿ ಜೋಡಿ ಹರಟೀ ಹೊಡಕೋತ ಉಂಡೀಯಂತ ಬಾ" ಎನ್ನುತ್ತಾ ನಾರಾಯಣ ಊಟದೆಲೆಯನ್ನು ಹಿತ್ತಲಿನಲ್ಲಿ ಹಾಕಿದಳು.

“ರುಕುಮಾ... ನಾರಾಯಣನ ಯಲೀ ನೀನ ತಗೆದು ಬಿಡು, ಹಂಗ ಅವನ ತಂಬಗೀ ಥಾಲೀನೂ ತೊಳೆದಿಟ್ಟಬೀಡು... ನಾ ಆಮ್ಯಾಲೇ ನೀರು ಹಾಕಿಕೊಂಡು ಒಳಗೆ ತೊಗೋತೇನಿ,”[೯] ಎಂದಳು.

ಹೀಗೆ ನಾರಾಯಣನು ನಾಟಕದ ಹುಡಗಿ ಮೈನಾಳನ್ನು ಮದುವೆಯಾದ ಮೇಲೆ ಮೊದಲಿನ ನಾರಾಯಣ ನಾಗಿರಲಿಲ್ಲ. ಇವನು ಪಂತರ ಮನಿಗೆ ಏನೋ ಒಂದು ರೀತಿಯ ಮೈಲಿಗೆ ನಾರಾಯಣನಾಗಿ ಕಾಣಿಸಿಕೊಳ್ಳತೊಡಗಿದ.

ಅದೇರೀತಿ ನಾರಾಯಣ ಕಟ್ಟುಮಸ್ತಾಗಿ ಬೆಳದು, ಪರಾಕ್ರಮೀಯಾಗಿದ್ದ, ಉದ್ದನೆಯ ಮೈಕಟ್ಟು ತುಸು ತಳ್ಳಗೆನೆ ಆದರೂ ಉಕ್ಕಿನ ಹುರಿಯಂತಿರುವ ಬಿಗಿದ ಕೈಕಾಲು, ಆ ವರ್ಷ ಊರಿಗೆ ಊರೇ ಆಶ್ಚರ್ಯ ಪಡುವಂತ ಕೆಲಸ ನಾರಾಯಣ ಮಾಡುವನು. ಹತ್ತು ಹದಿನೈದುವರ್ಷದ ಹಿಂದೆ ಬರಮನಿಂದ ಹಾರಿ ಸಲ್ಪಟ್ಟ ಮಠದಪಟ, ಕಾರಹುಣಿವಿ ಮುಂದ ನಾರಾಯಣ ಮಠದ ಪಟಹಾರಿಸಿ ಪರಾಕ್ರಮ ಮೆರೆಯುತ್ತಾನೆ. ಈತನ ಪರಾಕ್ರಮ ಕಟ್ಟಮಸ್ತದೇಹ ಊರಿನ ಜನರಿಂದ ಸಂಶಯದ ಗಾಳಮಾತುಗಳು ಬರುತ್ತವೆ. ಇವನು ಬ್ರಾಹ್ಮಣರಿಗೆ ಹುಟ್ಟಿದ ಹುಡಗನಲ್ಲ. ಬ್ಯಾನಿ ನರಪೇತಲ ತಿಮ್ಮಪ್ಪನ ಸಂತಾನ ಅಲ್ಲ. ನಿಯೋಗದ ಅಂತ ಗೊಣಗುತ್ತಿದ್ದರು. ಅಂಬಕ್ಕನು ಸಹಿತ ಇವನನ್ನು ಬ್ರಾಹ್ಮಣದವನಲ್ಲವೆಂಬುದನ್ನು ಹೇಳುವರೀತಿ ಅವಳ ಮಾತಿನಲ್ಲೇ ಗ್ರಹಿಸಬಹುದು.

“ಇದು ಆ ಬ್ಯಾನಿ ನರಪೇತಲ ತಿಮ್ಮಪ್ಪನ ಸಂತಾಗ ಅಲ್ಲ ಅಲ್ಲ ಸರಿ... ಇದು ನಿಯೋಗದ್ದೊ ಏನು?”[೧೦]

ಮುಟ್ಟಿಗಿಟ್ಟಿಯೇ ನಿನ್ನ ಸುಡ್ಲಿ... ಯಾರ ಯಾರನ ಮುಟ್ಟಿಸಿಕೊಂಡು ಬಂದರತೀಯೋ ಏನೋ ಅಲ್ಲೆ ಒಲಿ ಮ್ಯಾಲೆ ಹಾಲು ಕಾಯಿಸಿ ಇಟ್ಟೆನಿ ಕುಡಿ... ಹ್ಯಾಂಗ ಹಂಗ ಹಂಗ ಧುಂಡಸೀ ವಾಘು ಆಗ್ಯನ... ಪರದೇಶಿ ಖೋಡಿನ್ನತಂದು.”[೧೧]

ನಿನ್ನೆ ಮೊನ್ನೆವರಿಗೆ ತನ್ನೆದುರೇ ಬೆಳೆದ ಹುಡಗ ನಾರಾಯಣ ಇವನೇ ಏನ ಎಂದ ಆಶ್ಚರ್ಯ ಪಡುತ್ತಾ “ಯವ ಯವ್ವ ಹಾರೋರದಲ್ಲಿ ತಗೀ ಇದು.” ಎಂದು ತನ್ನಷ್ಟಕ್ಕೆ ಉದ್ಗಾರ ತೆಗೆದಳು.

ಹೀಗೆ ನಿಯೋಗದ ನಾರಾಯಣ ಎಂದು ಚೇಷ್ಟೆ ಮಾಡಿದರು. ಇದರಿಂದ ವಾಸುದೇವಚಾರ್ಯರು ತಮ್ಮ ಇಪ್ಪತೈದು ವರ್ಷದ ಹಿಂದಿನ ದಿನವನ್ನು ನೆನಸಿಕೊಂಡು ನಾರಾಯಣ ತಾಯಿ ಅಕ್ಕವ್ವ ಚಿಲಕವಾಡೆಕ ಅಕ್ಕವ್ವನ ಕಳಸಲಿಕ್ಕೆ ಅಂತ ಗಂಡ ತಿಮ್ಮಪ್ಪ ಬರದೇ ಪಂತರ ಮನಿಯೊಳಗಿನ ನಂಬಿಗಸ್ತನಾದ ಖಂಡೋಬ ಬಂದಿದ್ದ. ಇದರಿಂದ ವಾಸುದೇವಚಾರ್ಯರು ನಾರಾಯಣ ಖಂಡೋಬಗ ಹುಟ್ಟಿರೊ ಮಗನಿರಬೇಕು. ನಾನು ನಾರಾಯಣ ಮುಂಜವಿ ಮಾಡಿ ಮನೆಯಲ್ಲಿ ಇಟ್ಟುಕೊಂಡೆ ಎಂದು ತನ್ನ ಪೂಜೆಮಾಡುವ ಸಂದರ್ಭದಲ್ಲಿ ಮಡಿ ಮೈಲಿಗೆ ಆಯಿತು. ಎನ್ನುವ ಮಾತುಗಳು ನಾರಾಯಣ ಹುಟ್ಟಿನ ಗುಟ್ಟನ್ನು ಜನರ ಬಾಯಿಯಲ್ಲಿ ಆಡಿಕೊಳ್ಳವಂತೆಯಾಗಿ ಪಂತರ ಮನೆಯಲ್ಲಿ ಆಗಾಗ ಗೊಂದಲ ಸೃಷ್ಟಿಮಾಡುತ್ತಿದ್ದವು. ಹೀಗೆ ನಾರಾಯಣ

ಜನನದಲ್ಲಾದ ಆ ವ್ಯತ್ಯಾಸವನ್ನು ಸೂಕ್ಷ್ಮವಾಗಿ ವಾಸುದೇವ ಚಾರ್ಯರು ಅರಿತಿದ್ದರು. ಮುಂದೆ ಬೆಳೆದ ನಾರಾಯಣ ಎಲ್ಲರಿಗೂ ಬ್ರಾಹ್ಮಣ ಅಲ್ಲವೆನ್ನುವ ಸಂಶಯದ ಗಾಳಿ ಮಾತುಗಳು ಕೂಡ ಕೇಳಿ ಬರುತ್ತಿದ್ದವು. ಇದು ಆಕಾಲದ ತಿಪ್ಪಕ್ಕ ಬದುಕಿನಲ್ಲಾದ ಬದಲಾವಣೆವೆಂತಲೂ ಗ್ರಹಿಸಬಹುದಾಗಿದೆ. ಮುಂದೆ ನಾರಾಯಣ, ನಿಯೋಗ ನಾರಾಯಣ ಎಂದು ಕರೆಯುವಲ್ಲಿ ತಿಪ್ಪಕ್ಕ ಕಾರಣವಾಗಿ ಉಳಿಯುತ್ತಾಳೆ.

ಹಳ್ಳದ ಮಠದ ಅಪನೋರು ಬಾದಾಮಿಗೆ ಪಯಾಣ ಬೆಳೆಸಿದ್ದರು. ಆರೋಗ್ಯವನ್ನು ಸುಧಾರಿಸಿಕೊಳ್ಳಬೇಕೆಂದು ಅಲ್ಲೇ ಕೆಲವು ದಿನಗಳವರೆಗೂ ಉಳಿದುಕೊಂಡಿದ್ದರು. ವಾಸುದೇವಚಾರ್ಯರನ್ನು ಕರೆದುಕೊಂಡು ಬರಲಿಕ್ಕೆ ಹೇಳಿದ್ದರು. ಹಳ್ಳದ ಮಠದ ಅಪನೋರಿಗೆ ಮತ್ತು ವಾಸುದೇವಚಾರ್ಯರಿಗೆ ಮೊದಲಿನಿಂದಲೂ ಆತ್ಮೀಯ ಸ್ನೇಹದವರಾಗಿದ್ದರು. ಇವರು ಆವಾಗ ಔಷದೋಪಚಾರ ಮಾಡಲಿಕ್ಕೆ ಅಂತ ಮಠಕ್ಕೆ ಹೋಗುವ ರೂಡಿ ಇಟ್ಟುಕೊಂಡಿದ್ದರು. ಮಠದ ಅಪನೋರು ಊರಿಗೆ ಹೋದ ಮೇಲೆ ಹುಚ್ಚನ ಕಡಿಂದ ವಾಸುದೇವ ಚಾರ್ಯರ ಕರೆದು ಕೊಂಡು ಬರಲು ಹೇಳಿ ಕಳಿಸಿದ್ದರು. ಹುಚ್ಚ್ಯಾ ಬಂದು.

"ಅಪನೋರು ಬೇಸಿ ಅದಾರ್ರಿ... ನಿಮ್ಮನ್ನ ಬಾಳನೆನಸಾಕ ಹತ್ಯಾರು... ಪ್ರಕೃತಿ ಒಮ್ಮಹಾಂಗ ಒಮ್ಮೆಹಿಂಗ ಹಾಂಗೂ ಹೀಂಗ ಇರತೈತರಿ ಅಲ್ಲ ನಾಲ್ಕೈದು ಮಂದಿ ನಾಮೇದ ವೈದ್ಯರು ಅದಾರ... ಅವರ ಕೂಡ ಮಾತಾಡಿ ಏನು ಹೇಂಗ ಅಂತ ವಿಚಾರ ಮಾಡಿ ನೀವೂ ಆಟ ನೋಡಿದರ ಆದೀತೇನೂ ಅಂತ ಊರ ಹೀರೇರು ಅಂದರ್ರೀ... ಅಪನೂರು ಅಂತೂ ದಿವಸಕ್ಕೆ ಹತ್ತಾಸರೇ ನಿಮ್ಮ ಹೆಸರ ತಗಿತಾರ ಅದಕ್ಕೆ ಮತ್ತು ಬಾದಾಮಿ ಊರಾಗ ಬ್ರಾಹ್ಮಣರ ಮನ್ಯಾಗ ನಿಮ್ಮ ಊಟ ಉಡಗಿ, ಪೂಜಾ ಪುನಸ್ಕಾರದ್ದ ವ್ಯವಸ್ಥಾಮಾಡತೇವು... ಮತ್ತು ನೀವು ಆಗಲಿ ಅಂದರ ಎರಡು ದಿವಸ ನಿಂತರೂ ಚಿಂತಿಲ್ಲ. ನಿಮ್ಮ ಕುಟ ಕರಕೊಂಡು ಬಂದು ಬಿಡ್ರಿ"[೨] ಅಂದರ್ರೀ ವಾಸುದೇವಚಾರ್ಯರಿಗೆ ಹುಚ್ಯಾ ಈ ರೀತಿ ನುಡಿದನು. ಮುಂದೆ ವಾಸುದೇವಚಾರ್ಯರನ್ನು ತುಳಿಸಕ್ಕ ಹೋಗಲಿಕ್ಕೆ ಅನವು ಮಾಡಿ ಕೊಡುತ್ತಾಳೆ ಇಲ್ಲಿ ನವಲಗುಂದ ಮಂದಿನ್ನಾ ಹಣಮೂ ಸಂಭಾಳಸ್ತಾನ ಎಂದು, ಬಾದಮಿಗೆ ಅಪನೋರ ಬಳಿಗೆ ಹೋಗಲು ಅಚಾರ್ಯರಿಗೆ, ಹೇಳುತ್ತಾಳೆ. ವಿಚಾರಮಾಡಿದ ಆಚಾರ್ಯರು, ಹೊರಡಲು ಸಿದ್ಧರಾಗುತ್ತಾರೆ. ಇಲ್ಲಿ ಒಬ್ಬ ಬ್ರಾಹ್ಮಣನು ಒಂದು ಲಿಂಗಾಯತ ಮಠಕ್ಕೆ ಹೋಗುವುದು ಅಷ್ಟ ಸಾಧ್ಯವಾದ ಮಾತು ಆಗಿರಲಿಲ್ಲ. ಅದರಲ್ಲಿ ವೈದಿಕ ಬ್ರಾಹ್ಮಣನಾದವನು ಬಾದಾಮಿ ಹೋಗಿ ಅಪನೋರು ಚಿಕಿತ್ಸೆ ಕೊಡುವುದು, ಅಲ್ಲೇ ವೈದ್ಯರೇ ಇಲ್ಲನೂವೆನ್ನುವ ಮಾತುಗಳು ಸಹಜವಾಗಿ ಹಳ್ಳಿ ಮಠದ ಉಳಿದ ಮಂದಿ ''ಇದು ಒಳ್ಳೆ ಬೇಸಿ ವ್ಯಾಪಾರಪ... ಬಾದಾಮಿ ಬಾಗಲಿ ಕೋಟ್ಯಾಗ ಏನ ವೈದ್ಯರ ಇಲ್ಲೋ?..... ಏನ ಅಲ್ಲಿ ಆಗಸುದ್ದೆ ನಾಟೂದುಲ್ಲೋ? ನಮ್ಮ ಮಂದ್ಯಾಗ ಏನ ವೈದ್ಯರ ಕಡಿಮಿ ಅದಾರೋ?..... ಅಲ್ಲಿ ಮಠ ಈ ಹಾರೋರನ ಕರೆಸಗೊಬೇಕಂದರ ಇಲ್ಲಿದ್ದಾಗೇನೋ ಮುಂಚಿನ ತೋಟ್ಟು ಇದ್ದವರು ಅಗಲಿ ಅಂದ್ರ ಬಾದಾಮಿಗೂ ಇವರ ಬೇಕಂದ್ರ..... ಛೆ... ಇದು ಗೈರು ಅತು" ಬಿಡು ಎಂದರು.

ಊರಗಿನ ಬ್ರಹ್ಮವೃಂದ ''ತಪ್ಪಾ ಹುಟ್ಯಾರಿ.. ಬ್ರಾಂಬ್ರ ಒಳಗ ತಪ್ಪಾ ಹುಟ್ಯಾರ... ಆಲಿಂಗಾಯ ಸ್ವಾಮಿ ಬೆನ್ನಹತ್ತಿ ಎಲ್ಲಿ ಬೇಕಲ್ಲಿ ಹೋಗತಾರಂದರ ಇಲ್ಲೆ ಇವರಮ್ಯಾಲ ನೆಚ್ಚಿಗೊಂಡ ಕೂತ ಮಂದೆಲ್ಲ ಎಲ್ಲಿ ಹೋಗಬೇಕು.''[೧೩] ಎಂದು ಚುಚ್ಚಿನುಡಿದರು.

ಈ ಮೇಲಿನ ಮಾತುಗಳು ಜನರ ಹಿಡಿತ ತಪ್ಪಿ ಆಡಿದ ಮಾತುಗಳಾಗಿದ್ದವು. ಮಂದಿನು ಸಣ್ಣರಾಗಲಿಕ್ಕೆ ಹತ್ತಿದ್ದರು. ಏಕೆಂದರೆ ಗೌರವಸ್ಥ ಕುಟುಂಬದ ಬಗ್ಗೆ ವಾಸುದೇವ ಚಾರ್ಯರಿಗೆ ಅಗೌರವದಿಂದ ಆಡಿದ ನುಡಿಗಳಾಗಿದ್ದವು. ಒಬ್ಬ ಬ್ರಾಹ್ಮಣನು ಲಿಂಗಾಯತ ಮಠಕ್ಕೆ ಹೋಗುವುದು ಆಗಿನ ಕಾಲದಲ್ಲಾದ ಒಂದು ಸ್ಥಿತ್ಯಂತರವೆನ್ನವುದು ಸ್ಪಷ್ಟವಾಗುತ್ತದೆ. ವೈದಿಕ ವೃತ್ತಿಯಲ್ಲಿರುವರು ಮಡಿ ಮೈಲಿಗೆಯವರು ಬಾದಾಮಿ ಹೋಗಿ ಅಪನೋರಿಗೆ ವೈದ್ಯ ಪರೀಕ್ಷ ಮಾಡುವುದೆಂದರೆ ಇಲ್ಲಿ ನಮ್ಮ ಲಿಂಗಾಯತದಲ್ಲಿ ಯಾರು ವೈದ್ಯರು ಬಾದಾಯಿಯಲ್ಲಿ ಸಿಗೋದಿಲ್ಲವೆನೊ ಎನ್ನುವ ವಾಸ್ತವದ ಸ್ಥಿತಿಯನ್ನು ಹೇಳಿದರೂ ವಾಸ್ತವದಲ್ಲಾದ, ಸ್ಥಿತ್ಯಂತರವೆನ್ನಬಹುದು. ಜನರ ಮಾತುಕತೆ, ಅವರ ವರ್ತನೆ, ಸ್ಥಾನ ಮಾನದಲ್ಲಾದ ಬದಲಾವಣೆಯ ಗಾಳಿ ಬೀಸಿದ್ದು ಕಾಣಬಹುದಾಗಿದೆ. ಮತ್ತು ಒಂದು ವರ್ಗ ಸೌಹಾರ್ದತೆಯಿಂದ ಇರುವುದು ನೋಡಬಹುದಾಗಿದೆ.

ಬೋಧರಾಯ ವ್ಯವಸಾಯ ಮಾಡಿಸುವಲ್ಲಿ ಅದರಲ್ಲಿ ಹತ್ತಿ ಕೀಳುವ ಕಲೆಯಲ್ಲಿ ನಿಸ್ಸಿಮನಾಗಿದ್ದನು. ಹತ್ತಿ ಸುಗ್ಗಿಯೊಳಗೆ ಕರದಂಟು ತಿನ್ನುವ ಮೋಹ ಹೆಚ್ಚಾಗಿತ್ತು. ಅದರಂತೆ ಭೋಧರಾಯನ ಮನಸ್ಸು ಸ್ಥಿಮಿತವಿರಲಿಲ್ಲ. ಹೊಲಕ್ಕೆ ಬಂದ ಕೂಲಿ ಹೆಣ್ಣಾಳುಗಳ ಜೊತೆ ಕುಚೇಷ್ಠ ಅಸಭ್ಯವಾಗಿ ವರ್ತಿಸುತ್ತಿದ್ದ. ಇಡೀ ಊರಿನಲ್ಲಿ ಇವರ ವರ್ತನೆಯ ಬಗ್ಗೆ ಎಲ್ಲರೂ ಆಡಿಕೊಳ್ಳುವಂತೆ ಇತ್ತು. ಆದರೆ ಇದ್ದಕ್ಕಿದ್ದಂತೆ ಅದೇನು ಪ್ರೇರಣೆಯಾಯಿತೋ ಏನು ಗುಡಿಸಾಗರ ಹೊಂಡದಿಂದ ಎದ್ದು ಬಂದ ಮೇಲೆ ಅವನಲ್ಲಿ ಪ್ರಚಂಡ ಧರ್ಮಜಾಗೃತಿ ಉಂಟಾಗಿ ಈಗ ಅವನು ಬೋಧರಾಯದಿಂದ ಬೋಧಚಾರ್ಯರಾಗಿ ಪರಿವರ್ತಿತನಾಗಿದ್ದನು.

ನಿತ್ಯ ಮಡಿ, ಮೈಲಿಗಿ, ಏಕಾದಶಿ ವೃದ್ಧರ ಉಪವಾಸ ಚಂಡಕಿ, ಮೃತಿಕಾ ಅಂಗಾರ, ಆಕ್ಷಂತಿ ಇವಲ್ಲದೇ ಊರಾಗ ಎಲ್ಲೆ ಪುರಾಣ ಪುಣ್ಯಕಥೆ, ಹರಿಕೀರ್ತನೆ ಭಜನೆಗಳು ನಡೆದಲ್ಲಿ ಹೋಗುವುದು. ಮಠದ ಮಾತು ಬಂದಲ್ಲೆ ಧರ್ಮ ಸೂಕ್ಷ್ಮಗಳ ಚರ್ಚೆ ನಡೆದಲ್ಲೆ ಬೋಧರಾಚಾರ್ಯರ ಅಭಿಪ್ರಾಯಕ್ಕೆ ಇಂಬು ಇರುತ್ತಿತ್ತು. ಪರಿವರ್ತಿತವಾದ ಬೋಧರಾಯರ ಬಗ್ಗೆ ವಾಸುದೇವಚಾರ್ಯರಿಗೆ ತುಳಸಕ್ಕ ನುಡಿದ ನುಡಿಗಳ ಈ ರೀತಿಯಾಗಿತ್ತು.

''ನಮ್ಮ ಹಿರಿಯ ಮಗ ಬೋಧನ ಮನಸ್ಸು ಈಗ ದೇವರ ಕಡೇ ತಿರುಗೇದ ಅವನೂ ಹಾದಿಗೆ ಬಂದಾಗ ಆತು. ಆಗ ಆಚಾರು ಇಷ್ಟು ದಿವಸ ಮನುಷ್ಯರ ಜೀವಾ ತಿಂತಿದ್ದ ಇನ್ನ ದೇವರ ಜೀವಾತಿಂತಾನ ಸೂಳೆಮಗ''[೧೪] ಎಂದು ಮುಖ ಕಿವುಚಿದರು. ಹೀಗೆ ಬೋಧನಲ್ಲಾದ ಪರಿವರ್ತನೆ ತುಳಸಕ್ಕಾಗ ಸಂತಸತಂದಿತು. ಓದು ಬರಹ ಕಲಿತವನಾಗಿದ್ದು ಮುಂದೆ ಸ್ವಲ್ಪ ಇಂಗ್ಲೀಷ ಮಾತನಾಡಲು ಕಲಿತಿದ್ದನು.

ಧಾರವಾಡ ಶಿಕ್ಷಣಕ್ಕೆ ಹೋದ ಹುಡುಗರು ಅಲ್ಲಿನ ವಾತಾವರಣ ಮತ್ತು ಊಟದಲ್ಲಿದ್ದ ವ್ಯತ್ಯಾಸವನ್ನು ಆಚರ್ಯರಿಗೆ ಪತ್ರ ಬರೆದು ತಿಳಿಸುತ್ತಿದ್ದರು. ಖಾನಾವಳಿ ಗೋವಿಂದ ಮೊದಲಂಗ ಬೀಸಿ ನೀರು ಕೊಡುವುದಿಲ್ಲ. ನವಲಗುಂದದಲ್ಲಿ ರುಚಿ ರುಚಿಯಾದದ್ದನ್ನು ಉಂಡು ತಿಂದು ಬೆಳೆದ ಹುಡುಗರಿಗೆ ಅಲ್ಲಿನ ಧಾರವಾಡದ ಖಾನಾವಳಿ ಊಟಕ್ಕೆ ಹೊಂದಿಕೊಳ್ಳುವಲ್ಲಿ ಹಿಂಜರಿದು ತಮ್ಮ ನವಲಗುಂದಕ್ಕೆ ಬರಬೇಕೆಂದೆನಿಸಿದರೂ. ಆಚಾರ್ಯರ ಹೆದರಿಕೆಗೆ ಅಲ್ಲೆ ಉಳಿದುಕೊಳ್ಳುವರು. ಥಂಡಿ ಹವಾಕ್ಕಾ ಧೊತರ ಹಸಿ ಇರುತ್ತದೆ. ಗೋವಿಂದಪ್ಪನ ಖಾನಾವಳೀ ಒಳಗ ಅನ್ನ ಹಂಜಕಿ, ಬಕ್ರಿ ಬೆಂದಿರುದಿಲ್ಲ, ಅರಬಿಯಲ್ಲಾ ಮುಗಸ್ಸವಾಸನಿ, ಖೋಲಿ ಸೋರತದ ಹಂಗಾಗಿ ನೆಲ ಒದ್ದಿ, ಒದ್ದಿ, ಮುಂತಾದ ಅನೇಕ ರೀತಿಯಲ್ಲಿ ತಮ್ಮಗ ಒದಗಿದ ಸಮಸ್ಯೆಯನ್ನು ವಾಸುದೇವಾಚಾರ್ಯರಿಗೆ ಪತ್ರದ ಮೂಲಕ ತಿಳಿಸಿದರು. ನವಲಗುಂದಿಂದ ಹೋದವರಿಗೆ ಧಾರವಾಡ ಶಹರ ಜೀವನದ ವ್ಯಾತ್ಯಾಸವನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ಕಾಲರ ಬಂದದ್ದರಿಂದ ಶಾಲೆ ರಜೆಎಂದು ಹುಡುಗರು ನವಲಗುಂದಕ್ಕೆ ದೀಡರನೇ ಬಂದು ಇಳಿದರು. ಅಷ್ಟರಲ್ಲಿ ಹುಡುಗರು ಧಾರವಾಡದ ಶಹರ ಪರಿಸರಕ್ಕೆ ಪ್ಯಾಶನ್‌ಗೆ ರೂಢಿಯಾಗಿ ಹೋಗಿದ್ದರು. ಚಂಡಿಕೆ ಕಾಣಿಸಬಾರದೆಂದು ಅದನ್ನು ಮುಚ್ಚಾಲು ನಾಟಕೀಯವಾಗಿ ಉದ್ದನೆಯ ಕೂದಲನ್ನು ಬಿಟ್ಟಿದ್ದರು. ಆದರೆ ಸಂಪ್ರದಾಯದ ಆಚಾರ್ಯರು ಅವರನ್ನು ನೋಡಿ ''ಕೇಶವ? ನಿಮ್ಮನ್ನ ಧಾರವಾಡಕ್ಕೆ ಓದಲಿಕ್ಕೆ ಕಳಿಸೇನೋ..... ಹಿಂದಿನ ಚಂಡಿಕೆ ಮುಚ್ಚುವಷ್ಟು ಕೂದಲು ಬೆಳಸೀರಿ, ನಾಚಿಕೆ ಬರೋದಲ್ಲ?..... ಮೊದ್ಲ ಯಲ್ಲಾರೂ ಆ ಪಾತರದವರ ತಲೆ ಬೋಳಿಸಿಕೊಂಡು ಬ್ರಾಂಬ್ರ ಆಗರಿ''[೧೫] ಎಂದು ಕೋಪಿಸಿಕೊಂಡರು.

''ಧಾರವಾಡದಾಗ ನಗತಾರ...... ಮಸಿನ್‌ಕಟ್ಟ್ ಆರ ಮಾಡಿಸಿಕೊಂಬೋಣೇನು?''

ಕ್ಷಿಣಧನಿಯಲ್ಲಿ ಅಂಗಲಾಚುತ್ತಿರುವಾಗ, ಹಜಮರ ತಿಪ್ಪ್ಯಾಗ, ''ಮಶೀನೂ ಬ್ಯಾಡ..... ಕಟ್ಟಬ್ಯಾಡ.....

ಕತ್ತಿಲೇ ಕೇರಿ..... ಚಂಡಕೆ ಅಷ್ಟು ಜಾಗ ಬಿಟ್ಟು ಇಡಿ ತಲಿ ಬೋಳಿಸಿ ಒಗೀ,

ಸಾಲೀ ಕಲೀರ್‍ಯೋ ಅಂದರ ನಾಚು ಮಾಡತೀರಿ ನಾಚು.... ಲವಡಿ ಮಕ್ಕಳ''[೧೬]..... ಎಂದು ಆಚಾರ್ಯರರು ಹೇಳಿದರು. ಹೀಗೆ ಹುಡುಗರು ಮತ್ತೆ ಸಂಪ್ರದಾಯಕ್ಕೆ ಮಣಿದು ತಮ್ಮ ತಲೆ ಚಂಡಿಕಿ ಬಿಟ್ಟು ಬೋಳಿಸಿಕೊಂಡರು.

ಕಳೆದ ನಾಲ್ಕಾರು ವರ್ಷದಾಗ ನವಲಗುಂದದಲ್ಲಿ ವಾಸುದೇವಾಚಾರ್ಯರ ಮಕ್ಕಳನ್ನು ಧಾರವಾಡಕ್ಕೆ ಕಳಿಸಿದ್ದು ನೋಡಿ ನವಲಗುಂದದ ಹಿರಿಯರಲ್ಲಿ ತಮ್ಮ ಮಕ್ಕಳನ್ನ ಹೆಚ್ಚಿನ ಶಿಕ್ಷಣಕ್ಕೆ ದೊಡ್ಡ ದೊಡ್ಡ ಊರುಗಳಿಗೆ ಕಳಸಬೇಕೆನ್ನುವ ಜಾಗೃತಿ ಉಂಟಾಯಿತು. ಇದಕ್ಕೂ ಮೊದಲು ಕೂಡ ಆಗೊಮ್ಮೆ ಈಗೊಮ್ಮೆ ಒಬ್ಬಿಬ್ಬರು ಶಿಕ್ಷಣಕ್ಕೆಂದು ಹೊರಗೆ ಹೋಗಿದ್ದರು. ಅದರ ಪಂತರ ಮನೀ ಹುಡಗರು ಓದಲಿಕ್ಕೆಂದು ಹೋದಾಗಿನಿಂದ ಶಿಕ್ಷಣಾರ್ಥಿಗಳ ಸಂಖ್ಯೆ ಏರಿ ತೀವ್ರವಾದ ವೇಗವನ್ನು ಪಡಕೊಂಡಿತು. ಇದರಿಂದಾಗಿ

ಶಾಲಂಭಟ್ಟರು ತಮ್ಮ ಮಗನ್ನ ಬೆಳಗಾವಿಗೆ, ತಮ್ಮ ತಂಗಿ ಮನೀಗ ಕಳಿಸಿದರು. ಜೈನರ ಅಂತಪ್ಪ ತನ್ನ ಮಗ ಬುಜ್ಜ್ಯಾನ್ನ ಹುಬ್ಬಳ್ಳಿಗೆ ತನ್ನ ಷಡಕನ ಮನೀಗೆ ಕಳಿಸಿದ್ದ, ಶಿವರುದ್ರಮಪ್ಪನವರು ತಮ್ಮ ಮಗ ಪಾಲಾಕ್ಷಿನ್ನ ಧಾರವಾಡದಾಗ ತಮ್ಮ ಬೀಗರ ಮನ್ಯಾಗ ಬಿಟ್ಟಿದ್ದರು. ಜೋಳದ ಶಿವಶಂಕರ ಬಡಹುಡುಗನಾಗಿದ್ದರಿಂದ ಮುಲ್ಕಿ ಪರೀಕ್ಷೆ ತನಕ ತಯಾರಿಗಿದ್ದ ಹಳ್ಳದ ಮಠದ ಅಪನೋರ ಶಿಫಾರಸ್ಸಿನ ಮ್ಯಾಲ ಧಾರವಾಡದ ಒಂದು ಮಠದಾಗ ಫ್ರೀ ಬೋರ್ಡಿಂಗದ ವ್ಯವಸ್ಥೆ ಮಾಡಿ ಅವಗ ಶಿಕ್ಷಣಕ್ಕೊಂದು ದಾರಿ ಮಾಡಿಕೊಟ್ಟರು.

ಹೀಗೆ ಕೆಲವು ಓದಿ ಒಳ್ಳೆಯ ಕೆಲಸ ಮಾಡಿದರ, ಇನ್ನೂ ಕೆಲವರು ಕಾಮಶಾಸ್ತ್ರ ಕಲಿತವೆಂದು ಪಾಲಾಕ್ಷಿಯನ್ನು ಶಾಲೆ ಬಿಡಿಸಿ, ಮದುವೆಮಾಡಿ ಹೊಲ ಮನಿ ಕೆಲಸಕ್ಕೆ ಇರಲಿ ಎಂದು ಶಿವರುದ್ರಪ್ಪನವರು ಅವನ ಶಿಕ್ಷಣಕ್ಕೆ ಪೂರ್ಣವಿರಾಮ ನೀಡಿದರು. ಆದರೆ ಜೋಳದ ಶಿವಶಂಕರ ಒಳ್ಳೆಯ ಬುದ್ಧಿವಂತ ಹುಡುಗ, ಪ್ರತಿವರ್ಷ ಪರೀಕ್ಷೆಯಲ್ಲಿ ಮೊದಲ ಸ್ಥಾನ ಪಡೆಯುತ್ತಿದ್ದ ಭಾಷಣ, ಲೇಖನ ಸ್ಪರ್ಧೆಯಲ್ಲಿ ಮುಂದು ಇರುತ್ತಿದ್ದ. ಹೀಗೆ ಶಿಕ್ಷಣ ಪ್ರಸಾರದಿಂದಾಗಿ ಒಬ್ಬ ಹುಡುಗರು ಅಭ್ಯಾಸ ಮಾಡಿ ಜವಾಬ್ದಾರಿಯ ಕೆಲಸ ಮಾಡುವಲ್ಲಿ ಮುಂದಾದರು. ವಸಾಹತುಸಾಹಿಯ ಶಿಕ್ಷಣ ಪ್ರಸಾರದಿಂದಾಗಿ ನವಲಗುಂದ ಒಂದು ಚಿಕ್ಕಗ್ರಾಮವು ಒಳ್ಳೆಯ ಶಿಕ್ಷಣ ಪಡೆದ ಯುವಕರು ಸುಶಿಕ್ಷಿತ, ಜವಾಬ್ದಾರಿಯುತರಾಗಿ, ಜೊತೆಗೆ ದೇಶಭಕ್ತಿಗಾಗಿ ಚಳುವಳಿ ಕೈಗೊಳ್ಳುವಲ್ಲಿ ಜಾಗೃತ ಯುವಕರಾಗಲು ಈ ಶಿಕ್ಷಣ ನಾಂದಿಯಾಯಿತು.

ಹತ್ತಿ ಸುಗ್ಗಿಯಲ್ಲಿ ಹುಡುಗರು ಹತ್ತಿಯನ್ನು ಕಳುವಿನಿಂದ ತಂದು ಅಂಗಡಿಗೆ ಹಾಕುತ್ತಿದ್ದರು. ಅದರ ತೂಕದಷ್ಟ ಕರದಂಟು ತಿನ್ನುವ ರೂಢಿಬೆಳೆಸಿಕೊಂಡಿದ್ದರು. ಅದರಿಂದ ಅಂಗಡಿಯವನಿಗೆ ಸಾಕಷ್ಟು ಲಾಭವನ್ನು ಗಳಿಸಿಕೊಡುತ್ತಿದ್ದರು. ತಾವು ಕರದಂಟುರುಚಿ ಸೇವನೆಯಿಂದ ಮಜವನ್ನು ಅನುಭವಿಸಿ ಕಾಲ ತಳ್ಳುತ್ತಿದ್ದ ಹುಡುಗರಿಗೆ ಶಾಲೆಯಿಂದಾಗಿ ಇಂತಹ ರುಚಿಕರ ಕರದಂಟಿನಿಂದ ದೂರ ಉಳಿದದ್ದಲ್ಲದೆ ಅಂಗಡಿಯವನಿಗೆ ಲಾಭವು ಕಡಿಮೆಯಾಯಿತು. ಎಂದು ನಿರಾಶೆಯಿಂದ ತನ್ನ ಲಾಭ ನಷ್ಟದ ಬಗ್ಗೆ ಲೆಕ್ಕಾಚಾರ, ವ್ಯಾಪಾರದ ಸ್ಥಿತಿಯನ್ನು ಹೇಳುತ್ತಿದ್ದ. ಮಾಂತಪ್ಪನ ವ್ಯಾಪಾರವು ಕಡಿಮೆಯಾಯಿತು. ಮೊದಲಿನಂತೆ ಹುಡುಗರು ಹತ್ತಿ ಅಂಗಡಿಗೆ ಹೋಗದೇ ಶಾಲೆಗೆ ಹೋಗಲಿಕ್ಕೆ ಪ್ರಾರಂಭಿಸಿದರು. ಶಿಕ್ಷಣದ ಪ್ರಸಾರದಿಂದಾಗಿ ಮಾಂತಪ್ಪನ ಲಾಭಕ್ಕೆ ಪೆಟ್ಟುಬಿದ್ದಂತಾಗಿರುವುದು. ಶಿಕ್ಷಣದಿಂದಾದ ಒಂದು ಸ್ಥಿತ್ಯಂತರವೆಂದು ಗ್ರಹಿಸಲಾಗಿದೆ.

ಶಾಂತವಾಗಿದ್ದ ಧಾರವಾಡ ಪರಿಸರದ ಮೇಲೆ ಎಲ್ಲಿಂದಲೋ ರಾಜಕೀಯ ಹೋರಾಟಗಳು, ಚಳುವಳಿಗಳು ಗೋಲಿಬಾರಗಳು ಜಕ್ಕಣಿ ಬಾಯಿಯಲ್ಲಿನ ಸುತ್ತಮುತ್ತಲಿನ ವಾತಾವರಣವನ್ನು ಅಲ್ಲೋಲ ಕಲ್ಲೋಲವಾಗಿಸಿತು. 'ಗಾಂಧೀ ಮಹಾರಾಜ ಕೀ ಜೈ, ಮಹಾತ್ಮಗಾಂಧೀಜಿ ಕೀ ಜೈ, ಎಂದು ಘೋಷಣೆಗಳು ಕೂಗತೊಡಗಿದರು. ಜನ ಸಾಗರವು ಅಲೆ ಅಲೆಯಾಗಿ ಓಡಾಡುತ್ತಾ.

ಯಾಕ? ಗೋಳಿಬಾರ ನಡದಂತ,

ಎಷ್ಟು ಮಂದಿ ಸತ್ತಾರಂತ? ಕೇಳುತ್ತಲೆ

ಮಧ್ಯ ಮಧ್ಯದಲ್ಲೆ 'ಭಾರತ ಮಾತಾಕೀ ಜೈ'

'ಮಹತ್ಮಾ ಗಾಂಧೀಜಿ ಕೀ ಜೈ' ಎನ್ನುವ ಘೋಷಣೆಗಳು ನಾಡಭಕ್ತಿಯ ಕಿಚ್ಚನ್ನ ಎಬ್ಬಿಸಿದವು. ಗುಂಪಿನಲ್ಲಿ ಯಾರೋ ಜಕಣೀ ಬಾವೀ ಹತ್ತಿರ ಹೋಗ ಬ್ಯಾಡರೋ ಅಲ್ಲೆ ಗೋಳಿಬಾರ ಆಗೇದ' ಎಂದು ಕೂಗಿ ಕೊಂಡರು. ಕಾಂಗ್ರೆಸ್ಸಿನವರು ಗಡಂಗದ ಹೊರಗ ಪಿಕೆಟಂಗಿ ನಡೆಸಿ ಮಂದಿಗೆ ಸೆರೆ ಸಿಂದಿ ಕುಡಿಬ್ಯಾಡರೀ ಅಂತ ಹೇಳುವಾಗ ಪೌಜುದಾರ ಶಿವನಾಗಪ್ಪ ಮಂದಿಮ್ಯಾಗ ಗುಂಡು ಹಾರಸಿ ಕೊಂದಾನ ಎಂದು ಜಕಣೀ ಬಾವಿ ಕಥೆ ಕೇಳಿದ ಜನರು ದಂಗಾದರು. ಶಿವನಾಗಪ್ಪನ ಮೇಲೆ ಆಕ್ರೋಶ ಹೆಚ್ಚಾಗಿ 'ಶಿವನಾಗಪ್ಪನಿಗೆ ದಿಕ್ಕಾರ.''[೨] 'ಭಾರತ ಮಾತಾಕೀ ಜೈ', ಕೊಲೆಗಡುಕ ಪೌಜುಧಾರನಿಗೆ ಧಿಕ್ಕಾರ' ಎಂಬ ಘೋಷಣೆಗಳು ಮುಗಿಲು ಮುಟ್ಟಿದವು.

ಹೀಗೆ ರಾಜಕೀಯ ವಾತಾವರಣವು ಧಾರವಾಡ ನಗರದಲ್ಲಿ ಅಶಾಂತಿ ಎಬ್ಬಿಸಿ ಗೋಳಿ ಬಾರದಿಂದಾಗಿ ಹನ್ನೆರಡು ಜನರನ್ನು ಬಲಿತೆಗೆದು ಕೊಂಡಿತು. ಕಾಂಗ್ರೆಸಿನ ಯುವಕರ ತಂಡ ಬಲು ಹುರುಪಿನಲ್ಲಿ ದೇಶಭಕ್ತಿಯ ಪ್ರಚಾರದಲ್ಲಿ ತೊಡಗಿ ಕೊಂಡರು. ಗಾಂಧೀಜಿ, ಮತ್ತು ತಿಲಕರವರ ಆಗ ಮನದಿಂದಾಗಿ ಇನ್ನಷ್ಟು ಯುವಕರು ಕಾಂಗ್ರೆಸ್ ಸೇರಿಕೊಳ್ಳುವಂತೆಯಾಗಿ ಉತ್ಸಾಹ, ಆಸಕ್ತಿಯನ್ನು ಹೆಚ್ಚಿಸಿ ನಾಡಿನ ರಕ್ಷಣೆಗಾಗಿ ಮುಂದಾದರು. ರಾಮು ಕೂಡ ಅತಿ ಉತ್ಸಾಹದಿಂದ ಪಾಲ್ಗೊಂಡನು ಓದಿಗಿಂತ ಇದರಲ್ಲಿಯ ಅವನ ಆಸಕ್ತಿ ಇತ್ತು.

ಧಾರವಾಡ ಮತ್ತು ಹುಬ್ಬಳ್ಳಿ ಎರಡು ಶಹರಗಳು ಸೇರಿ ಸಣ್ಣಾಗಿ ನವಲಗುಂದವನ್ನು ಆಧುನಿಕ ಜಗತ್ತಿಗೆ ಆಕರ್ಷಿಣದವು. ಇದುವರೆಗೂ ಚಳುವಳಿ, ಗೋಲಿಬಾರ್, ಅವರ ಇವರ ಬಾಯಿಂದ ಕೇಳುತ್ತಿದ್ದ ನವಲಗುಂದ ಜನರು ಸ್ವತಃ ತಮ್ಮ ಮನೆಯ ಬಾಗಿಲಗೆ ಬಂದಂತಾಯಿತು. ಒಂದು ತಿಂಗಳದಲ್ಲಿ ನವಲಗುಂದದಾಗ ತಾಲೂಕ ಕಾಂಗ್ರೆಸ್ ಕಮೀಟಿಯ ಕಛೇರಿ ಪ್ರಾರಂಭವಾಯಿತು. ಸ್ವಲ್ಪ ದಿನದೊಳಗೆ ಸಾರ್ವಜನಿಕ ಜೀವನದ ರಾಜಕೀಯ ಪ್ರಪಂಚದ ಬೃಹತ ತೆರೆಗಳು ನವಲಗುಂದವನ್ನು ತನ್ನ ತೆಕ್ಕೆಯಲ್ಲಿ ಸೆಳದು ಕೊಂಡವು. ಪಾಲಾಕ್ಷಿ, ಆನಿಗುಂದಿ ಭೀಮಪ್ಪ, ರಾಮ ಮತ್ತು ಬುಜ್ಜ ಮುಂತಾದವರು ಕಾಂಗ್ರೆಸ್ ಸೇರಿದರು. ದೇಶಭಕ್ತರಾಗಿ ಹೋರಾಟಕ್ಕಿಳಿದರು. ರಾಮು ನಂತೂ ಪಂತರ ಮನೆಯ ವಾತಾವರಣವನ್ನೆ ಬದಲಾಯಿಸಿ ವಾಸುದೇವಚಾರ್ಯರ ನೆಮ್ಮದಿಗೆ ಭಂಗವನ್ನು ಉಂಟುಮಾಡಿದ.

ನವಲಗುಂದ ಬೆಣ್ಣೆಹಳ್ಳದಲ್ಲಿ ಕಾಂಗ್ರೆಸಿನವರು ಉಪ್ಪುಮಾಡತಾರಂತ ಅದರಲ್ಲಿ ರಾಮೂ ಕೂಡ ಪಾಲ್ಗೊಂಡಿದ್ದಾನೆಂದು ಅವನನ್ನ ಹಿಡಿಲಿಕ್ಕೆ ಪಂತರ ಮನೆಗೆ ಕಾವಲಾಗಿ ಪೋಲಿಸರು ಬಂದರು. ಇದನ್ನು

ನೋಡಿದ ಎಲ್ಲರೂ ಮೊದಲು ಗಾಬರಿಯಾದರು. ಸರಕಾರದವರು ಖಾಸಗಿ ಮಂದಿ ಉಪ್ಪು ಮಾಡಬಾರದಂತ ಕಾಯ್ದೆ ಮಾಡ್ಯಾರ ಎಂದು ನವಲಗುಂದದ ತುಂಬಾ ಸುದ್ದಿ ಶುರುವಾಯಿತು.

ಇಸ್ಮಾಯಿಲ್‌ಖಾನ್ ಬಂದನಂತ ಕೇಳಿ, ನವಲಗುಂದ ನಡುಕ ಹುಟ್ಟಿಸಿತು. ಹುಬ್ಬಳ್ಳಿ ಧಾರವಾಡದ ಕಾಂಗ್ರೆಸ್ ಮುಖಂಡರು ಬರುತ್ತಾಂತ, ಬೆಣ್ಣೆಹಳ್ಳದ ಉಪ್ಪು ನವಲಗುಂದ, ಶಾನವಾಡ ಮತ್ತು ಕಾಲವಾಡದಲ್ಲಿ ಜನರಿಗೆ ಉಪ್ಪು ಮಾಡಂತ, ಎರಡು ಗುಂಪು ಮಾಡಿ ನುಸುಕಿನಲ್ಲಿ ಗಾಂಧಿ ಟೊಪ್ಪಿಗೆ ಧರಿಸಿ ಉಪ್ಪು ಮಾರತರಂತ, ಹೀಗೆ ಅಂತ ಕಂತೆಗಳ ಸುದ್ದಿಗಳು ಜನರ ಬಾಯಿಂದ ಬಾಯಿಗೆ ಹರಿದಾಡಲಿಕ್ಕೆ ಹತ್ತಿದವು.

ಗಾಂಧೀ ಉಪ್ಪು... ಈ ದೇಶಕ್ಕಾ ಸ್ವತಂತ್ರತರೋ ಉಪ್ಪು... ಕೆಂಪು ಮೋತಿಯವರನ ಒದ್ದು ಓಡಿಸೋ ಉಪ್ಪು... ಇಷ್ಟ ಉಪ್ಪಿಗೆ ಎರಡು ಬಿಲ್ಲೆ... ಅಕ್ಕ, ಅಮ್ಮ ಉಪ್ಪು ತಗೋರಿ ಉಪ್ಪು...''[೧೮] ಯುವಕರ ಉತ್ಸಾಹ ಮೇರೆ ಮಿರಿತ್ತು. ಸ್ವತಂತ್ರ ಸೇನಾನಿಗಳಿಗೆ ಆರತಿ ಬೆಳಗಿ ಹಣೆಗೆ ಕುಂಕಮ ಇಟ್ಟು ಉಪ್ಪುಕೊಂಡು ಅವರಿಗೆ ಬೆಂಬಲ ನೀಡಿದ ನವಲಗುಂದದ ಸ್ತ್ರೀಯರು ಸಾಕಷ್ಟು. ಇನ್ನೂ ಕೆಲವರು ನಮಗೆ ಏಕೆ ಎಂದು ಮುಖ ತಿರುವಿ ಮನೆಯೊಳಗೆ ನಡೆದರು.

ನವಲಗುಂದದ ಪಕ್ಕ ಸಂಪ್ರದಾಯಸ್ಥ ಕುಟುಂಬದ ಅದರಲ್ಲಿ ಒಬ್ಬ ವಿಧವೆ ಮೊದಲ ಬಾರಿಗೆ ಹೊಸ್ತಿಲ ದಾಟಿ ಮಾಮಲೇದಾರರ ಕಛೇರಿಗೆ ದಾಳಿ ಮಾಡಿದ್ದು. ಒಂದು ಜಿಡ್ಡುಗಟ್ಟಿದ ಸಂಪ್ರದಾಯವನ್ನು ಮುರಿದು ಅದಕ್ಕೆ ಚಲನ ಜಿಲತೆಯಾಗಿ ಪಡೆದುಕೊಂಡಿದ್ದು ಈ ಅಂಬಕ್ಕನಿಂದಲೇ, ಒಂದು ಹೆಣ್ಣು ಮಾಮಲೆದಾರನಿಗೆ ಹಜಾಮರ ತಿಪ್ಯಾ, ಮನಿಗೆ ಯಾಕ ಬಂದಿಲ್ಲ? ನಾಲ್ಕು ದಿವಸಾತು ನನ್ನ ತಲೀ ಮಾಡಲಿಕ್ಕೆ ಬರವಲ್ಲ ನೋಡು'' ಎಂದು ತಕರಾರು ಕೊಟ್ಟಳು, ಮಾಮಲೇದಾರ ಅಂದರ ಮೊದಲ ಕಾಲದ ದೇಸಾಯಿ ಇದ್ದಂಗ, ಅಂದಮ್ಯಾಲೆ ಧರ್ಮ ಕರ್ಮ, ಜಾತಿ, ನೀತಿ, ಕಟ್ಟು ಪಾಡು ಯಲ್ಲಾ ಪದ್ಧತಿ ಪ್ರಕಾರ ನಡಕೊಂಡು ಬರಬೇಕೋ? ಬೇಡೋ? ಹಂಗ ನಡಸೋ ಜವಾಬ್ದಾರಿ ನಿಮ್ಮದು ಎಂದು ಮಾಮಲೇದಾರನಿಗೆ ಕೇಳಿದಳು. ಆಧುನಿಕತೆಯು ಯಾವತ್ತು ಸಾಂಪ್ರದಾಯಿಕ ಸಮಾಜಗಳನ್ನು ಹಿಂದುಳಿದದ್ದೆಂದು ಗತಕಾಲದಲ್ಲೇ ಬದುಕುತ್ತಿರುವಂತದು ಎಂದು ನೋಡುತ್ತದೆ. ಇಲ್ಲಿನ ಸಂಪ್ರದಾಯಗಳು ಬದಲಾಗಲು, ಸಮಾಜದಲ್ಲಿ ಬೇರು ಕಿತ್ತಿ ಸ್ಥಳಾಂತರಿಸಿ, ದಮನಿಸಿ, ನಿರ್ನಾಮ ಮಾಡುವ ಪ್ರಯತ್ನಗಳು ಅಭಿವೃದ್ಧಿ, ಮತ್ತು ಪ್ರಗತಿಯೇ ಕಾರಣವಾಗಿವೆ. ಒಂದು ಸಮುದಾಯದ ಸಂಪ್ರದಾಯಗಳು ಅವು ತಮ್ಮದೇ ಯಾವ ಪರಿಮಿತಿಯ ಒಳಗೆ ಮಾತ್ರ ಬದಲಾಗುತ್ತವೆ. ತಾವು ಬಯಸುವ ದಿಕ್ಕಿನಲ್ಲಿ ಕಡೆಗೆ ಬದಲಾಗುತ್ತವೆ. ಅದೇರೀತಿ ವಾಸುದೇವ ಚಾರ್ಯರು ತೀರದ ಬಳಿಕ ತುಳಸಕ್ಕೆ ತಲಿಗೂದಲ ತಗಿಸಿ ಮಡೀ ಮಾಡಿಸುವ ಬಗ್ಗೆ ವಿಚಾರ ವಿನಿಮಯ ಮಾಡಲಿಕ್ಕೆ ಹತ್ತಿದ್ದರು. ಪರಿಮಳ ಮತ್ತು ಶಾಂತ ಅಡ್ಡ ಬಂದು ಇನ್ನ ಈ ಹುಚ್ಚುಚ್ಚಾರ ಸಾಕು ಮಾಡರಿ, ಎಂದು ಹಟ ಹಿಡಿದರ, ಭೋದರಾಯ 'ನೀವು ಶಹರದ ಮಂದಿಗೆ ನಡಿತದ, ನಮ್ಮ ಸಣ್ಣ ಊರಾಗ

ಕಠಿಣ ಆಗತದ, ಶ್ರೀ ಮಠದ ಬಹಿಷ್ಕಾರ ಎದುರಿಸಬೇಕಾದೀತು. ಎಂದು ಹೇಳುವಾಗ ಕೇಶವ ಮಧ್ಯ ಬಾಯಿ ಹಾಕಿ ಅವ್ವ ಇನ್ನೂ ಮೇಲೆ ನಮ್ಮ ಜೊತೆ ಧಾರವಾಡಕ ಇರತಾಳ ಮಠದ ಬಹಿಷ್ಕಾರ ನಾನು ನೋಡಿಕೊತಿನಿ. ಎಂದು ಮಡಿ, ಆಚಾರ ವಿಚಾರ ಪದ್ಧತಿಗೆ ವಿರಾಮ ಹೇಳಿದ ಕೇಶವಾ. ಕೇಶವನಿಗೆ ಧಾರವಾಡದ ಕನ್ಯ ಗೊತ್ತಾಗಿ ಪಂತರ ಮನೀಗ ಧಾರವಾಡದ ಬೀಗತನ ಆತು. ಲಗ್ನ ಆರ್ಭಟ ಮಾಡಿಕೊಟ್ಟರೂ, ಎರಡು ಹುಳೀ ಹಿಂಡೋ ಮಾತುಗಳು ನವಲಗುಂದ ಮನಸ್ಸನ್ಯಾಗ ಉಳಿದುಕೊಂಡು ಬಂದವು. ಅದರಲ್ಲಿ ಅಂಬಕ್ಕ ಬೀಗರ ಕಡೆಯ ಒಬ್ಬ ಹೆಂಗಸು ಆಡಿದ ಮಾತುಗಳು ಅಂಬಕ್ಕನಿಗೆ ಅವಮಾನ ಮಾಡಿದಂಗಾಯಿತು. ಆ ಧಾರವಾಡದ ಮುತ್ತೈದೆ ಒಬ್ಬಕಿ, ಅಂಬಕ್ಕಗ ''ಅಯ್ಯಾ ಮಡೀ ಮಾಡಿಸಿಕೊಂಡ ಹೆಂಗಸಾಗಿ ನೀವು ದರಬಂದಾರಾಗ ಹಿಂಗ ಮುಂದ ಮುಂದ ಬರ ಬಾರಬಾರದ್ರವ್ವ...'' ಇನ್ನೇನು ಭೂಮದಾಗ ಕೂಡವರೇನು ನೀವು.. ಎಷ್ಟು? ನಮ್ಮವರಂದರೂ ಮಂಗಳ ಅಮಂಗಳ ಅಂತ ಇರತದೋ ಇಲೋ?'' ಎಂದು ಚುಚ್ಚು ಮಾತುಗಳ ಅಂಬಕ್ಕನ ಮನಸ್ಸ ಕದಲಲಿಕ್ಕೆ ಪ್ರಾರಂಭವಾಯಿತು.

ಅಂಬಕ್ಕ ವಿಧವೆಯಾದಂದಿನಿಂದಲೂ ಮಡಿ ಮೈಲಿಗೆ, ಆಚಾರ ವಿಚಾರ, ಎಂದು ಎಲ್ಲರನ್ನು ಚುಟುಕು ಮುಳ್ಳು ಆಡಿಸುತ್ತಿದ್ದಳು. ಧಾರವಾಡದ ಪ್ರಸಂಗವು ಅತೀ ದುಃಖಕ್ಕೆ ಎಡೆಮಾಡಿಕೊಟ್ಟಿತು. ಕಳೆದು ಇಪ್ಪತ್ತ ಮೂವತ್ತು ವರುಷ ನವಲಗುಂದದ ಸಮಾಜದಲ್ಲಿ ಬಾಳುವೆ ಸವಿಸಿದ್ದಾಳೆ. ಜನರೊಡನೆ ಬೆರೆತಿದ್ದಾಳೆ. ಮದುವೆ ಮುಂಜವಿ ಬಾಗಿಯಾಗಿದ್ದಾಳೆ. ಸುತ್ತಾ ಕಡೆಗೂ ಹತ್ತಾರು ಹೆರಿಗೆ ಬಾಳಾಂತನಗಳಿಗೆ ನೇರವಾಗಿದ್ದಾಳೆ. ಇದುವರೆಗೂ ಅಮಂಗಳ ಅಶುಭ ವೈಧವ್ಯದ ಬಗೆಗೆ ಯಾರು ಅಷ್ಟಾಗಿ ಕೆಣಕಿದ್ದಿಲ್ಲ. ಇತ್ತೀಚಿನ ಜನರಲ್ಲಿ ಧರ್ಮ ಜಾಗೃತಿಯಾಗಿ ಈಗೀಗ ಮಂಗಳ ಕಾರ್ಯಗಳಲ್ಲಿ ಅಂಬಕ್ಕ ಅಮಂಗಳ ವೆನಿಸುತ್ತಿದ್ದಾಳೆ. ಎಂದಿಗೂ ಇಂತಹ ಪ್ರಸಂಗ ಎದುರಿಸದ ಅಂಬಕ್ಕಗ ಅಗಾಧ ನೋವು ಆಗುತ್ತಿದೆ. ಎಲ್ಲರನ್ನು ಮಡಿ ಮೈಲಿಗೆಯ ಬಗ್ಗೆ ಹೇಳುತ್ತಿದ್ದ ತನಗೆ ಅಂಟಿದ ಈ ಅಶುಭ ಅಮಂಗಳ ಸಂಕೇತಗಳ ಅವಳನ್ನು ತೀವ್ರ ದಟ್ಟವಾದ ಆತ್ಮಗ್ಲಾನಿಗೆ ನೂಕುತ್ತದೆ. ಇದರಿಂದ ಅಂಬಕ್ಕ ಇನ್ನೂ ಮಡಿ ಮೈಲಿಗೆ ಎಂದು ಬುದ್ಧಿ ಬ್ರಾಮಣ ಆದವರಂಗ ಒಟಗುಡಲಿಕ್ಕೆ ಹತ್ತಿದಳು. ಹೀಗೆ ಒಬ್ಬ ವಿಧವೆ ಅಂಬಕ್ಕನನ್ನು ನವಲಗುಂದದ ಜನರು ಎಲ್ಲ ಸಮಾರಂಭಗಳಲ್ಲಿ ಬಾಗಿಯಾಗುವಲ್ಲಿ ಅವಕಾಶಕೊಡುತ್ತಿದ್ದದು ಆಗಿನ ಕಾಲದ ಒಂದು ಸ್ಥಿತ್ಯಂತರವೆನ್ನಬಹುದಾಗಿದೆ.

ವಾಸುದೇವಚಾರ್ಯರಿಗೆ ಜವಬ್ದಾರಿಗಳು ಹೆಚ್ಚಾಗಿ, ದುಡಿಯುವ ಕೈಗಳು ಕಡಿಮೆಯಾಗಿ ಉಣ್ಣೋಮಂದಿ ಜಾಸ್ತಿಯಾಗಿ ಎಲ್ಲದರ ಜವಾಬ್ದಾರಿಗಳನ್ನು ಒಬ್ಬರೇ ನೀಗಿಸುವಲ್ಲಿ ಅವರ ಮನಸ್ಸು ಒಳಗಿಂದೊಳಗೆ ಸಳ ಮಳ ಕೂದಿಲಿಕ್ಕೆ ಹತ್ತಿತು. ತುಳಿಸಕ್ಕ ತನ್ನ ಕೈಲಾದಷ್ಟು ಸಂಬಾಳಿಸುತ್ತಿದ್ದಳು. ಇತ್ತಿತ್ತಲಗ ಮನಿ ಎಂಬುದು ಕುರುಕ್ಷೇತ್ರ ಆದಂಗ ಆಗಲಿಕ್ಕಿತ್ತಿತು. ಅಂತಾ ಸಮಯದಲ್ಲಿ ತಿಪ್ಪಕ್ಕ ತನ್ನ ಹನ್ನೊಂದು ಬಾಣಂತನಕ್ಕೆ ತವರು

ಮನೆಗೆ ಬಂದಿದ್ದಳು. ಈಗ ವಾಸುದೇವಚಾರ್ಯರಿಗೆ ತಾಳ್ಮೆ ತಪ್ಪಿ "ಜಂತಿನ ಪುಡಿ ತಗೊಂಡು ಹಡೀತಾಳೆನು ಕೇಳ್ರೀ ಈ ಹುಚ್ಚರಂಡೀ" ಒಂದರ ಮ್ಯಾಲೊಂದು ಒಂದರ ಮ್ಯಾಲೊಂದು ಬಾಣಂತನಕ ಬರತಾಳ" ಎಂದು ಹೇಳುವ ಸ್ಫೋಟದ ನುಡಿಗಳಾಗಿರಲಿಲ್ಲ. ಅವರ ಅಂತರಂಗದಿಂದ ನುಡಿದ ನುಡಿಗಳಾಗಿದ್ದವು. ಒಂದು ಅವಿಭಕ್ತ ಕುಟುಂಬದ ಜವಾಬ್ದಾರಿ ಅರಿತ, ಅನುಭವದ ನುಡಿಗಳಾಗಿದ್ದವು. ಇದರಿಂದಲೇ ಆಚಾರ್ಯರು ತಮ್ಮ ಮನಸ್ಥಿತಿಯು ಮೊದಲ ಸ್ಥಿಮಿತಕ್ಕೆ ಇರಲಿಲ್ಲ. 'ಹತ್ತ ಹತ್ತ ಮಕ್ಕಳು ಆದಿಂದರ ಹಾಸಿಗೀ ಪದ್ಯ ಮಾಡಲಿಕ್ಕೆ ಬರೋದಿಲ್ಲೇನು ಈ ರಂಡೆ ಮಕ್ಕಳಿಗೆ" ಎಂದು ಆಕ್ರೋಶಿಸಿದರು. ಇದರಿಂದಾಗಿ ಸೂಕ್ಷ್ಮವಾದ ಸ್ತ್ರೀ ಮನಸ್ಸನ್ನು ಪುರುಷ ಪ್ರಧಾನವಾದ ಈ ಸಮಾಜದಲ್ಲಿನ ಪುರುಷ ಸ್ಫೋಟಿಸಿದಂತಾಯಿತು.

ವಾಸುದೇವಚಾರ್ಯರ ಈ ಪ್ರಸಂಗದ ನುಡಿಗಳಿಂದ ಆಗಿನ ಕಾಲದ ಪರಿಸ್ಥಿತಿಗೆ ಸ್ತ್ರೀಯರು ಕೂಡ ತಮ್ಮ ಒಳಜಗಳವನ್ನು ಮರೆತು ಎಲ್ಲರೂ ಸೇರಿ ಆಚಾರ್ಯ ಹೇಳಿದ ನುಡಿಗಳಿಗೆ ಗೋದುಬಾಯಿ, ಸಾವಿತ್ರಿ, ಅಕ್ಕವ್ವ, ಸುಂದರಕ್ಕ, ಎಲ್ಲರೂ ಹರಿಹಾಯ್ದಿದ್ದರು. ಹಾಸಿಗೀ ಪತ್ಯದ ಬಗ್ಗೆ ಚೀರಾಡಿದ್ದು ಬರೀ ತಿಪ್ಪಗನಿಗಷ್ಟೇ ಅಲ್ಲದೇ ಇಡೀ ಸ್ತ್ರೀ ವರ್ಗಕ್ಕೆ ಅಪಮಾನ ಮಾಡಿದಂತಾಗಿತ್ತು.

"ಮಕ್ಕಳಾಗೋದು ಬಿಡೋದು ಯಾರ ಕೈಯಾಗಿನ ಮಾತು?... ಹಾಸಿಗೀ ಪತ್ಯ ಏನು ಬರೆ ಹೆಣ್ಣು ಮಕ್ಕಳಷ್ಟೇ ಮಾಡಲಿಕ್ಕೆ ಬರತದೇನು"

'ಮಾತಿಗೊಂದು ಮಿತಿ ಬೇಕೋ ಬ್ಯಾಡೋ", ಇಂತಹ ವಟುಗುಡುವಿಗಳು ಅಸಹನೆಯನ್ನು ಹೆಚ್ಚಿದವು. ಒಬ್ಬಾಕಿ, ಯಾರಿಗೆ ಬೇಕಾಗೇದ ವರ್ಷ ವರ್ಷ ಬಸರು ಬಾಣಂತನಾ ನಮಗ ಬೇಕಾಗೇದೇನು?" ಅಂದರ, ಇನ್ನೊಬ್ಬಾಕಿ, "ಕತ್ತಿ ಹಂಗ ಮೈಮಾಲ ಬೀಳತಾವ... ಪತ್ಯ ಅಂತ ಪತ್ಯ" ಎಂದಳು ತಿರಸ್ಕಾರದಲ್ಲಿ ಇನ್ನೊಬ್ಬಳ, "ಬಡಿಯೋ ಕೈಯಲೀ ಹತ್ತಭಕ್ಕರಿ ಹೆಚ್ಚುಬಿಡೀ, ಹಡೆಯೋ ಕೈಲಿ ನಾಲ್ಕು ಮಕ್ಕಲನ್ನು ಹೆಚ್ಚು ಹಡೀ" ಅಂತಗಾದಿ ಮಾತ ಅದಲ್ಲ ಹುಟ್ಟಸಿದ ದೇವರು ಹುಲ್ಲು ಮೇಯಿಸತಾನೇನು? ಎಂದಳು.

ಹೀಗೆ ಇಡೀ ನವಲಗುಂದದ ಸ್ತ್ರೀ ಸಮಾಜವೇ ಆಚಾರ್ಯರ ಮೇಲೆ ವಿರುದ್ಧ ಯುದ್ಧವನ್ನು ಸಾರಿತ್ತು. ಆಗಿನ ಕಾಲದಲ್ಲಿ ಪುರುಷರ ಶೋಷಣೆಗೆ ಪ್ರತಿಕ್ರಿಯಿಸುವ ಪ್ರತಿಭಟಿಸುವ ಸ್ತ್ರೀ ಮನೋಭಾವನೆಗಳು ಇದ್ದವು. ಕಂಡು ಕಾಣದ ಹಾಗೆ ಬುದಿ ಮುಚಿದ್ದ ಕೆಂಡದಂತೆ ಇದ್ದವು. ಸ್ತ್ರೀಯು ಎಲ್ಲವನ್ನು ಸಹನೆಯಿಂದ ಸ್ವೀಕರಿಸುತ್ತಿದ್ದಳು. ತನ್ನದಲ್ಲದ ತಪ್ಪನಿಂದ ಎಲ್ಲವನ್ನು ಅಸಹನೇ ತಿರಸ್ಕಾರದಿಂದ ಜ್ವಾಲಾಮುಖಿಯಾಗಿ ಸ್ಫೂಡಿಸುವ ಗುಣ ಅವಳಲ್ಲಿ ಕಡಿಮೆಯಾದರು. ತಾಳ್ಮೆ ಮೀರಿದಾಗ ಕೆಲವೊಂದು ಸಂದರ್ಭದಲ್ಲಿ ಸ್ಫೋಟದ ಜ್ವಾಲಮುಖಿಯನ್ನು ಸಿಡುಸುತ್ತಾರೆ ಎನ್ನುವುದಕ್ಕೆ ನವಲಗುಂದದ ಸ್ತ್ರೀಯರು ನುಡಿದ ಈ ನುಡಿಗಳು ಕೇವಲ ಹರಟೆ ಮಾತುಗಳು ಆಗದೇ ಒಂದು ಹೆಣ್ಣಿನಲ್ಲಿರುವ ನಿಜವಾದ ನೋವು, ಯಾತನೇಯಾಗಿತ್ತು, ಗರ್ಭಿಣಿ, ಸ್ತ್ರೀಯು ಒಂದು ಮಗುವಿಗೆ ಜನ್ಮ ನೀಡುವುದು ಅವಳು ತನ್ನ ಸಾವನ್ನು ಪಣಕ್ಕೆ ಇಟ್ಟು ಹೋರಾಡ

ತಕ್ಕಂತವಳು, ಅಂತವಳು ಆಚಾರ್ಯರ ನುಡಿಗಳನ್ನು ಸಹಜವಾಗಿ ತೆಗೆದುಕೊಳ್ಳಲಿಲ್ಲ. ಇಡೀ ಒಂದು ಸ್ತ್ರೀ ಕುಲವೇ ಅದನ್ನು ಗಂಭೀರವಾಗಿ ತೆಗೆದುಕೊಂಡು ಆಚಾರ್ಯರಿಗೆ ವಿರುದ್ಧವಾಗಿ ಪ್ರತಿಕ್ರಿಯಿಸಿದೇ ನುಡಿಗಳು ಅವರಲ್ಲಿ ಚರ್ಚೆಯಾಗಿ ಉಳಿದುಕೊಂಡಿದ್ದು ದುರಂತದ ಸಂಗತಿ, ಕಾದಂಬರಿಕಾರರು ಸ್ತ್ರೀಯಲ್ಲಿನ ಸ್ವಭಾವವನ್ನು ನೈಜವಾಗಿ ಮೂಡಿಸಿದ್ದಾರೆ. ಈಕಥೆಯಲ್ಲಿ ಸ್ತ್ರೀಯು ಸಹನೆ. ತಾಳ್ಮೆ, ಕ್ಷಮಾದರಿತ್ರ ಯಾದವಳು ಯಾವ ರೀತಿ ತನ್ನ ಬದುಕಿನ ಪರಿಸ್ಥಿತಿಗೆ ಸ್ಥಿತ್ಯಂತರ ಪಡೆತಾಳ ಎಂಬುದನ್ನು ಶ್ರೀನಿವಾಸ ವೈದ್ಯರು ಇಲ್ಲಿ ಚಿತ್ರಿಸಿದ್ದಾರೆ.

ಮೃತ್ಯು ಜೀವನಕ್ಕೇನು ಹೊಸದಲ್ಲ. ಅದರ ಅನಿಶ್ಚಿತ ಆಗಮನವೂ ನಿಶ್ಚಿತವಾದದ್ದೇ, ಆದರೂ ಪಂತರ ಮನೆಯಲ್ಲಿ ಸ್ವತಂತ್ರ ಹೋರಾಟ ನಡೆಸಿ ರಾಮುನ ಸಾವು ಅನಿರೀಕ್ಷಿತವಾಗಿ ಪತ್ರಿಕೆಯಲ್ಲಿ ಬಂದು ರಾಮುವಿನ ಸಾವಿನ ಸುದ್ದಿ ತಿಳಿದ ನವಲಗುಂದದಲ್ಲಿ ಶೋಕ ಸಭೆಗಳಾದವೂ ಮತ್ತು ಊರು ಗುರುಲಿಂಗನ್ನು ಮತ್ತು ರಾಮೂನ್ನನ ನೆನದುಕೊಂಡು ಶೋಕಿಸಿತು. ಪಂತರ ಮನೆಯಲ್ಲಿ ಅಳು ಇನ್ನೊಮ್ಮೆ ಮರು ಕಳಿಸಿತು. ಸಾವಿನ ಮನೆಯ ಜೀವನದಲ್ಲಿ ಒಂದು ಭಯಾನಕ ಬಿರುಕು ಬಿಟ್ಟಿತು. ಈ ಬಿರುಕು ಎಂದೆಂದೂ ಮುಚ್ಚಲಾರದ್ದಂದು ಎನಿಸಿತು. ಮುಂದೆ ಕೆಲವೇ ದಿನಗಳಲ್ಲಿ ಈ ಸೀಳು ಇತ್ತೊ ಇಲ್ಲವೋ ಎಂಬಂತೆ ಮುಚ್ಚಿಕೊಂಡು ಬಿಡುತ್ತದೆ. ಹಾಗೆಯೇ ಪಂತರ ಮನೆಯಲ್ಲಿ ರಾಮೂನ ದಿನ ಕರ್ಮಗಳಿಗೆ ಬಂದಿದ್ದ ಧಾರವಾಡದ ಮಂದಿ ಮರಳಿ ಹೋದರು. ರಾಘೂ ತನ್ನ ಹೆಂಡತಿ ಮಕ್ಕಳ ಜತೆಗೆ ಬ್ಯಾಹಟ್ಟಿಗೆ ಹೋದ, ರಿಂದಿ, ಪದ್ದೀ ತಮ್ಮ ತಮ್ಮ ಸಂಸಾರ ಕಟ್ಟಿಕೊಂಡು ತಮ್ಮ ತಮ್ಮ ಊರುಗಳಿಗೆ ಹೋದರು. ನವಲಗುಂದ ಮತ್ತು ಶಾಂತ ಆಯಿತು. ಬೋಧರಾಯ ತಾಲೂಕ ಕಛೇರಿ ಗಿಡದ ಕೆಳಗ ಕೂತು ಆಸ್ಥೆಯಿಂದ ಹೆಬ್ಬಟ್ಟು ಒತ್ತಸಲಿಕ್ಕೆ ಹತ್ತಿದರು. ಮತ್ತೆ ಸರಸ್ವತಿ ಗಂಡನ ಅನಾಧಾರಕ್ಕೆ ಒಳಗಾಗಿ ನಿಟ್ಟುಸಿರು ಬಿಡತೊಡಗಿದ್ದರು. ತುಳಸಕ್ಕೆ ಹಿತ್ತಲದಾಗ ತುಳಸೀ ಕಟ್ಟೆಯ ಮೇಲೆ ಕೂತು ಹೂಬತ್ತಿ ಹೊಸೆಯ ತೊಡಗಿದಳು.

ಪಂತರ ಮನೆತನದಲ್ಲಿ ಯಾವ ಯಾವ ಅವಘಡ ನಡೆದರೂ ಜೀವನದಿ ಪ್ರವಹಿಸುತ್ತದೆ. ಎಂಬುದಕ್ಕೆ ಮೇಲಿನ ಪ್ರಸಂಗದಲ್ಲಿ ಅವರ ಅವರ ಪಾಡಿಗೆ ಮತ್ತೆ ಕೆಲಸ ಕಾರ್ಯಗಳಲ್ಲಿ ನಿರತವಾಗಿದ್ದು ಕಾಣುತ್ತವೆ. ಇಂತಹ ದೊಡ್ಡ ಅಪಘಾತವನ್ನು ಜನ ಮರೆತು ತಮ್ಮ ದೈನಂದಿನ ಜೀವನದಲ್ಲಿ ನಿರತವಾಗಿದ್ದಾರೆ. ಇದು ಅವರ ಬದುಕಿನ ಒಂದು ಪಲ್ಲಟವೆನ್ನಬಹುದು.

ವಾಸುದೇವಚಾರ್ಯರ ಕುಟುಂಬದ ಕಿರಿಯ ಮಗ ಧೀರ, ತನ್ನ ಅಫಿಸಿನ್ಯಾಗ ರಿಸರ್ಚ ಅಸಿಸ್ಟೆಟಿ ಅಂತ ಕೆಲಸ ಮಾಡುವ ಶರಯೂಳನ್ನು ಮದುವೆಯಾದನು. ಅದು ಅಂತರ್‌ಜಾತಿ ವಿವಾಹವಾಗಿತ್ತು. ಇದುವರೆಗೂ ಪಂತರ ಮನೆತನದಲ್ಲಿ ನಾರಾಯಣ ಅಂತರ್‌ಜಾತಿ ವಿವಾಹವಾಗಿದ್ದರೂ, ಅವನು ದೂರ ಸಂಬಂಧಿ ತುಳಸಕ್ಕನ ಬಳಗವಾಗಿತ್ತು ಆದರೆ ಅಷ್ಟೇನು ಪ್ರಭಾವಬೀರಲಿಲ್ಲ. ಆದರೆ ಪಂತರ ತಲೆ ಮಾರಿನ ಬೋಧನ

ಮಗ ಧೀರ, ಮದುವೆಯು ಆಗಿದ್ದು, ಆತಂಕ ಹುಟ್ಟಿಸಿದ್ದು ನಿಜ, ಇದಕ್ಕಿಂತಲೂ ಹೆಚ್ಚಾಗಿ ವಾಸುದೇವಚಾರ್ಯ ಮತ್ತು ತುಳಸಕ್ಕ ಈ ಸುದ್ದಿ ತಿಳಿದ ಎದೆ ವಡೆದು ಕೊಳ್ಳುವರೆಂದು ಎಲ್ಲರೂ ಚಿಂತಾಕ್ರಾಂತರಾಗಿದ್ದರು. ಹೀಗಾಗಿ ಪಂತರ ಮನೆತನದಲ್ಲಿ ಮೊದಲ ಬಾರಿಗೆ ಅಂತರ್‌ಜಾತಿ ವಿವಾಹವಾಯಿತು. ಮೊದಲೆಲ್ಲಾ ವಿವಾಹಗಳು ಸಂಪ್ರದಾಯವಾಗಿ ಮಾಡಿಕೊಂಡು ಬಂದ ವಾಸುದೇವಚಾರ್ಯರು ಆ ಗುರುಹಿರಿಯ ಸಮ್ಮುಖದಲ್ಲಿ ವಿಜೃಂಭಣೆಯಿಂದ ನಡೆಯುತ್ತಿದ್ದವು. ಆದರೆ ಇದು ಸಮಾಜದ ವಿವಾಹ ಪದ್ಧತಿಯಲ್ಲಾದ ಪರಿವರ್ತನೆಯೆಂದೆ ಹೇಳಬಹುದಾಗಿದೆ.

ನವಲಗುಂದದ ಮನೆತನದ ಹುಡುಗರು ಓದಿಗಂದು ಧಾರವಾಡದಾಗ ಇದ್ದ, ಭೋಧನ ಮಗ ದೀರನ್ನಾ, ಹಣಮನ ಮಗ ವೆಂಕಟನ್ನ, ನವಲಗುಂದಕ್ಕೆ ದೀಪಾವಳಿ ಸೂಟಿಗೆ ಬರಬೇಕಿಲ್ಲವೆಂದು ತುಳಸಕ್ಕಾ ಕೇಳದಾಗ, ನವಲಗುಂದಾಗ ಸಿನಿಮಾವೂ ಇಲ್ಲ. ರೇಡಿಯೋ ಇಲ್ಲವೆಂದು ಅಲ್ಲಿ ಹೊತ್ತು ಹೋಗುವುದಿಲ್ಲವೆಂದು ಹೇಳಿ ನಾವು ಮುಂಬೈಗೆ ಹೋಗುತ್ತೇವೆ. ಎಂದು ಹೇಳಿದಾಗ ವೃದ್ಧರು ವ್ಯಥೆ ಪಟ್ಟರು. ಇವರ ಮಾತನ್ನು ಈ ರೀತಿಯಲ್ಲಿ ಗ್ರಹಿಸಲಾಗಿದೆ.

“ಮೊನ್ನಿ ದೀಪಾವಳಿ ಸೂಚಿಗೆ ಸಹಿತ ನವಲಗುಂದಕ್ಕೆ ಬರಲಿಲ್ಲರೋ.... ನಿಮ್ಮ ಅವ್ವ ಅಪ್ಪನ ನೆನಪರು ಆಗತದದೋ ಇಲ್ಲೋ” ಎಂದದ್ದಕ್ಕೆ ಹುಡಗರು.

“ನವಲಗುಂದದಾಗೇನು... ಸಿನಿಮಾ ಇಲ್ಲಿ ರೇಡಿಯೋ ಇಲ್ಲ. ಒಂದು ಇಲೆಕ್ಟ್ರಿಕ್ ದೀಪ ಸಹಿತ ಇಲ್ಲ... ಅಲ್ಲೇ ಬಂದರ ಹೊತ್ತು ಹೋಗೂದಿಲ್ಲ.”[೨೦]

ನವಲಗುಂದದಿಂದ ಹೋದ ಹುಡಗರಿಗೆ ಶಹರದ ಸಿನಿಮಾ, ರೇಡಿಯೋದಿಂದ ಮನರಂಜನೆ ಕಾರ್ಯಕ್ರಮ ಅವರಿಗೆ ಸಾಕಷ್ಟು ಸಿಗುವುದರಿಂದ ಕ್ರಮೇಣ ನವಲಗುಂದ ಊರು ಬೋರ ಅನಿಸಿ ಶಹರ ಪ್ರಭಾವಕ್ಕೆ ಒಳಗಾಗಿ ಹಳ್ಳಿ ಊರನ್ನ ತಿರಸ್ಕರಿಸುವಂತೆ ಮಾಡಿತು. ಮೊದಲು ನವಲಗುಂದದಲ್ಲಿ ಹುಟ್ಟಿ ಬೆಳೆದ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಹೋದವರು. ನವಲಗುಂದಕ್ಕೆ ಬರುವ ಮನಸ್ಸೇ ಮಾಡಲಿಲ್ಲ. ಇದು ಪಂತರ ಮುಂದಿನ ಪೀಳಿಗೆಯಲ್ಲಾದ ಪರಿವರ್ತನೆಯನ್ನು ಕಾಣಬಹುದಾಗಿದೆ.

ಹುಡುಗರಷ್ಟೇ ಬದಲಾಗದೇ ಇಡೀ ಧಾರವಾಡ ಹುಬ್ಬಳ್ಳಿಯೂ ಆಧುನಿಕದಿಂದಾಗಿ ದಿನ ದಿನ ಬೆಳಲಿಕ್ಕೆ ಹತ್ತಿತು. ಹಾಗೆಯೇ ರಾಜಕೀಯ ಕಿಚ್ಚು ಇನ್ನೂ ಹೆಚ್ಚಾಗಲಿಕ್ಕೆ ಹತ್ತಿತು. ಮೊದಲಕ್ಕಿಂತ ಹೆಚ್ಚಾಗಿ ಆಗಸ್ಟ್ ಒಂಬತ್ತರ ಕ್ರಾಂತಿಯ ಕಿಡಿ ಇಡೀ ದೇಶದ ಉದ್ದಗಲಕ್ಕೂ ಹಬ್ಬಿತು. ಧಾರವಾಡದ ಬೀದಿ ಬೀದಿಗಳ ಮ್ಯಾಲೆ. ಶಾಲಾ ಕಾಲೇಜು, ನಗರಸಭೆ, ಸರಕಾರಿ ಆಸ್ಪತ್ರೆ ಇತ್ಯಾದಿಯಾಗಿ ಎಲ್ಲಾ ಮುಖ್ಯ ಕಟ್ಟಡಗಳ ಗೋಡೆಗಳ ಮೇಲೆಲ್ಲಾ ‘ಕ್ವಿಟ್ ಇಂಡಿಯಾ’ ‘ಭಾರತ ಬಿಟ್ಟು ತೊಲಗಿ’ ಎಂಬ ಘೋಷಣೆಗಳು ರಾತ್ರೋರಾತ್ರಿ ಡಾಂಬರಿನಲ್ಲಿ ಬರೆದಿದ್ದರು.

ಬೆಳಗ್ಗೆ ಪ್ರಭಾತಫೇರಿ, ಮಧ್ಯಾಹ್ನ ಮಿಟಿಂಗ ಮೆರವಣಿಗೆ, ಸಂಜೆ ಸಭೆ ಮೂರು ಹೊತ್ತು ಬಿಟ್ಟಬಿಡದೆ ಸ್ವಾತಂತ್ರ ಕಹಳೆ ಮೊಳಗುತ್ತಿತ್ತು. ಶಾಂತವಾಗಿದ್ದ ಧಾರವಾಡ ನಗರ ಸಮರೋತ್ಸಾಹದಿಂದ ತುಂಬಿತು ಪ್ರಭಾತ ಪರಿಗಳಲ್ಲಿ ಮಹಿಳೆಯರೆಲ್ಲಾ ಬಿಳೇ ಸೀರೆ ಉಟ್ಟು.

'ಮುದಕನ್ನಾ ಕಂಡೀರೆನವ್ವ

ಆ ಮಹಾತ್ಮನ್ನss

ಮುದಕನ ಕಂಡೀರೆನವ್ವ."

ಎಂದು ಹಾಡುತ್ತಿದ್ದರು. ಬಿಸಿರಕ್ತದ ತರುಣರು ಸಿಸ್ತಿನಿಂದ, ಜಯ ಘೋಷಣೆ ಗೈಯುತ್ತಾ ಕೆಚ್ಚೆದೆಯಲ್ಲಿ

"ಉಪ್ಪಿನ ಕಟ್ಟನು ಕಲಿಗಳು

ದಿಟ್ಟತನದಿ ತಾವ್ ಸೆರೆಮನೆ ಸೇರಲು

ಭ್ರಾಂತರಾದರ್ಕೆ ಆಂಗ್ಲರು ಮನದೀ

ಬೆದರಿ ಬೆದರಿ ನಡುಗಿತು ಲಂಡನ್"[೨೧]

ಎಂದು ಕೂಗುತ್ತಾ ಸರಕಾರವನ್ನು ದಿಕ್ಕರಿಸುತ್ತಾ ತರಣ ತಂಡ ಸವಾಲೆಸೆಯುತ್ತಾ ನಡೆದಿದ್ದರು. ಮನ್ಯಾಗಿನ ಹುಡುಗರು ಬೆಳಿಗ್ಗೆ ಗಾಂಧೀಟೋಪಿ ಧರಿಸಿ ಪ್ರಭತಪೇರಿಗೆ ಹೋಗುತ್ತಿದ್ದರು. ಸಾಲದಕ್ಕೆ ವಾಸುದೇವಚಾರ್ಯರ ಸೊಸೆ ಪರಿಮಳ ಸಹಿತ ಹಸಿರು ಅಂಚಿನ ಬಿಳೀ ಖಾದಿ ಸೀರೆ ಉಟ್ಟು, ದಿನನಿತ್ಯ ಯಾವ ಯಾವದೋ ಮೆರವಣಿಗೆ ಮಿಟಿಂಗು ಎಂದು ಗಂಡಸರಂತೆ ಒಬ್ಬಳೆ ಹೊರಗೆಲ್ಲ ಓಡಾಡುತ್ತಿದ್ದಳು.

ಹೀಗೆ ಪಂತರ ಮೊದಲ ತಲೆಮಾರು ಮತ್ತು ಮೂರನೇ ತಲೆಮಾರಿಗೆ ಅಜಗಂತಾರ ವ್ಯತ್ಯಾಸಗಳು ಕಾಣಿಸಲಿಕ್ಕೆ ಹತ್ತಿದವು ವಾಸುದೇವ ಮತ್ತು ತುಳಸಕ್ಕರ ಜಗತ್ತು ಮತ್ತು ಇವತ್ತಿನ ಮೊಮ್ಮಕ್ಕ ಜಗತ್ತಿಗೂ ಮೆರವಣಿಗೆ, ಮೀಟಿಂಗ್‌ನಿಂದಾಗಿ ತೀವ್ರವಾದ ಪಲ್ಲಟವಾಗಿರುವುದು. ಈ ಕಾದಂಬರಿಯ ಮೊದಲು ನಲಗುಂದದ ನಾನ ಸಾಹೇಬರ ಬಂಡಾಯ ಚಳುವಳಿಯನ್ನು ನೋಡಿದರೂ ಅದಕ್ಕಿಂತಲೂ ಸ್ವತಂತ್ರ ಸಂಗ್ರಾಮದ ಉಗ್ರ ಸ್ವರೂಪವು ರಾಜಕೀಯ ಸ್ಥಿತ್ಯಂತರವೆಂತಲೂ ಹೇಳಬಹುದು. ಹೀಗೆ ತೀವ್ರಗತಿಯಲ್ಲಿ ಬದಲಾಗುತ್ತಿರುವ ಧಾರವಾಡದ ಹೊಸ ವಾತಾವರಣಕ್ಕೆ ಮತ್ತು ಕಾಯ್ದೆಗೂ ವಾಸುದೇವಚಾರ್ಯರು ಖಿನ್ನರಾದ ಹೊಸ ಕಾಯ್ದೆಯಾದ 'ಉಳುವವನಿಗೆ ಭೂಮಿ" ಎನ್ನುವುದು ಕೂಡ ಎಲ್ಲ ಭೂಮಾಲೀಕರಿಗೆ ಚಿಂತೆಮಾಡಿತು. ಅದು ವಾಸುದೇವಚಾರ್ಯರನ್ನು ಬಿಟ್ಟರಲಿಲ್ಲ ಕೇಶವ ವಾಸುದೇವಚಾರ್ಯರಿಗೆ ಈ ರೀತಿಯಾಗಿ

"ಕಾಕ ನೀ ಸುಮ್ಮ ಸುಮ್ಮನ ಚಿಂತಿಮಾಡಿತೀದಿ... ಉಳುವವನಿಗೆ ಭೂಮಿ" ಎನ್ನುವ ತತ್ವ ಬಗ್ಗೆ ಮಾತು ನಡೆದಾವ ಹೊರತು ಇನ್ನೂ ಏನೂ ನಿರ್ಣಯ ಆಗಿಲ್ಲ. ಮುಖ್ಯ ಯಾವದಕ್ಕೂ ದೇಶ ಸ್ವಾತಂತ್ರ ಆಗ

ಬೇಕು... ಈ ಮಳೆಗಾಲ ಮುಗದ ಮ್ಯಾಲ ಇಬ್ಬರೂ ನಾಕಾರು ತಿಂಗಳು ಬಂದ ಇರ್ರಿ... ನಿಮಗ ಬದಲಾವಣೆಬೇಕು."[೨೩]

ಹೀಗೆ ಹೊಸ ತತ್ವದ ಗಾಳಿಯು ಬೀಸಲಿಕ್ಕೆ ಪ್ರಾರಂಭಮಾಡಿದವು. ರಾಜಕೀಯ ವಲಯದಲ್ಲಿ ದೊಡ್ಡದಾದ ಈ ಕ್ರಾಂತಿಯು ಅಲ್ಲಿನ ಶಾಲಾ ಕಾಲೇಜು, ಕಛೇರಿಗಳು, ಹುಡುಗರು, ಯುವಕರು, ಯುವತಿಯರಲ್ಲಿಯೂ ವೇಷ ಭೂಷಣದ ಆ ಬದಲಾವಣೆಯ, ಸ್ವಾತಂತ್ರ ಬೇಕು, ಎನ್ನುವ ನಿರ್ಧಾರಗಳು ಗೋಷಣೆಗಳು, ಹಾಡುಗಳು, ಮುಂತಾದವುಗಳನ್ನು ಗಮನಿಸಿದಾಗ ಹೋರಾಟದ ಕಿಚ್ಚ, ಹಟಗಳು ಅವರಲ್ಲಿ ಮನೆ ಮಾಡಿದ್ದವು. ಹೀಗೆ ಧಾರವಾಡ ಪರಿಸರವು, ಹೋರಾಟದ ಪರಿಸರವಾಗಿತ್ತೋ ಎನ್ನುವಷ್ಟರ ಮಟ್ಟಿಗೆ ಧಾರವಾಡ ಶಹರವು ತೀವ್ರಗತಿಯಲ್ಲಿ ರಾಜಕೀಯ ಸ್ಥಿತ್ಯಂತರಕ್ಕೆ ಕಾಲಿಟ್ಟಿತು. ರಾಮು ಎನ್ನುವ ಪಂತರ ಕಿರು ಮಗನು ಈ ಹೋರಾಟಕ್ಕೆ ಬಲಿಯಾಗಿ ಎಲ್ಲರ ಗೌರವಕ್ಕೆ ಪಾತ್ರನಾಗಿ ಜೈಕಾರ ಘೋಷಣೆಗಳು ಕೂಗಿದರೆ ಅವರ ಮನೆಯವರೆಲ್ಲಾ ಶೋಕದಲ್ಲಿ ಮುಳುಗುವಂತೆ ಮಾಡುತ್ತದೆ.

ಈ ಕಾದಂಬರಿಯಲ್ಲಿ ಕ್ರಾಂತಿಕಾರಕತೆ, ಜಡತ್ವ, ಪ್ರಗತಿ, ಸಂಪ್ರದಾಯಶೀಲತೆ, ಇಂತಹ ಕಲ್ಪನೆಗಳ ಮೂಲಕ ಸ್ಥಿತ್ಯಂತರವೆನ್ನುವುದು ಸಾಗಿ ಬರುತ್ತದೆ. ಸಂಪ್ರದಾಯಿಕ ಸಮಾಜಗಳಲ್ಲಿ ಬದಲಾವಣೆಯ ಶಕ್ತಿಗಳು ಪ್ರವೇಶ ಮಾಡಿದಾಗ ಆ ಶಕ್ತಿಗಳು ಆಯಾ ಸಮಾಜದ ಕಿರಿಯರು ಮತ್ತು ಯುವಕರ ಮೂಲಕ ಹೊರ ಹೊಮ್ಮುತ್ತವೆ. ಅಂತಹ ಪ್ರಸಂಗಗಳನ್ನು 'ಹಳ್ಳ ಬಂತು ಹಳ್ಳ'ದಲ್ಲಿ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೨೬

೨. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೨೭

೩. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೧೪೭

೪. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೧೪೮

೫. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೫೮

೬. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೬೫-೬೬

೭. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೨೦

೮. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೧೨೭

೯. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೧೪೯

೧೦. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೯೭

೧೧. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೯೬

೧೨. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೨೦೯

೧೩. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೧೨೦

೧೪. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೨೭೧

೧೫. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೧೬೧

೧೬. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೧೬೮

೧೭. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೧೮೪

೧೮. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೨೨೦

೧೯. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೧೮೯

೨೦. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೨೪೪

೨೧. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೨೦೫

೨೨. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಪುಟ - ೨೪೬

• • •

## ಅಧ್ಯಾಯ ಆರು

# ವಸ್ತು, ಭಾಷೆ, ಶೈಲಿ, ತೌಲನಿಕ ವಿವೇಚನೆ

ಎರಡು ಕೃತಿಗಳನ್ನು ಹೋಲಿಸಿ ಅವುಗಳ ಮೌಲ್ಯಮಾಪನ ಮಾಡುವುದನ್ನು ತೌಲನಿಕ ಸಾಹಿತ್ಯ ಅಧ್ಯಯನ ಎನ್ನಬಹುದು. ಟಿ.ಎಸ್.ಎಲಿಯಟ್ ಹೇಳುವಂತೆ ''ಒಬ್ಬ ವಿಮರ್ಶಕನ ಎರಡು ಸಾಧನೆಗಳೆಂದರೆ 'ತುಲನೆ ಮತ್ತು ವಿಶ್ಲೇಷಣೆ ಅವರ ಪ್ರಕಾರ ಒಂದು ಕೃತಿ ತೌಲನಿಕೆಯ ಮೂಲಕ ವಿವರಣೆಯನ್ನು ಹೆಚ್ಚು ನಿಖರಗೊಳಿಸಬಹುದು. ಇಂಥ ಅಧ್ಯಯನದಿಂದ ಕೃತಿಯ ಸತ್ವವನ್ನು ನಾವು ಹೆಚ್ಚು ಹೆಚ್ಚು ಗ್ರಹಿಸಬಹುದಾಗಿರುತ್ತದೆ.''[1] ಎಲ್ಲ ಸಾಹಿತ್ಯ ಕೃತಿಗಳೂ ಒಂದರ್ಥದಲ್ಲಿ ವಿಶಿಷ್ಟವಾದವುಗಳೇ ಆದರೂ ಯಾವುದು ಯಾವುದಕ್ಕಿಂತ ಹೆಚ್ಚಾದುದು ಎಂಬ ಮಾತಂತೂ ಇದ್ದೇ ಇರುತ್ತದೆ. ಒಂದು ಉತ್ತಮ ಕೃತಿ ರಚನೆಗೊಂಡಿತೆಂದರೆ ಅದರ ಪ್ರಭಾವ ಇತರರ ಮೇಲೆ ನಿರಂತರವಾಗಿ ಆಗುತ್ತಲೇ ಇರುತ್ತದೆ. ಇಂಥ ಪ್ರಭಾವದಿಂದ ಎರಡು ಕೃತಿಗಳ ತೌಲನಿಕತೆ ಒಂದು ಅಭ್ಯಾಸಯೋಗ್ಯ ವಿಷಯವಾಗುತ್ತದೆ. ಎಚ್.ಎಚ್. ರಮೇಶ್ ಪ್ರಕಾರ ''ತೌಲನಿಕ ಸಾಹಿತ್ಯದಿಂದ ಒಂದು ದೇಶದ ಮನುಷ್ಯ ಅನುಭವ ಅಭಿವ್ಯಕ್ತಿಗಳನ್ನು ಕುರಿತಂತೆ ಅಲ್ಲಿನ ಜ್ಞಾನ ಶಾಖೆಗಳಾದ ಇತಿಹಾಸ, ತತ್ವಶಾಸ್ತ್ರ ಮತ್ತಿತರ ಸಮಾಜ ವಿಜ್ಞಾನ ತಿಳುವಳಿಕೆಯನ್ನು ಮತ್ತೊಂದು ದೇಶದ ಇಂಥ ಜ್ಞಾನದ ಜೊತೆ ಹೋಲಿಸುವ ಆ ಮೂಲಕವಾಗಿ ಹೊಸ ಕಾಣ್ಕೆಯನ್ನು ಕಾಣುವ ಅಧ್ಯಯನವಾಗಿದೆ.'' ರೆನ್ ವೆಲೆಕ್ ಪ್ರಕಾರ ''ತೌಲನಿಕ ಸಾಹಿತ್ಯವು ಸಮಗ್ರೀಕರಣ ಮತ್ತು ಸ್ಫೂರ್ತಿಯನ್ನು ಒತ್ತಿಹೇಳುತ್ತಿದೆ. ಅದು ಎಲ್ಲ ಸಾಹಿತ್ಯವನ್ನು ಅಂತರಾಷ್ಟ್ರೀಯ ನೆಲೆಗಳ ಬಗ್ಗೆ ಪ್ರಜ್ಞಾವಂತರಾಗಿರುವಂತೆ ಮಾಡುತ್ತದಲ್ಲದೆ, ವಿಶ್ಲೇಷಣೆ, ಪಾತ್ರೀಕರಣ, ವ್ಯಾಖ್ಯಾನ ನಿರೂಪಣೆ ಮತ್ತು ವಿವರಣೆಗಳ ಮೂಲಕ ಅದು ಮಾಡುವ ತೌಲನಿಕ ವಿವೇಚನೆ ನಿಜವಾದ ಅರ್ಥದಲ್ಲಿ ಐತಿಹಾಸಿಕ ಬೆಳವಣಿವಣಿಗೆಯನ್ನು ಅಭ್ಯಸಿಸುತ್ತವೆ.''[2] ಅಲ್ಲದೇ ಅದು ಅಗತ್ಯವಾಗಿ ಅಧ್ಯಯನಕ್ಕೆ ಬೇಕಾದ ಇತಿಹಾಸ ಸಿದ್ಧಾಂತ ಮತ್ತು ವಿಮರ್ಶೆಗಳನ್ನು ಒಳಗೊಂಡಿರುತ್ತದೆ.

ತೌಲನಿಕ ಸಾಹಿತ್ಯವು ಸಹಜವಾಗಿಯೇ ರಾಷ್ಟ್ರೀಯ ಸಿನಿಕತನವನ್ನು ಮತ್ತು ಭಾಷಿಕ ಸಿನಿಕತನವನ್ನು ಮೀರಿ ಬೆಳೆಯುತ್ತದೆ. ಹಲವು ರಾಷ್ಟ್ರಗಳ ವಿಭಿನ್ನ ಸಂಸ್ಕೃತಿಗಳನ್ನು ಅಭ್ಯಾಸಮಾಡುವುದರಿಂದ ಅಗತ್ಯವಾಗಿ ಅದು ವಿಶ್ವ ಸಾಹಿತ್ಯದ ನಿರ್ಮಾಣದತ್ತ ನಡೆಯುತ್ತಿರುತ್ತದೆ. ತೌಲನಿಕ ಸೀಮಿತತೆ ಎಂಬುವುದೇ ಇಲ್ಲ. ವಾಲ್ಮೀಕಿಯ ರಾಮಾಯಣಕ್ಕೂ ಹೋಮರನ ಇಲಿಯಡ್‌ಗೂ ಇರುವ ವ್ಯತ್ಯಾಸಗಳಿಂದಿಡಿದು ಕುವೆಂಪು ಮಿಲ್ಟನ ಕೃತಿಗಳವರೆಗೆ ಅಲ್ಲಿ ಪರಸ್ಪರ ಹೋಲಿಸಿ ಮನುಷ್ಯ ಭಾವನಾ ಪ್ರಪಂಚದ ಅಭಿವ್ಯಕ್ತಿ ಸಾಧ್ಯತೆಯಲ್ಲಿ ಯಾವ ಕವಿ ಹೆಚ್ಚು ಯಾವ ಕಡಿಮೆ ಎಂಬ ತುಲನೆಯೊಂದಿಗೆ ಜಗತ್ತಿನ ಎಲ್ಲರನ್ನು ಬೆಲೆಗಟ್ಟುತ್ತಲೆ ಬಿಡುಗಡೆಯಾಗುವ ಒಂದು ಫಲಿತಾಂಶ ವಿಶ್ವಸಾಹಿತ್ಯದ ನೆಲೆಗಳನ್ನು ಸ್ಪಷ್ಟಪಡಿಸುತ್ತದೆ. ಈ ಬಗೆಯ ಅಧ್ಯಯನವನ್ನು ಸರಳವಾದ ಅರ್ಥದಲ್ಲಿ ತೌಲನಿಕ ಸಾಹಿತ್ಯ ಎಂದು ಹೇಳಬಹುದು. ತೌಲನಿಕ ಸಾಹಿತ್ಯ ಅಭ್ಯಾಸ ಒಂದು ಚಟುವಟಿಕೆ, ಅದೊಂದು ವಿಮರ್ಶೆ ಪದ್ಧತಿ. ಇದು ಸೃಜನಶೀಲ ಸಾಹಿತ್ಯವನ್ನು ಒಂದು ಘಟನೆಯೆಂದು ತಿಳಿಯುತ್ತವೆ. ತಾತ್ವಿಕವಾಗಿ ತೌಲನಿಕ ಸಾಹಿತ್ಯವು ಎಲ್ಲಾ ಮಾಧ್ಯಮಗಳಿಗೆ ಸಮಾನವಾದ ಬೆಲೆಯನ್ನು ಕೊಡುತ್ತದೆ. ಆದರೆ ಸಾಹಿತ್ಯಭ್ಯಾಸ ಅದರ ಮುಖ್ಯ ಕೇಂದ್ರ.

ರೆನೆವೆಲೆಕ್ ಪ್ರಕಾರ ತೌಲನಿಕ ಅಧ್ಯಯನವೆಂದರೆ ''ಒಂದು ಚಟುವಟಿಕೆ ಒಂದು ವಿಮರ್ಶೆ ಪದ್ಧತಿ. ಅದು ಸೃಜನಶೀಲ ಸಾಹಿತ್ಯವನ್ನು ಒಂದು ಘಟನೆಯೆಂದು ಪರಿಗಣಿಸುತ್ತದೆ. ಮನುಷ್ಯನ ಸೃಜನಶೀಲ ಅಭಿವ್ಯಕ್ತಿಗೆ ಇರುವ ಹಲವಾರು ಸಾಧ್ಯತೆಗಳಂತೆಯೇ ಸಾಹಿತ್ಯವು ಒಂದು ಸಾಧ್ಯತೆ. ವಿಜ್ಞಾನ ತತ್ವಜ್ಞಾನ, ಸಂಗೀತ ಚಿತ್ರಕಲೆಗಳಂತ ಸಾಹಿತ್ಯವು ಮಾನಸಿಕ ಪರಿಪಾಕದ ಒಂದು ಸ್ಪಷ್ಟ ಅಭಿವ್ಯಕ್ತಿಯಾಗಿರುತ್ತದೆ.''[೩] ಆದ್ದರಿಂದಲೇ ಇಂಥ ಅಭಿವ್ಯಕ್ತಿ ನೀಡಿದ ಚಾರಿತ್ರಿಕ ಘಟಕಗಳನ್ನು ಇತರ ಮಾಧ್ಯಮಗಳ ಜೊತೆ ಅನ್ವಯಿಸುವುದು ಅನಿವಾರ್ಯ. ಇಲ್ಲಿ ಮಾಧ್ಯಮಗಳನ್ನು ಕಡೆಗಣಿಸುವುದಕ್ಕಿಂತ, ಎಲ್ಲವುಗಳಿಗೂ ಸಮಾನ ಬೆಲೆಯನ್ನು ನೀಡಲಾಗುತ್ತದೆ. ಆದರೆ ಸಾಹಿತ್ಯಭ್ಯಾಸ ಅದಕ್ಕೆ ಕೇಂದ್ರವಾಗಿರುತ್ತದೆ. ಜಗತ್ತಿನ ಎಲ್ಲಾ ಸಾಹಿತ್ಯವೂ ಈ ವ್ಯಾಪ್ತಿಗೆ ಬರುವುದರಿಂದ ಅದಕ್ಕೊಂದು ಚೌಕಟ್ಟು ಇರುವುದಿಲ್ಲ. ಆಯಾ ಸಾಹಿತ್ಯದ ಚೌಕಟ್ಟಿನಲ್ಲಿ ಬೆಳೆದು ಬಂದ ಕಾಲ ಖಂಡ ನಿರ್ಣಯ, ಸಾಹಿತ್ಯ ಪ್ರಕಾರಗಳು ಅವುಗಳ ಬೆಳವಣಿಗೆ ಆಯಾ ಸಾಹಿತ್ಯದ ವಿಶಿಷ್ಟಗುಣಗಳು ಸಹ ಮುಖ್ಯವಾಗುತ್ತದೆ.

ಆದುದರಿಂದ ಈ ಎರಡು ಕಾದಂಬರಿಗಳು ಒಂದೇ ಚೌಕಟ್ಟಿನ ಅಡಿಯಲ್ಲಿ ಬರುವುದರಿಂದ ಗಂಗವ್ವ ಗಂಗಾಮಾಯಿ ಮತ್ತು ಹಳ್ಳ ಬಂತು ಹಳ್ಳ ಕಾದಂಬರಿಗಳ ತೌಲನಿಕವಾಗಿ ವಿವೇಚಿಸುವುದು ಅಗತ್ಯವೆನಿಸುವುದು. ತೌಲನಿಕ ಸಾಹಿತ್ಯ ಅಧ್ಯಯನದಲ್ಲಿ ಪ್ರತ್ಯೇಕತೆಯನ್ನು ವಿರೋಧಿಸುತ್ತ ಅನನ್ಯತೆಗೆ ಬದಲಾಗಿ ಸಾಧಾರಣತೆಯನ್ನು ಗುರುತಿಸಿ. ಆ ಮೂಲಕ ನಮ್ಮ ಅರಿವಿನ ಎಲ್ಲೆಗಳನ್ನು ವಿಸ್ತರಿಸುವುದು ಈ ದಿಕ್ಕಿನಲ್ಲಿ ಟಾಗೋರ ಹೇಳದ ಮಾತುಗಳು ಇಂದಿಗೂ ಹೆಚ್ಚಾಗಿ ಇಂದಿನ ವಿಶ್ವದ ಹಾಗೂ ಭಾರತದ ಸಂದರ್ಭದಲ್ಲಿ ಪ್ರಸ್ತುತವೆನಿಸುತ್ತದೆ. ಸಾಹಿತ್ಯವೆಂದರೆ ಭಿನ್ನ ಭಿನ್ನ ಕೃತಿಗಳ ಒಂದು ಮೊತ್ತ..... ಸೀಮಿತ ದೇಶಿಯತೆಯ ಚೌಕಟ್ಟಿನಿಂದ ನಾವು

ಹೊರಬಂದು, ಪ್ರತಿಯೊಬ್ಬ ಲೇಖಕನ ಕೃತಿಯನ್ನು ಅಖಂಡತೆಯ ಒಂದು ಭಾಗವೆಂದು, ಆ ಅಖಂಡತೆಯನ್ನು ಮಾನವನ ವಿಶ್ವವ್ಯಾಪಿ ಸೃಜನ ಶೀಲತೆಯ ಒಂದು ರೂಪವೆಂದು ಮತ್ತು ವಿಶ್ವಶಕ್ತಿಯು ಸಾಹಿತ್ಯದ ಮೂಲಕ ಪ್ರಕಟವಾಗುತ್ತದೆಂದೂ ಗ್ರಹಿಸಲು ನಾವು ಸದಾ ಪ್ರಯತ್ನಿಸಬೇಕು. ಹಾಗೆಯೇ ತೌಲನಿಕ ವಿವೇಚನೆ ಕುರಿತಂತೆ ಮತ್ತೊಬ್ಬರಾದ ಪ್ರೊ.ಸಿ.ಎನ್.ರಾಮಚಂದ್ರ ಅವರು ರಂಗಭೂಮಿ ಬಗ್ಗೆ ಅರಿಸ್ಟಾಟಲ್‌ನಷ್ಟೇ ಭರತನು ಚಿಂತನೆಯಾಗಿಸಿದ್ದಾನೆ. ಇದು ಸಂಸ್ಕೃತಿ ದಾಸ್ಯದಿಂದ ಹೊರಬಂದು ಆತ್ಮವಿಶ್ವಾಸವನ್ನುಗಳಿಸುವ ಪ್ರಮುಖ ಸಾಧನ ಎನ್ನುತ್ತಾರೆ. ತೌಲನಿಕ ಎನ್ನುವುದು ಶ್ರೇಷ್ಠ ಕನಿಷ್ಠ ಭಾವಕ್ಕಿಂತ ಸಾಮ್ಯತೆ ಮತ್ತು ಸಂಘರ್ಷದ ನೆಲೆಗಳನ್ನು ಪರಿಚಯಿಸುವುದಾಗಿದೆ.

ವಿದ್ವಾಂಸರ ಅಭಿಪ್ರಾಯ ಮೆರೆಗೆ ತೌಲನಿಕ ಸಾಹಿತ್ಯದ ಮುಖ್ಯ ಪ್ರಕಾರಗಳಾಗಿ ಈ ಕೆಳಗಿನವುಗಳನ್ನು ನೋಡಬಹುದಾಗಿದೆ.

೧. ವಸ್ತು ಸಮಾನತೆಯನ್ನಾಧರಿಸಿದ ಅಧ್ಯಯನ (The matic Studies.)

೨. ಪ್ರಭೇದ ಅಧ್ಯಯನ (Genre Study)

೩. ತೌಲನಿಕ ಕಾವ್ಯಮೀಮಾಂಸೆ (Compartive Poetices)

೪. ಭಾಷಾಂತರ ಅಧ್ಯಯನ (Translation Studies)

ತೌಲನಿಕ ಸಾಹಿತ್ಯದ ಅತ್ಯಂತ ವ್ಯಾಪಕ ಹಾಗೂ ಜನಪ್ರಿಯ ಪ್ರಕಾರ ವಸ್ತುಸಮಾನತೆಯನ್ನು ಧರಿಸಿದ ಅಧ್ಯಯನದಲ್ಲಿ ''ಯಾವುದೇ ಒಂದು ವಸ್ತು ಅಥವಾ ವಿಷಯ ಅಂತರ್ಭಾವವನ್ನು ಆಧರಿಸಿ, ವಿವಿಧ ಕಾಲಘಟ್ಟಗಳಲ್ಲಿ ರಚಿಸಲ್ಪಟ್ಟಿರುವ ಅನೇಕ ಕೃತಿಗಳನ್ನು ಒಂದೆಡೆ ತಂದು ಅವುಗಳನ್ನು ವಿಶ್ಲೇಷಣೆ, ಅವುಗಳ ವಸ್ತುವನ್ನು ಅಂತರ್ಭಾವವನ್ನು ಬೆಳೆಸಿರುವ ಬಗೆಯಲ್ಲಿರುವ ಸಾಮ್ಯ ವೃಷಮ್ಯಗಗಳನ್ನು ಗುರುತಿಸಿ ಅವುಗಳ ಆಧಾರದ ಮೇಲೆ ಆ ಕೃತಿಗಳು ರಚಿಸಲ್ಪಟ್ಟ ಸಮಾಜ ಸಂಸ್ಕೃತಿಗಳ ಬಗ್ಗೆ ವ್ಯಾಪಕ ಚಿಂತನೆ ನಡೆಸುವುದಾಗಿದೆ.''[೪]

ವಸ್ತು ಸಮಾನತೆಯನ್ನಾಧರಿಸಿದ ಅಧ್ಯಯನದಲ್ಲಿ ಎರಡು ಕೃತಿಗಳಲ್ಲಿ ವಸ್ತು ಕೇಂದ್ರವಾಗಿಟ್ಟುಕೊಂಡು ನಡೆಸುವ ಚಿಂತನೆಗಳಿಗೆ ಅವಕಾಶವಿದೆ. ಉದಾ. ಬಾಲ್ಯ, ಮುಪ್ಪು, ಅಧಿಕಾರ, ವಿವಾಹ ಮುಂತಾದ ಯಾವುದಾದರೂ ಒಂದು ವಸ್ತುವನ್ನಾಧರಿಸಿ ಅದೆ ವಸ್ತುವನ್ನು ಕೇಂದ್ರವಾಗುಳ್ಳ ಪ್ರಕೃತಿ ಸ್ಥಾನ, ದೈವತ್ವದ ಪರಿಕಲ್ಪನೆ, ಭೂಮಿ ಮತ್ತು ಒಡೆತನದ ಪ್ರಶ್ನೆ ಇತ್ಯಾದಿ ಒಂದು ವಿಷಯವನ್ನು ಕೇಂದ್ರವಾಗುಳ್ಳ ವಿವಿಧ ಭಾಷೆಗಳ ಅಥವಾ ಒಂದೇ ಭಾಷೆಯ ಕಾದಂಬರಿಗಳನ್ನು ಒಂದೆಡೆ ತಂದು ಅವುಗಳನ್ನು ಸಂಸ್ಥೆಗಳಲ್ಲಿ, ಸ್ತ್ರೀ ಪುರುಷ ಸಂಬಂಧಗಳಲ್ಲಿ ಸಮಾನ ಅಂತರ್ಭಾವನ್ನಾಧರಿಸಿ ತುಲನಾತ್ಮಕವಾಗಿ ಅಭ್ಯಾಸಿಸಬಹುದಾಗಿದೆ.

ಡಾ. ಶಂಕರ ಮೊಕಾಶಿ ಪುಣೇಕರ ತೌಲನಿಕ ಅಧ್ಯಯನವನ್ನು ಕುರಿತು ''ವಿಮರ್ಶಕನ ಎರಡು ಮುಖ್ಯ ಸಾಧನಗಳೆಂದರೆ ತುಲನೆ ಮತ್ತು ವಿಶ್ಲೇಷಣೆ ( Comparison and analysis ase the main tools

of the literary csitic) ಎನ್ನುತ್ತಾರೆ. ತೌಲನಿಕ ಅಧ್ಯಯನವೆಂದರೆ ಬರಿ ಎರಡು ಗ್ರಂಥಗಳ ತುಲನೆಯಲ್ಲ, ಇಬ್ಬರು ಕೃತಿಕಾರರ ತುಲನೆಯಲ್ಲ, ಎರಡು ಕೃತಿಗಳಲ್ಲಿ ಕೆಲವು ಸಮಾನ ಗುಣಧರ್ಮಗಳಿರುವಾಗ ಮಾತ್ರ ತುಲನೆ ಸಾಧ್ಯ. ತುಲನೆಯ ಮುಖಾಂತರ ವಿವರಣೆಯ ಹೆಚ್ಚು ನಿಖರಗೊಳಿಸಲು ಸಾಧ್ಯ ಎನ್ನುತ್ತಾರೆ.''[8]

ಡಾ. ಪುಣೇಕರವರು ತೌಲನಿಕ ಅಧ್ಯಯನದಲ್ಲಿ ವೈದೃಶ್ಯ ಸಾದೃಶ್ಯ ಮೂಲ ಪ್ರಭಾವ ಎಂಬ ಪರಿಕಲ್ಪನೆಗಳನ್ನು ಗುರುತಿಸಬಹುದಾಗಿದೆ. ಕೆಲವು ಸಮಾನ ಗುಣಧರ್ಮಗಳಿರುವಾಗ ಮಾತ್ರ ತುಲನೆ ಸಾಧ್ಯ. ತುಲನೆಯ ಮುಖಾಂತರ ವಿವರಣೆಯು ಹೆಚ್ಚು ನಿಖರಗೊಳಿಸಲು ಸಾಧ್ಯ ಎನ್ನುತ್ತಾರೆ. ಡಾ. ಪುಣೇಕರವರು ತೌಲನಿಕ ವೈದೃಶ್ಯ, ಸಾದೃಶ್ಯ, ಮೂಲ ಪ್ರಭಾವ ಎಂಬ ಪರಿಕಲ್ಪನೆಗಳನ್ನು ಗುರುತಿಸಬಹುದಾಗಿದೆ. ವೈದೃಶ್ಯ ಒಂದು ಸಾಹಿತ್ಯ ಕೃತಿಗೆ ವಸ್ತು ಬೇರೊಂದು ಭಾಷೆಯ ಕೃತಿಯಿಂದ ಬಂದು, ಅಂತಹ ಸಂದರ್ಭದಲ್ಲಿ ಮೂಲದಿಂದ ಕವಿ ತೆಗೆದುಕೊಂಡ ಸಾಮಗ್ರಿ. ಮೂಲದಲ್ಲಿ ಆ ಸಾಮಗ್ರಿ ಬಳಕೆಯಾಗಿರುವ ರೀತಿ, ಇವನ್ನು ಅಧ್ಯಯನ ಮಾಡಬಹುದಾಗಿದೆ. ಕೆಲವು ಸಮಾನ ಅಂಶಗಳಿರುವ ಇಬ್ಬರ ಕವಿಗಳ ಅಥವಾ ಎರಡು ಕೃತಿಗಳಲ್ಲಿ ಭಿನ್ನವಾಗಿರುವ ಅಂಶಗಳನ್ನು ಗುರುತಿಸಿ ಭಿನ್ನತೆಯ ಸ್ವರೂಪ, ಕಾರಣಗಳು ಫಲಿತಾಂಶ ಇವನ್ನು ಅಧ್ಯಯನಮಾಡುವುದು.

**ಸಾದೃಶ್ಯ Analogy:** ಬೇರೆ ಸಂಬಂಧವಿಲ್ಲದ ಎರಡು ಕೃತಿಗಳಲ್ಲಿ ಶೈಲಿಯಲ್ಲಿ ಅಥವಾ ಶಿಲ್ಪದಲ್ಲಿ ಅಥವಾ ಮನಃಸ್ಥಿತಿಯಲ್ಲಿ ಅಥವಾ ವಿಚಾರ ರೀತಿಯಲ್ಲಿ ಇರಬಹುದಾದ ಹೋಲಿಕೆಯ ಅಧ್ಯಯನ. ಇವೆರಡು ಪ್ರಸಕ್ತ ಅಧ್ಯಯನಕ್ಕೆ ಅನ್ವಯಿಸುವುದರಿಂದ ಇವುಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

ಮಾನವನು ಅಸ್ತಿತ್ವದ ಮೂಲವನ್ನಾಗಲಿ ಗುರಿಯನ್ನಾಗಲಿ ನಿರ್ಧರಿಸುವುದು ಅಸಾಧ್ಯ ಎಂಬ ತಾತ್ವಿಕ ದೃಷ್ಟಿಯಲ್ಲಿ ಏಕಾಕಿತನ ಅವನ ಮೂಲಭೂತ ಅವಸ್ಥೆಯಾಗಿ ಪರಿಣಮಿಸುತ್ತದೆ. ಕಾಫ್ಕ, ಕಾಮೂ, ಬೆಕೆಟ್ ಮೊದಲಾದ ಯೂರೋಪಿಯನ್ ಕಾದಂಬರಿಕಾರರಿಂದ ಸ್ಫೂರ್ತಿಗೊಂಡ ಕನ್ನಡ ಕಾದಂಬರಿಕಾರರ ಜೀವನ ದರ್ಶನದಲ್ಲಿಯೂ ಕೂಡ ಈ ಏಕಾಕಿತನದಿಂದ ಉದ್ಭವಿಸುವ ಮುಖ್ಯ ಆಶವಾಗಿಬಿಟ್ಟಿತು. ಉದಾ. ಮುಕ್ತಿ, ಬಿರುಕು, ಗತಿಸ್ಥಿತಿ ಮೊದಲಾದ ಕಾದಂಬರಿಗಳನ್ನು ನೋಡಬಹುದು. ನವ್ಯ ಕಾದಂಬರಿಗಳ ಹೊಸ ತನಕ್ಕೂ ಅವುಗಳ ಮೌಲ್ಯ ಪ್ರಜ್ಞೆಗೂ ನಿಕಟವಾದ ಸಂಬಂಧಗಳನ್ನು ಇದ್ದಕ್ಕಿದ್ದ ಹಾಗೆ ಒಪ್ಪಿಕೊಳ್ಳುವುದಿಲ್ಲ. ಇದು ಅವರ ಮನೋಧರ್ಮ ಮತ್ತು ತಾತ್ವಿಕ ದೃಷ್ಟಿ. ಉದಾ: ಗಂಗವ್ವ ಗಂಗಾಮಾಯಿಯ ಗಂಗದೋಕ ಕಲ್ಪನೆಯನ್ನು ನೋಡಬಹುದು.

ಹೊಸ ಮೌಲ್ಯಗಳನ್ನು ಒಪ್ಪಿಕೊಳ್ಳುವ ಮೂಲಕ ಸಾಂಸ್ಕೃತಿಯ ಸ್ವರೂಪವನ್ನೆ ಬದಲಿಸಲು ನವ್ಯಕಾದಂಬರಿಕಾರ ಪ್ರಯತ್ನಿಸುತ್ತಾನೆ. ನವ್ಯ ಕಾಂದಬರಿಕಾರ ಒಪ್ಪಿಕೊಳ್ಳುವ ಮೌಲ್ಯಗಳು ಅಸ್ತಿತ್ವವಾದ ಮತ್ತಿತರ ಪಾಶ್ಚಾತ್ಯ ತತ್ವ ಪ್ರಣಾಲಿಗಳ ಪ್ರಭಾವದಿಂದ ಬಂದವುಗಳು. ನವ್ಯ ಕಾದಂಬರಿ ತಾತ್ವಿಕತೆ ಅದನ್ನು

ವಾಸ್ತವ ಸಹಜವಾದ ನಶ್ವರತೆಯಿಂದ- ರಕ್ಷಿಸುತ್ತದೆಯನ್ನಬಹುದು. ನಿಜವಾದರೂ, ಅದರ ತಾತ್ವಿಕತೆಯೇ ಅದಕ್ಕೆ ಮುಳುವಾಗಬಲ್ಲದು ನವ್ಯ ಕಾದಂಬರಿಯ ಕಲಾತ್ಮಕತೆಯನ್ನು ಒಪ್ಪಿಕೊಂಡರೂ ಅದರ ತಾತ್ವಿಕತೆಯನ್ನು ಪ್ರಶ್ನಿಸಿದವರಿದ್ದಾರೆ. ಅವರಲ್ಲಿ ಮುಖ್ಯವಾದ ಲುಕಾಚ್ ಅವರ ವಿಚಾರಗಳನ್ನು ಕೆಳಗಿನಂತೆ ನೋಡಬಹುದಾಗಿದೆ.

೧. ನವ್ಯ ಕಾದಂಬರಿಯಲ್ಲಿ ಕಂಡುಬರುವ ಅತಿಯಾದ ಆತ್ಮ ನಿಷ್ಠತೆಯ ಮೂಲಕ ಕಲ್ಪಿತ ಸಾಧ್ಯತೆಗಳು ಮತ್ತು ನಿಜವಾದ ಸಾಧ್ಯತೆಗಳ ನಡುವಿನ ಅಂತರವೇ ಹೊರಟು ಹೋಗುತ್ತದೆ.

೨. ನವ್ಯ ಕಾದಂಬರಿ ವಾಸ್ತವದ ಅನೇಕ ಅಂಶಗಳನ್ನು ದುರ್ಲಕ್ಷಿಸುವುದರಿಂದ ವಾಸ್ತವದ ಬಗೆಗಿನ ನಮ್ಮ ತಿಳುವಳಿಕೆ ಕಡಿಮೆಯಾಗುತ್ತ ಹೋಗುತ್ತದೆ. ಇಂಥ ಪ್ರಮಾದ ವ್ಯಕ್ತಿತ್ವದ ತಿಳುವಳಿಕೆಯಲ್ಲಿಯೂ ನಡೆಯಬಹುದು. ನವ್ಯ ಕಾದಂಬರಿಯಲ್ಲಿ ವ್ಯಕ್ತಿತ್ವದ ಸ್ವತಂತ್ರಕ್ಕಿಂತ ಅದರ ವಿಘಟನೆಯೇ ಹೆಚ್ಚಾಗಿ ಕಂಡುಬರುತ್ತದೆ.

ನವ್ಯ ಕಾದಂಬರಿ ಸಾಧಿಸಿದ ಯಶಸ್ಸು ಶ್ರೇಷ್ಠವಾದುದು ಎಂದು ಒಪ್ಪಲೇ ಬೇಕು. ಮಾದ್ಯಮದ ಬಗ್ಗೆ ಅದು ಬೆಳಸಿಕೊಂಡು ಬಂದ ತಿಳಿವು ಪ್ರಬುದ್ಧವಾದದ್ದು. ನವ್ಯಕಾದಂಬರಿಗಳಲ್ಲಿ ಕಂಡುಬರುವ ಸಂಕೀರ್ಣ ಕಾಲ ಪ್ರಜ್ಞೆ ಎರಡನೇಯದು ಅದು ಕಾದಂಬರಿಯ ಪ್ರಬಂಧ ಧ್ವನಿಯೆತ್ತಿಕೊಡುವ ವಿಶೇಷ ಲಕ್ಷಣ. ನವ್ಯ ಕಾದಂಬರಿಕಾರ ಹೆಚ್ಚು ಯಶಸ್ವಿಯಾಗಿದ್ದಾನೆ. ಏಕೆಂದರೆ ಕಾದಂಬರಿಕಾರ ಕಾದಂಬರಿಯಲ್ಲಿ ಘಟನೆಗಳನ್ನು ವಿವರಗಳನ್ನು ಉಪಯೋಗಿಸುವ ರೀತಿಗೆ ಸಂಬಂಧಪಟ್ಟಿದ್ದು. ವಾಸ್ತವ ಮಾರ್ಗದ ಕಾದಂಬರಿಕಾರರಿಗಿಂತ ವಿವರಗಳನ್ನು ಒಟ್ಟು ಆಶಯಕ್ಕಾಗಿ ದುಡಿಸಿಕೊಳ್ಳುವನು. ಅವನ ಕೃತಿಗಳಲ್ಲಿ ಪ್ರಬಂಧ ಧ್ವನಿ ಹುಟ್ಟುತ್ತದೆ. ಮೊಕಾಶಿಯವರ ಗಂಗವ್ವ ಮತ್ತು ಗಂಗಾಮಾಯಿಯಲ್ಲಿ ಸಾಲಿಗ್ರಾಮ ಪ್ರಸಂಗ ಒಟ್ಟು ಕಾದಂಬರಿ ಬಂಧಕ್ಕೆ ಇದ್ದಕ್ಕೂ ನಿಕಟವಾದ ಸಂಬಂಧವನ್ನು ಹೊಂದುತ್ತದೆ. ಕಿಟ್ಟಿಗೆ ಬೀಳುವ ಸಾಲಿಗ್ರಾಮ ಕಳೆದು ಹೋದುದರ ದುಃಸ್ವಪ್ನ ಮತ್ತು ಗಂಗವ್ವನಿಂದ ಅದರ ಉಪಶಮನ ಅವನ ಮನೋವೃತ್ತಿಯಲ್ಲಿ ಮಹತ್ವದ ಬದಲಾವಣೆಗಳು ಜರಗುವುದಕ್ಕೆ ಕಾರಣವಾಗುತ್ತದೆ.

.....ಕಿಟ್ಟಿಗಂತೂ 'ಅವ್ವ ನನ್ನನ್ನು ಕಾಯ್ದಳು' ಎಂದೇ ಕಲ್ಪನೆಯಾಯಿತು ತಮ್ಮ ಕಾಲಧರ್ಮ ಕಾಲಚಾರನ ಜೀವಂತ ದೀವಿಗೆಯಂತೆ ತಾಯಿ ಕಂಡಳು. ಅದೇ ಸಾಲಿಗ್ರಾಮ ಪೆಟ್ಟಿಗೆ ಬಿಟ್ಟು ಹೊರಗೆ ಬಂದು ತನ್ನ ಪೂರ್ವದ ತಾಮ್ರದ ತಟ್ಟೆಯಲ್ಲಿ ಪ್ರಸ್ಥಾಪಿತನಾದನು. ಗಂಗವ್ವನು ಮಾತೃಸ್ಥಾನದಲ್ಲಿ ಪ್ರಸ್ಥಾಪಿತಳಾದಳು.

ಗಂಗವ್ವ ಗಂಗಾಮಾಯಿಯಲ್ಲಿ ನಡೆಯುವ ಈ ಘಟನೆ ಕಿಟ್ಟಿಯ ಪಾತ್ರದ 'ಬೆಳವಣಿಗೆ'ಗೆ ಸಂಬಂಧಪಟ್ಟಿದ್ದರಿಂದ ಅದು ಕಾದಂಬರಿಯ ಅವಿಭಾಜ್ಯ ಅಂಗವಾಗಿ ಬಿಡುತ್ತದೆ. ಹೀಗಿದ್ದರೂ ಅದರ ಸಾಂಕೇತಿಕ ಮಹತ್ವ ಕಿಟ್ಟಿಯ ಪಾತ್ರಕ್ಕೆ ಮಾತ್ರ ಅಥವಾ ಸ್ವಲ್ಪಮಟ್ಟಿಗೆ ಅವನ ಹೆಂಡತಿ ರತ್ನಳ ಪಾತ್ರಕ್ಕೆ ಸೀಮಿತವಾಗುತ್ತದೆ.

ಯಾವುದೇ ಒಂದು ಕಾದಂಬರಿ ಯಶಸ್ಸು ಅದು ಅಳವಡಿಸಿಕೊಂಡಿರುವ ವಸ್ತು ಮತ್ತು ತಂತ್ರದಿಂದಾಗುತ್ತದೆ. ತಂತ್ರ ಎಂದರೆ ಸಾಮಾನ್ಯವಾಗಿ ಕಾದಂಬರಿಯ ವಸ್ತುವನ್ನು ಸಂಘಟಿಸುವ ವಿಧಾನ. ಕುತೂಹಲ ಕೇಳುವಂತೆ ಕತೆ ಹೇಳುವ ರೀತಿ ಪಾತ್ರಗಳ ಪರಸ್ಪರ ಸಂಬಂಧ ಬೆಳವಣಿಗೆ ಉದ್ದೇಶಗಳನ್ನು ಚಿತ್ರಿಸುವ ಕೌಶಲ್ಯ, ಘಟನೆಗಳನ್ನು ಆಕರ್ಷಕವಾಗಿ ನಿರೂಪಿಸುವ ಬುದ್ಧಿವಂತಿಕೆ ಎಂಬ ಭಾವನೆ ಇರುವುದರಿಂದ, ಎಲ್ಲವನ್ನೂ ಬಿಟ್ಟು ವಿಮರ್ಶಕ ಇದರ ಬಗ್ಗೆ ನಿರೂಪಣೆಯ ವಿಧಾನಕ್ಕಿಂತ ನಿರೂಪಿತವಾದ ವಸ್ತು ಮತ್ತು ಲೇಖಕನ ಧೋರಣೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಸಿಗಬೇಕು.

ಮಾರ್ಕ ಶೋರರ್‌ನ ಪ್ರಕಾರ ತಂತ್ರವೆಂದರೆ ''ಲೇಖಕನ ಸಾಮಗ್ರಿಯಾದ ಅನುಭವ ತನ್ನ ಬಗ್ಗೆ ಸರಿಯಾಗಿ ಗಮನ ಕೊಡಲು ಅವನನ್ನು ಒತ್ತಾಯಿಸುವ ಸಾಧನ ತಂತ್ರವೆಂದರೆ ಲೇಖಕನಿಗೆ ತನ್ನ ವಸ್ತುವನ್ನು ಅನಾವರಣಗೊಳಿಸಲು ಶೋಧಿಸಲು, ವಿಕಾಸಗೊಳಿಸಲು, ಅದರ ಅರ್ಥವನ್ನು ಸೂಚಿಸಲು ಹಾಗೂ ಕೊನೆಯದಾಗಿ ವಸ್ತುವನ್ನು ಬೆಲೆಗಟ್ಟಲು ಇರುವ ಏಕಮಾತ್ರ ಸಾಧನ.''[೬] ಆದ್ದರಿಂದ ವಸ್ತು ಮತ್ತು ಧೋರಣೆಗಳಿಂದ ತಂತ್ರವನ್ನು ಬೇರ್ಪಡಿಸಲು ಆಗುವುದಿಲ್ಲ. ಇದೇ ಕಾರಣಕ್ಕಾಗಿ ವಸ್ತುವಿನ ವಿಶ್ಲೇಷಣೆ ಅದರ ತಂತ್ರದ ವಿಶ್ಲೇಷಣೆ ಆಗಬೇಕಾಗಿದೆ. ''ವಸ್ತುವನ್ನು ಅತ್ಯಂತ ತೀಕ್ಷ್ಣ ತಾಂತ್ರಿಕ ಪರೀಕ್ಷೆಗೆ ಒಳಪಡಿಸಬಲ್ಲ ಲೇಖಕ ಅತ್ಯಂತ ಸಮಾಧಾನ ಕೊಡುವಂಥ ತಿರುಳುಳ್ಳ ಪಿಂಡವುಳ್ಳ, ಅನುಕರಣಿಸುವ ಪರಮಾವಧಿ, ಅರ್ಥವುಳ್ಳ ಕೃತಿಗಳನ್ನು ರಚಿಸುತ್ತಾನೆ.''[೭] ಎಂದು ಶೋರರ್ ಮಾತನಾಡುತ್ತಾರೆ. ಮತ್ತೆ ತಂತ್ರದ ಬಗ್ಗೆ ಹೇಳುತ್ತಾ, ಬದುಕಿನ ಸೂಕ್ಷ್ಮ ಹಾಗೂ ಮಹತ್ತರ ತಾಂತ್ರಿಕ ಸಾಧನೆಗಳನ್ನು ನಿರ್ಮಿಸಿಕೊಳ್ಳಬೇಕಾಗುತ್ತದೆ. ವಸ್ತುವಿನ ಅರ್ಥವನ್ನೆಲ್ಲ ಅದರ ನೆರಳುಗಳೊಂದಿಗೆ, ಅಭಿವ್ಯಕ್ತಿಸಬಲ್ಲ ಸಾಮರ್ಥ್ಯ ಅವುಗಳಿಗಿರಬೇಕಾಗುತ್ತದೆ. ಇಲ್ಲವಾದರೆ ಮಹತ್ವ ವಸ್ತುವಿದ್ದೂ, ಅದರ ಸಾಧ್ಯತೆಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಲಾರದೆ ಕೃತಿ ಸೋಲುತ್ತದೆ. ವಸ್ತುವಿನ ಪೂರ್ಣ ಅಭಿವ್ಯಕ್ತಿ ತಂತ್ರವೇ ಎಂದಾಗುತ್ತದೆ. ಒಂದು ಸಮರ್ಥವಾದ ಮತ್ತು ಸೂಕ್ಷ್ಮವಾದ ತಂತ್ರ ಸಮರ್ಥವಾದ ಮತ್ತು ಸೂಕ್ಷ್ಮವಾದ ವಸ್ತುವನ್ನು ಪೂರ್ಣವಾಗಿ ನಿರೀಕ್ಷಿಸುತ್ತದೆ. ವಸ್ತುವಿಲ್ಲದ ಹೋದರೆ ತಾಂತ್ರಿಕ ನೈಪುಣ್ಯವೆಲ್ಲ ಕೇವಲ ತೋರಿಕೆಯದಾಗುತ್ತದೆ.

ಹೀಗೆ ಕಾದಂಬರಿಯ ನಿರೂಪಣಾವಿಧಾನವನ್ನು ನಿರ್ಧರಿಸುವುದರಲ್ಲಿ ನಿರೂಪಣೆಯ ದೃಷ್ಟಿಕೋನ ಕಾದಂಬರಿ ಮುಖ್ಯ ಘಟನೆ ಪಾತ್ರಗಳನ್ನು ಕಾಣುವ ಕಣ್ಣು ನಿರೂಪಿಸುವ ಕೋನವಾಗಿದೆ. ದೃಷ್ಟಿಕೋನವೆಂದರೆ ಕತೆಗಾರ ತನ್ನ ಕಥೆಯೊಂದಿಗೆ ಹೊಂದಿರುವ ಸಂಬಂಧವಾಗಿದೆ. ಈ ಸಂಬಂಧ ಮುಖ್ಯವಾಗಿ ಎರಡು ರೀತಿಯದಾಗಿರಬಹುದು. ಮೊದಲನೆಯದಾಗಿ ಲೇಖಕರೇ ನೇರವಾಗಿ ಕಥೆಯನ್ನು ಹೊರಗಿನಿಂದ ಹೇಳಬಹುದು. ಕಾದಂಬರಿಯ ವಸ್ತು ಪಾತ್ರ ಘಟನೆಗಳಲ್ಲಿ ಅವನ ಸೃಷ್ಟಿಯೇ ಆದ್ದರಿಂದ ಸರ್ವಸಾಕ್ಷಿ ಪ್ರಜ್ಞೆಯಿಂದ

ಕಥೆಯನ್ನು ನಿರೂಪಿಸುತ್ತಾನೆ. ಘಟನೆ ಪಾತ್ರಗಳ ಆಶಯಗಳ ಮೇಲೆ ಟೀಕೆ ಟಿಪ್ಪಣಿ ಸೇರಿರಬಹುದು. ಜೀವನದ ಬಗ್ಗೆ ತತ್ವಜ್ಞಾನ ಹೇಳಬಹುದು. ಮೊಕಾಶಿಯವರ 'ಪ್ರಿಯ ವಾಚಕರೆ' ತಂತ್ರ ಈ ಬಗೆಯದು.

ಎರಡನೆಯದಾಗಿ, ಲೇಖಕ ಕಥೆಯನ್ನು ಯಾವುದಾದರೂ ಒಂದು ಪಾತ್ರದ ದೃಷ್ಟಿಕೋನದ ಮೂಲಕ ಒಳಗಿನಿಂದ ಆತ್ಮ ಕಥನದ ರೀತಿಯಲ್ಲಿ ನಿರೂಪಿಸಬಹುದು. ವೈದ್ಯರ ಕೃತಿ ಹಳ್ಳ ಬಂತು ಹಳ್ಳ ಉದಾಹರಿಸಬಹುದು. ವೈಯಕ್ತಿಕ ಸಮಸ್ಯೆ, ಆಧ್ಯಾತ್ಮಿಕ, ನೈತಿಕ ಘರ್ಷಣೆ, ತಪ್ಪೊಪ್ಪಿಗೆ, ಆತ್ಮ ಶೋಧನೆಗಳಂಥ ವಿಷಯಗಳಿಗೆ ಈ ವಿಧಾನ ಹೆಚ್ಚು ಸೂಕ್ಷ್ಮವಾದದು. ಪಾತ್ರಗಳು ತಮ್ಮ ಅನುಭವವನ್ನು ತಾವೇ ಹೇಳಿಕೊಳ್ಳುವುದರಿಂದ ಅನುಭಕ್ಕೊಂದು ವೈಯಕ್ತಿಕ ತೀವ್ರತೆ, ಸಾಮೀಪ್ಯ ಪ್ರಾಮಾಣಿಕತೆ ಬರುತ್ತವೆ.

ಈ ಎರಡು ವಿಧಾನಗಳ ಅಂತರವನ್ನು ನೋಡಿದಾಗ ಲೇಖಕ ಅಲ್ಲಿ ವಾಸ್ತವವಾಗಿ ಇರುವುದನ್ನೆಲ್ಲಾ ವಿವರವಾಗಿ ವರ್ಣಿಸುತ್ತಾನೆ. ಉತ್ತಮ ಪುರುಷ ನಿರೂಪಣೆಯಲ್ಲಿ ಒಂದು ಪಾತ್ರ ತನ್ನ ಆಗಿನ ಮನಸ್ಥಿತಿಯಲ್ಲಿ ತನಗೆ ಕಾಣಿಸಿದ್ದನ್ನು ತನಗೆ ಅರ್ಥವಾದ ಹಾಗೆ ವಿವರಿಸುತ್ತಾನೆ. ಶಿವರಾಮ ಕಾರಂತ, ಕುವೆಂಪು, ಶ್ರೀನಿವಾಸ ಅವರ ಹೆಚ್ಚಿನ ಕಾದಂಬರಿಗಳಲ್ಲಿ ಲೇಖಕರೇ ಸ್ವತಃ ಕಥೆ ಹೇಳುವ ಕ್ರಮವನ್ನು ನೋಡಬಹುದು. ಇಲ್ಲಿ ಬದುಕು ತನ್ನ ಅಗಾದ ವೈವಿದ್ಯ ವಿಸ್ತಾರಗಳಿಂದ, ಚೈತನ್ಯ ಪೂರ್ಣವಾದ ವಾಸ್ತವ ವಿವರಗಳಾದ ಬೆರಗುಗೊಳಿಸಬಲ್ಲದು. ಆದರೆ ವಸ್ತು ವೈಯಕ್ತಿಕವಾದಾಗ, ಸಾಮಾಜಿಕ ಬಹಿರಂಗ ಸ್ವರೂಪಕ್ಕಿಂತ ನೈತಿಕ ಅಥವಾ ಆಧ್ಯಾತ್ಮಿಕ ಸ್ವರೂಪದ್ದಾದಾಗ ಸೀಮಿತ ದೃಷ್ಟಿಕೋನವನ್ನು ಬಳಸುತ್ತಾರೆ.

ಭಾಷೆ ಒಂದು ಸಾಮಾಜಿಕ ಸೃಷ್ಟಿ, ಸಾಹಿತ್ಯ ಬೇರೆ ಅಲ್ಲ ಭಾಷೆ ಬೇರೆ ಅಲ್ಲ. ಏಕೆಂದರೆ ಸಾಹಿತ್ಯ ಸಂಬಂಧಿಸುವುದು ಭಾಷೆಯಲ್ಲಿಯೇ ಸಾಹಿತ್ಯ ಸೃಷ್ಟಿ ಭಾಷೆಯ ಮುಖಾಂತರ ಮತ್ತು ಭಾಷೆಯಲ್ಲಿಯೇ ಆಗುವಂತ ಒಂದು ವಿಶಿಷ್ಟ ಸಂವಹನ ಕ್ರಿಯೆ. ಶೈಲಿ ಶಾಸ್ತ್ರಜ್ಞರ ಪ್ರಕಾರ ಕೂಡ ಸಾಹಿತ್ಯವೆಂದರೆ ಅದರ ಭಾಷೆ ಕಥೆಗಳಾಗಲಿ, ಪಾತ್ರಗಳಾಗಲಿ, ಘಟನೆಗಳಾಗಲೀ, ಸನ್ನಿವೇಶಗಳನ್ನಾಗಲಿ, ಓದುಗರು ಅಥವಾ ವಿಮರ್ಶಕರ ಅರಿವಿಗೆ ತಂದುಕೊಡುವುದರ ಮಾಧ್ಯಮ, ಯಾವುದೇ ಒಂದು ಕಾದಂಬರಿಗೆ ಭಾಷೆ, ಶೈಲಿ ತಂತ್ರಗಳು ವಸ್ತುನಿಷ್ಠೇ ಪ್ರಮುಖ ಸಂಗತಿಗಲು ಇವುಗಳನ್ನು ಪ್ರತ್ಯೇಕಗೊಳಿಸಿ ತೋರಿಸಲು ಸಾಧ್ಯವಿಲ್ಲ ಶೈಲಿ ಎಂಬುದು ಇಂಗ್ಲೀಷಿನ Style ಎಂಬುದರ ಸಂವಾದಿ ರೂಪ. ಶೈಲಿಯೆಂಬುದು, ಸಿದ್ಧರೂಪವಲ್ಲ. ''Style means waites's System of Expressive neans including a Specitic Choice of words phraselogy Syntav and other literay Components'' ಎಂದ ವಿಮರ್ಶಕರೊಬ್ಬರು ಶೈಲಿಯನ್ನು ವ್ಯಾಖ್ಯಾನಿಸಿದ್ದಾರೆ. ಸಾಹಿತಿಯು ತನ್ನ ಅನುಭವದ ಸಮುಷ್ಟ ಪ್ರಜ್ಞೆಯ ರೂಪದಲ್ಲಿ ಹೊರ ಹಾಕುವ ಶೈಲಿ ತನ್ನಿಂದ ತಾನೇ ಆ ಪ್ರಯತ್ನ ಪೂರ್ವಕವಾದ ರೂಪ ಪಡೆದುಕೊಳ್ಳುತ್ತದೆ. (ವಾಯ್ ಎಂ. ಭಜಂತ್ರಿ, ೨೦೦೨ ಅಪ್ರಕಟಿತ ಪಿ.ಎಚ್.ಡಿ ಮಹಾಪ್ರಬಂಧ)

ಶಾಶ್ವತ ಸಾಹಿತ್ಯದಲ್ಲಿ ಮೊಕಾಶಿಯವರು ಶೈಲಿಯ ಬಗ್ಗೆ ಈ ರೀತಿ ಪ್ರಸ್ತಾಪಿಸುತ್ತಾರೆ. ''ಶಾಶ್ವತತೆ ಶಾಶ್ವತೆಯ ಅಪೇಕ್ಷೆಯಿಂದ ಬರುವ ಗುಣವಲ್ಲಿ ಜೀವನ ನಿಷ್ಠೆ ಪಾತ್ರಗಳಿಗೆ ತೋರುವ ಗೌರವ, ಸಮಯಜ್ಞತೆ, ಸಂದರ್ಭದ ಯಥಾರ್ಥ ಕಲ್ಪನೆ ಔಚಿತ್ಯ ಇವುಗಳಿಂದಲೇ ಬರುತ್ತದೆ. ಸರಳ ನೇರ ನಿರೂಪಣೆಯ ಶೈಲಿಯನ್ನು ನಾನು ಬಹು ಮೆಚ್ಚುತ್ತೇನೆ. ಒಳ್ಳೆಯ ಕಾದಂಬರಿಯಲ್ಲಿ ಸುತ್ತುವರಿಯುವ ಶೈಲಿಯನ್ನು ಮೆಚ್ಚುತ್ತೇನೆಯಾದರೂ ಥಾಮಸ್ ಮಾನ್‌ನ ಮ್ಯಾಜಿಕ್ ಮೌಂಟನ್ ಜೊಸೆಫ್ ಟ್ರಲಜಿಯಲ್ಲಿರುವಂತೆ ಸುತ್ತುವರಿದ, ಆದರೆ ಓದುಗನ ಬುದ್ಧಿ ಶಕ್ತಿಯನ್ನು ಕೆಣಕುವ ಶೈಲಿಯನ್ನು ಮೆಚ್ಚುತ್ತೇನೆ''[೮] ಬೇಸರವಾಗದಂತೆ ಸುತ್ತುವರಿಯುವ ಕಲೆ ನಿಜವಾದ ಪ್ರತಿಭಾವಂತ ಲೇಖಕನ ವಿಶಿಷ್ಟಗುಣ.

ಯಾವುದೇ ಕಾದಂಬರಿಯಲ್ಲಿ ಬೆನ್ನೆಲುಬಾದ ಒಂದು ಕತೆ ಇರಬೇಕು. ಪಾತ್ರ ಪ್ರಧಾನ ಕಾದಂಬರಿಗಳೀರುವುದೇನೋ ನಿಜ. ಆದರೆ ಕೇವಲ ಪಾತ್ರಗಳ ವಿಶ್ಲೇಷ ಮಾಡಿದ ಕಾದಂಬರಿಗಳು ಆಗಿನ ಕಾಲಕ್ಕೆ ಮಾತ್ರ ಸೀಮಿತ. ಹಾಗೆಯೇ ಪರಿಸರವನ್ನು ಬಣ್ಣಿಸುವ ಕಾದಂಬರಿಗಳೂ ಶಾಶ್ವತವೆನಿಸುವುದು ಕಡಿಮೆ. ಆಯಾ ಪರಿಸರ ಅನುಭವವಿದ್ದ ಸೀಮಿತ ಸಂಖ್ಯೆಯ ಓದುಗರಿಗೆ ರುಚಿಸಬಹುದು. ''ಜೀವನದ ಶಾಶ್ವತ ಮೌಲ್ಯಗಳಾದ ಒಪ್ಪು ಒಳಿತು. ಸ್ನೇಹ, ಸೌಹಾರ್ದ, ವಿವೇಕ, ಲೌಕಿಕ ಪಾರಮಾರ್ಥಿಕ ಅಭಿವೃದ್ಧಿ ಧರ್ಮ ಅರ್ಥ, ಕಾಮ, ಮೋಕ್ಷಗಳಿಗೆ ಪೂರಕತೆ, ಮಾನಸಿಕ ಸಾಮಾಜಿಕ ಆರೋಗ್ಯಗಳ ಸಮೃದ್ಧಿ ಕಾಯಕ ಆದ್ಯಾತ್ಮಿಕ ಔನ್ನತ್ಯಗಳು ಪರಿಪಾಕದಲ್ಲಿ ಧ್ವನಿತವಾಗಬೇಕೆ ಹೊರತು ಅವರ ನೇರ ಹೇಳಿಕೆಗಳಾಗಬಾರದು''[೯] ಎಂಬುದು ಪುಣೇಕರ ನಿಲುವಾಗಿತ್ತು.

''ವ್ಯಕ್ತಿತ್ವ ಪ್ರಭಾರನ ಯುಗದಲ್ಲಿ ನೂರಾರು ತತ್ವಜ್ಞಾನಗಳು ಉದಯಿಸುತ್ತವೆ, ಸಾಯುತ್ತವೆ. ಕಲಾವಿದ ಅವಕ್ಕೆ ಮೋಸ ಹೋಗದೇ ಆಯಾ ತತ್ವಜ್ಞಾನಗಳು ಆಯಾ ತತ್ವಜ್ಞಾನಿಯ ವ್ಯಕ್ತಿತ್ವವನ್ನು ವಿವರಿಸುತ್ತವೆ. ಸರ್ವಕಾಲಿಕ ಮುಖವಾಡ ಧರಿಸಿ ಮೆರೆಯುತ್ತಿವೆ. ಪಾಶ್ಚಾತ್ಯ, ತತ್ವಜ್ಞಾನಿಗಳಂತೂ ಅತೀವ ಮಾರಕ ನಮ್ಮ ಕಣ್ಣುಗಳ ಮೇಲೆ ಮೋಹಕ ಪರದೆಯನ್ನು ಎರಚಿ ಪರಿಸರವನ್ನು ನೋಡುವುದನ್ನೆ ನಿಲ್ಲಿಸುತ್ತವೆ. ಭಾರತೀಯ ತತ್ವಜ್ಞಾನಿಗಳು ಕಲಾವಿದನಿಗೆ ಯಾವ ಆತಂಕವನ್ನು ತರುವುದಿಲ್ಲ. ಕಾಶ್ಮೀರ ಶೈವ ಸಿದ್ಧಾಂತ, ನಾಥ ಅವದೂತ ತತ್ವ, ವೇದಾಂತ ಇವುಗಳನ್ನು ಓದಿಯೇ ಕವಿಗಳಾದವರೂ ಉಂಟು, ನೀಷ, ಪ್ರಾಯಿಡ್, ಮಾರ್ಕ್ಸ್, ಸಾರ್ತ್ರಾರನ್ನು ಓದಿಯೇ ಕವಿಗಳಾದವರೂ ಉಂಟು, ನಿಷ, ಪ್ರಾಯಿಡ್, ಮಾರ್ಕ್ಸ್, ಸಾರ್ತ್ರರನ್ನು ಓದಿ ಮೇಧಾಶಕ್ತಿಗೆ ಮಂಕು ಕವಿದವರನ್ನು ನೋಡಿದ್ದೇವೆ. ಇಂಥವರ ಜೀವನದಲ್ಲಿ ಅಸುಖ,ಅಶಾಂತಿ ಪ್ರತಿಭೆಯಲ್ಲಿ ಗತಿಹೀನತೆ ಹೆಚ್ಚು. ಸಮಕಾಲೀನ ತತ್ವಜ್ಞಾನ ಓದಿದರೂ ತಮ್ಮ ಪರಿಸರದ ಅರಿವನ್ನು ಲೇಖಕ ಕಳಕೊಳ್ಳಬಾರದು.''[೧೦]

ವಿಮರ್ಶೆಯು ಶಾಶ್ವತ ಸಾಹಿತ್ಯವನ್ನು ಅವಲಂಬಿಸಬಾರದು. ವ್ಯಕ್ತಿತ್ವಯುಗದಲ್ಲಿ ವಿಮರ್ಶೆ ಕೂಡ ವ್ಯಕ್ತಿತ್ವದ ಅಭಿವ್ಯಕ್ತಿ.

ಶೈಲಿ ಪ್ರಧಾನವಾಗಿ ವ್ಯಕ್ತಿ ನಿಷ್ಠೆ ನಿಜ ಆದರೆ ಸಮುಷ್ಠಿವಾಗುವುದು ಉಂಟು. ಆದ್ದರಿಂದ ಸಾಹಿತಿಯ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ದರ್ಶನವೂ ಹೌದು. ಒಂದು ಸಮಾಜದ ಸಂಸ್ಕೃತಿಯನ್ನು ಬಿಂಬಿಸುವ ದರ್ಶನವೂ ಅಹುದು. ಅಂದರೆ ಒಬ್ಬ ಸಾಹಿತಿ ಶೈಲಿಯು ಅವನ ವ್ಯಕ್ತಿತ್ವವನ್ನಷ್ಟೇ ಅಲ್ಲದೆ ಆತ ಬದುಕಿದ ಸಮಾಜ ಸಂಸ್ಕೃತಿಯನ್ನು ದರ್ಶನ ಮೂಡಿಸುತ್ತಿದೆ. ಎನ್.ವಿ. ರಂಗಣ್ಣ ಅವರು ಹೇಳಿದ್ದನ್ನು ಕೆ.ವಿ. ನಾರಾಯಣರು ತಮ್ಮ ಪುಸ್ತಕದಲ್ಲಿ ಈ ರೀತಿ ಹೇಳಿದ್ದಾರೆ. 'ಆಲೋಚನೆಯ ಉಡುಗೆಯೇ ಶೈಲಿ! ಸುಂದರ ಕಾವ್ಯ ದೇವಿಯ ಮುಖ ಬಣ್ಣದ ಹೊಳಪೇ ಶೈಲಿ, ಕವಿಯ ಶೈಲಿ ಎಂದಿದ್ದಾರೆ. ಲೇಖಕರ ಭಾವನೆಗಳನ್ನು ಭಾಷೆಯ ವ್ಯಾಪ್ತಿಯಲ್ಲಿ ಕಟ್ಟಿ ಕೊಡುವ ಸಾಧ್ಯತೆಯನ್ನು ಶೈಲಿ ಎಂದು ಗ್ರಹಿಸಬಹುದು. ಲೇಖಕನಿಗೆ ಇರಬಹುದಾದ ಅಭಿವ್ಯಕ್ತಿ ಶಕ್ತಿಯ ಶೈಲಿ. ಇದೇ ರೀತಿ ಒಬ್ಬೊಬ್ಬ ಬರಹಗಾರ ರೀತಿಯು ತಮ್ಮದೇ ಆದ ವೈಶಿಷ್ಟತೆಯಿಂದ ಕೂಡಿದೆ. ಅಂತಯೇ ಭಾಷೆ ಮತ್ತು ಶೈಲಿಯು ಒಂದು ಕಾದಂಬರಿಯು ಕಾದಂಬರಿಕಾರ ಮನಸ್ಸು ಅನುಭವ ಚಿಂತನೆಯ ಫಲದ ಅಭಿವ್ಯಕ್ತಿಯಾಗಿರುತ್ತದೆ. ವಾಸ್ತವದ ಆಶ್ಚರ್ಯಕರ ಪ್ರತಿ ಸೃಷ್ಟಿ ನಿರ್ಮಾಣದ ಮೂಲಕ ಭಾಷೆ ಬಾಹ್ಯ ಜಗತ್ತನ್ನು ಯಶಸ್ವಿಯಾಗಿ ಪ್ರತಿನಿಧೀಕರಿಸಬಲ್ಲುದೆಂಬ ವಿಶ್ವಾಸ ಆದರ್ಶವಾದ ಮತ್ತು ವಾಸ್ತವವಾದವುಗಳು ತತ್ವ ಪ್ರಾಣಾಲಿಗಳ ಮೂಲಕ ಹತ್ತೊಂಬತ್ತನೆಯ ಶತಮಾನದ ಯುರೋಪಿನ ಸಾಹಿತಿಗಳಲ್ಲಿ ಬೆಳೆದು ಬಂದಿತು. ಅಂತಹದೇ ವಿಶ್ವಾಸವನ್ನು ನಾವು ಕನ್ನಡ ವಾಸ್ತವಮಾರ್ಗ ಕಾದಂಬರಿಕಾರರಲ್ಲಿ ಕಾಣುತ್ತವೆ. ಸ್ಥಳ, ಕಾಲಗಳಿಗೆ ಕಟ್ಟುಬಿದ್ದು ವಾಸ್ತವ ಕಾದಂಬರಿಗೆ ಎರಡು ಮೂರು ತಲೆಮಾರುಗಳನ್ನು ಒಳಗೊಂಡು ಇಲ್ಲಿನ ಜೀವನ ಕ್ರಮ, ಭಾಷಾಶೈಲಿಯ ಮೂಲಕ ಪಾತ್ರವನ್ನು ಜೀವಂತವಾಗಿಸುವ ಕಲೆ ಕಾಂದಬರಿ ಪ್ರಶಸ್ತಿಗಳಿಸಿಕೊಳ್ಳುವಲ್ಲಿ ಕಾದಂಬರಿಕಾರ ಕಾರಣೀಭೂತವಾಗಿದ್ದಾನೆ. ಉದಾ: 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ವೈದ್ಯರ ಬರವಣಿಗೆ ಶೈಲಿ ಮನೋಹರದ ಜೊತೆಗೆ ಅತ್ಯದ್ಭುತವಾಗಿದೆ. ಸಂಭಾಷಣೆ ಪ್ರಧಾನವಾದ ನೋಟ ಕಥನ ಶೈಲಿ.

ಮೊಕಾಶಿಯವರ 'ಗಂಗವ್ವ ಗಂಗಾಮಾಯಿ' ಮತ್ತು ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಗಳವಸ್ತು ಭಾಷೆ, ತಂತ್ರ ಶೈಲಿಯು ವಿಶ್ಲೇಷಣೆ ಹಿನ್ನೆಲೆಯಾಗಿ ತೌಲನಿಕವಾಗಿ ಅಧ್ಯಯನ ಕೈಗೊಳ್ಳುವುದು ಪ್ರಸ್ತುತವೆನಿಸುತ್ತವೆ.

ಗಂಗವ್ವ ಗಂಗಾಮಾಯಿ ದಾರ್ಶನಿಕ ನಿಲುವು ಹಾಗೂ ಪ್ರತಿಪರ ಧೋರಣೆಯಿಂದಾಗಿ ಧಾರ್ಮಿಕತೆಯನ್ನು ಘೋಷಿಸುವ ಕುಟುಂಬವೊಂದರ ಸಂಬಂಧಗಳ ಚಿತ್ರಿಸುತ್ತಲೇ ಮೂಡಿಬರುವ ಸಾಮಾಜಿಕತೆ ಹಲವಾರು ಸಂದರ್ಭಗಳಲ್ಲಿ ಮೂಡಿ ವಸಾಹತುಶಾಹಿ ಪರಿಣಾಮ, ಮನಃ ಪರಿವರ್ತನೆ ನೆಲೆಗಳು (ಅಂತಃಕರಣದ ನೆಲೆಯಲ್ಲಿ) ಇವೆಲ್ಲ ಕಾದಂಬರಿಯ ಢಾಳವಾದ ಸಂಗತಿಗಳು (Highlights)

ಆದರೆ ವೈದ್ಯರ ಕಾದಂಬರಿ ಪಂತ ಮನೆಯ ಚಿತ್ರಣದ ಮೂಲಕ ಸಮಕಾಲೀನ ಸಮಾಜವನ್ನು, ಸ್ವಾತಂತ್ರ್ಯ ಚಳುವಳಿಯ ಮೂಲಕ ರಾಜಕೀಯ ಪರಿಸ್ಥಿತಿಯನ್ನು, ವಾಸುದೇವಾಚಾರ್ಯರ ಮನೆಯ ಪರಿಸ್ಥಿತಿಯ

ಮೂಲಕ ಆರ್ಥಿಕತೆಯನ್ನು ಮಾದ್ವಕುಟುಂಬವೊಂದರ ಸಂಪ್ರದಾಯ ಆಚರಣೆಗಳ ಮೂಲಕ ಧಾರ್ಮಿಕತೆಯನ್ನು, ಪಂತ ಕುಟುಂಬದವರು ಧಾರವಾಡದಲ್ಲಿ ನೆಲೆಸಿ ಶಿಕ್ಷಣ ಪಡೆಯುವ ಮೂಲತಃ ವಕೀಲ ವೃತ್ತಿ ಆರಂಭಿಸಿದ ಸಂದರ್ಭ ಮುಖೇನ ಶೈಕ್ಷಣಿಕ ನಿಲುವನ್ನು ಪ್ರತಿಪಾದಿಸುತ್ತವೆ. ಕಾದಂಬರಿಯು ಏಕಕಾಲಕ್ಕೆ ಮೂರು ತಲೆಮಾರಿನ ಸಾಂಸ್ಕೃತಿಕ ಮತ್ತು ಚಾರಿತ್ರಿಕ ನೆಲೆಗಳನ್ನು ಪ್ರಸ್ತುತಪಡಿಸುವ ಬಗೆ ಅನನ್ಯವಾದದು. ಕುಟುಂಬವೊಂದರ ಸಂಸ್ಕೃತಿಕತೆಯೊಡನೆ ದೇಶದ ಚರಿತ್ರೆವೊಂದು ಹೆಣೆದುಕೊಂಡು ಮುಖಾಮುಖಿಯಾಗುತ್ತಲೇ ಸಿಗುತ್ತದೆ. ಮೂಲ ಪುರುಷ ಕಮಲನಾಭ ಪಂತನಿಂದ ಆರಂಭಿಸಿ ರಾಮುನವರೆಗೂ ಈ ಪ್ರವಾಹ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಾಗುವ ಪರಿ. ಇವೆಲ್ಲ ಕಾದಂಬರಿಯ ಪ್ರಮುಖಚಿತ್ರವಾಗಿ ಕಂಡುಬರುತ್ತವೆ.

ಗಂಗವ್ವ ಗಂಗಾಮಾಯಿ ಕಾಂದಬರಿಯಲ್ಲಿ ಎಲ್ಲ ನೆಲೆಗಳು ಏಕಕಾಲಕ್ಕೆ ಸ್ಪಷ್ಟವಾಗಿ ಗೋಚರಿಸಿದರೆ. ಇಲ್ಲಿ ಅಸ್ಪಷ್ಟ ಕಲ್ಪನೆಗಳಿವೆ. ಒಂದೊಮ್ಮೆ ವಸಾಹತು ಶಾಹಿ ಸ್ವಾತಂತ್ರ್ಯ ಸಂಗ್ರಾಮ. ಕೌಟಂಬಿಕ ಪರಿಸರಗಳೆರಡೂ ಸಮಾನ ವೇದಿಕೆಗಳಾದರೆ ಅಷ್ಟೇ ಅಲ್ಲದೇ ಕಾಲಘಟ್ಟ ಕೂಡ ಇಲ್ಲಿ ಭಿನ್ನಭಿನ್ನ ಒಂದು ಮೂರು ತಲೆಮಾರಿನ ವಸ್ತು ವಿಷಯವಾದರೆ. ಇನ್ನೊಂದು ಒಂದೇ ತಲೆಮಾರಿನಲ್ಲಿ ಒದಗುವ ಸ್ಥಿತ್ಯಂತರಗಳ ಮೊತ್ತ.

ಕಥೆಯ ನಾಯಕರಾದ ವಾಸು ದೇವಾಚಾರ್ಯ ಮತ್ತು ಇವರ ಪತ್ನಿ ತುಳಸಕ್ಕ ಇಡಿ ಮನೆತಕ್ಕೆ ಯಜಮಾನರಾಗಿ ಎಲ್ಲ ಸಂಬಂಧಗಳನ್ನು ಹಲವು ಸಂಕಷ್ಟ ಪರಿಸ್ಥಿತಿಗಳಲ್ಲೂ ಮೇಲೆತ್ತುತ್ತ ಎಲ್ಲರನ್ನು ತಮ್ಮ ತೆಕ್ಕೆಯಲ್ಲಿ ತೆಗೆದುಕೊಂಡು ಅನುಕರಣೀಯ ಗಟ್ಟಿಪಾತ್ರಗಳು. ಆದರೆ ಕಥಾನಾಯಕಿಯಳಾದ ಗಂಗವ್ವ ತನ್ನ ಮಗನ ಏಳಿಗೆಯನ್ನು ಬಯಸುವ ಎಂತಹ ಪರಿಸ್ಥಿತಿಯಲ್ಲಿಯೂ ಮಗನ ಸಲುವಾಗಿ ತ್ಯಾಗಮಾಡಿ ಸಂಕಷ್ಟ ಪರಿಸ್ಥಿಯಲ್ಲಿ ಸಂಬಂಧ ಉಳಿಸಿಕೊಳ್ಳುವುದನ್ನು ಕಾಣುತ್ತೇವೆ. ತನ್ನ ಸಂಬಂಧಿಯಾದ ರಾಘಪ್ಪನ ವಿರುದ್ಧ ಬದ್ದದ್ವೇಷವನ್ನು ಸಾಧಿಸುತ್ತಾಳೆ.

ಗಂಗವ್ವ ಗಂಗಾಮಾಯಿ ಕಾದಂಬರಿಯಲ್ಲಿ ಒಂದು ತಲೆಮಾರಿನ ಬದುಕಿನ ಸಾಮಾಜಿಕ ಚಿತ್ರವನ್ನು ಹೆಚ್ಚಾಗಿ ಪ್ರತಿಬಿಂಬಿಸಿ, ರಾಜಕೀಯ ಕ್ಷೇತ್ರದಲ್ಲಿ ಸ್ವಾತಂತ್ರ ಹೋರಾಟದ ಕತೆಯ ನೋವು ತಳಮಳ ಸ್ಫೂರ್ತಿ, ಪ್ರೇರಣೆಗಳು ಕೇವಲ ಅತೀತೆಯಂತೆ ಬಂದು, ನೇಪತ್ಯದ ಕಡೆಗೆ ಸರಿದು ಹೋಗಿದೆ. ಆದರೆ ಇದೆ ಸ್ವಾತಂತ್ರ ಹೋರಾಟ ನವಲಗುಂದದಂಥ ಒಂದು ಪುಟ್ಟ ಗ್ರಾಮದಲ್ಲಿ ಧಾರವಾಡದಂಥ ನಗರ ಪ್ರದೇಶಗಲ್ಲಿ, ತಳಮಳ ನೋವು. ಸ್ಫೂರ್ತಿ ಪ್ರೇರಣೆಗಳು ಈ ಹೋರಾಟದ ಗಂಭೀರ ಸ್ವರೂಪವು ಈ ಕಥೆಯಲ್ಲಿ ಪ್ರಧಾನವಾಗಿ ಕಾಣಸಿಗುತ್ತದೆ.

ಗಂಗವ್ವ ಗಂಗಾಮಾಯಿ ಇಂದೊಂದು ಮನೋಜನ್ಯ ಭಾವನಾಲಯದ ವಿಶ್ಲೇಷಣಾತ್ಮಕ ಕಾದಂಬರಿ. ಪಾತ್ರಗಳ ಮೂಲಕ ಮನುಷ್ಯನ ಮನೋಭಾವನೆಯ ನೈಜತೆಯನ್ನು ವಿಶ್ಲೇಷಿಸಿದೆ. ಹಠಮಾರಿತನ ಸ್ವಂತಿಕೆ,

ಸ್ವಾಭಿಮಾನ ಹೆಸರಿನಲ್ಲಿ ಪ್ರತಿಯೊಬ್ಬರಲ್ಲಿಯೂ ದುರಾಭಿಮಾನ ಮನೆಮಾಡಿ, ವ್ಯಯಕ್ತಿಕ ನೆಲೆಯಲ್ಲಿಯೇ ಚಿಂತಿಸುತ್ತಾರೆ. ಹೀಗಾಗಿ ಸಮಾನವೀಯ ಸಂಬಂಧಗಳಲ್ಲಿ ತೂಕವಿಲ್ಲದಂತಾಗಿ ಮನಷ್ಯ ಸಂಬಂಧಗಳು ಸತ್ತು ಹುಟ್ಟುತ್ತವೆ.

ಉದಾ: ದೇಸಾಯಿ ರಾಘುಪ್ಪ ಪರಸ್ಪರ ಪ್ರತಿಷ್ಠೆಗಾಗಿ ಸ್ವಾಭಿಮಾನದ ಹೆಸರಿನಲ್ಲಿ ತಾವೇ ಗೆಲ್ಲಬೇಕೆಂಬ ಕಾರಣದಿಂದ ಒಬ್ಬರ ಕ್ರಿಯೆಗೆ ಮತ್ತೊಬ್ಬರು ಪ್ರತಿಕ್ರಿಯೆ ತೋರಿಸುತ್ತ ಒಬ್ಬರನ್ನು ಮತ್ತೊಬ್ಬರು ಇಕ್ಕಟ್ಟಿನಲ್ಲಿ ಸಿಕ್ಕಿಸಲು ಹೋರಾಟ ಮಾಡುತ್ತಾರೆ. ಹೀಗಾಗಿ ತಾನೆ ಗೆಲ್ಲಬೇಕೆಂಬ ಪ್ರತಿಷ್ಠೆಯ ಹಸಿವು ತೀವ್ರವಾಗುತ್ತಲೇ ಹೋಗುತ್ತದೆ.

ಆದರೆ ಹಳ್ಳ ಬಂತು ಹಳ್ಳ ಕಾದಂಬರಿ ಉದ್ದಕ್ಕೂ ಬೆಳೆದು ನಿಂತ ವಾಸುದೇವಾಚಾರ್ಯರು ನವಲಗುಂದದ ಮನದಲ್ಲಿ ಸ್ಥಿರವಾಗಿ ನಿಲ್ಲುತ್ತಾ. ತನ್ನೊಂದಿಗೆ ಬಾಲ್ಯದಿಂದಲೇ ತಮ್ಮ ಮನೆಯಲ್ಲಿ ಆಶ್ರಯ ಪಡೆದ ಬ್ರಾಹ್ಮಣೇತರ ಹುಡುಗಿ, ನಿಯೋಗಿ ನಾರಾಯಣನಿಗೆ ಆಶ್ರಯ ನೀಡಿ ಪಂಥ ಮನೆತನದ ಒಬ್ಬ ಸದಸ್ಯರಂತೆ ಕಾಣುವ, ಮಾನವೀಯ ಸಂಬಂಧಗಳ ನೆಲೆಯಲ್ಲಿ ಹೋರಾಟ ಮಾಡುವ ಸಂಬಂಧಗಳನ್ನೇ ಕಾಣುತ್ತವೆ. ಇಡೀ ಒಂದು ನವಲಗುಂದ ಒಂದು ಅವಿಭಕ್ತ ಕುಟುಂಬದ ಹಾಗೆ ಗೋಚರಿಸುವ ಹಾಗೆ ಕಾಣುತ್ತದೆ.

ಒಂದು ಬ್ರಾಹ್ಮಣ ಸಮುದಾಯ ಕುಟುಂಬವು ಇತರ ಜಾತಿಯೊಂದಿಗೆ ಸೌಹಾರ್ದಯುತವಾಗಿ ನಡೆದುಕೊಂಡು ಬರುವುದು. ಒಂದು ಮುಸ್ಲಿಂ ಮತ್ತು ಬ್ರಾಹ್ಮಣ ಸಮುದಾಯ, ಮದುವೆ ಸಮಾರಂಭದಲ್ಲಿ ಭಾಗವಹಿಸುತ್ತದೆ. ಜಾತಿ ವರ್ಗದ ಸೌಹಾರ್ದವನ್ನು ಎತ್ತಿ ತೋರಿಸುತ್ತದೆ. ಧರ್ಮವನ್ನು ಮರೆತು ಮಾನವೀಯ ಸಂಬಂಧದ ಸೆಲೆಗಳು ಚಿಮ್ಮುತ್ತವೆ. ಆದರೆ ಒಂದೇ ಬ್ರಾಹ್ಮಣ ಜಾತಿಯಲ್ಲಿ ಒಬ್ಬ ವಿಧವೆಯನ್ನು ಅವಮಾನಗೊಳಿಸಿದ ಪ್ರಸಂಗವು ಧಾರ್ಮಿಕ, ಸಾಮಾಜಿಕ ಸಂಪ್ರದಾಯಗಳ ಜಿಡ್ಡಿಗೆ ಧರ್ಮದ ಕರ್ಮಠತನದಲ್ಲಿ ಮಾನವೀಯ ಸಂಬಂಧ ಸೆಲೆಗಳು ಬತ್ತಿಹೋಗುತ್ತವೆ.

ಪರಂಪರೆಗೆ ಇರುವ ಸಾಕುಗುಣ ಧಾರಾಳ ಶಕ್ತಿಯ ಬಗ್ಗೆ ಅಪಾರ ನಂಬಿಕೆ ಇದ್ದ ಕಾರಣ. ವಸಾಹತುಶಾಹಿ ಪ್ರಭಾವ ಪ್ರೇರಣೆಗಳೂ ಎಷ್ಟೆಯಾದರು ಕೃತಿಯ ವಸ್ತು ತುಸು ಸಂಪ್ರದಾಯವಾದಿಯ ನೆಲೆಯಲ್ಲಿ ಸಾಗಿ ಸಂಪ್ರದಾಯ ಶರಣ ಕಾಂದಬರಿ ಎಂದೇ ಗುರುತಿಸಿಕೊಳ್ಳುತ್ತದೆ. ಗಂಗವ್ವ ಗಂಗಾಮಾಯಿ ಮತ್ತು ಅಂಬಕ್ಕ, ವಾಸುದೇವಾಚಾರ್ಯರಿಂದ ಸಂಪ್ರದಾಯ ಮಡಿ ಮೈಲಿಗೆ ಪ್ರಧಾನ ವಸ್ತುವಾಗಿ ಕಾಣಿಸಿದರೂ ಅದು ಆಧುನಿಕ ಗಾಳಿಬೀಸಿ, ಆ ಗಾಳಿಗೆ ಪಂತರ ಮನೆತನ ಬೆಂಡಾಗಿ ಮಾರುತಿರಾಯ ಕಾಪಾಡು ಎಂದು ದೇವರ ಮೇಲೆ ಬಾರ ಹಾಕಿ ಸಾಗುವ ವಾಸುದೇವಾಚಾರ್ಯರ ಮೂಲಕ ತಿಳಿಯಬಹುದು.

ತಂತ್ರವನ್ನು ತನ್ನ ಕಲಾತ್ಮಕ ಅರ್ಥವನ್ನು ಶೋಧಿಸುವ ಅನಾವರಣಗೊಳಿಸುವ ಮತ್ತು ಬೆಲೆಗಟ್ಟುವ ಕಾದಂಬರಿಕಾರನ ಏಕಮೇವ ಸಾಧನವೆಂದೇ ಹೇಳಬಹುದು ವಸ್ತುವಿಗೆ ತಕ್ಕ ತಾಂತ್ರಿಕ ಅವಕಾಶಗಳು ಇಲ್ಲದಿದ್ದರೆ ಅದು ತನ್ನ ಸಂಪೂರ್ಣ ಅರ್ಥವನ್ನು ಬಿಟ್ಟುಕೊವುದಿಲ್ಲ. ಲೇಖಕ ಹೇಳ ಬಯಸಿದ್ದೇ ಬೇರೆ ಆಗಿ ಬಿಡಬಹುದು. ಪ್ರತಿಯೊಬ್ಬ ಕಾದಂಬರಿಕಾರರು ವಿಭಿನ್ನವಾದ ತಂತವನ್ನು ಬಳಸಿಕೊಂಡು ಕಾದಂಬರಿಯ ನಿರೂಪಣೆಗೆ ತೊಡಗಿರುತ್ತಾರೆ. ತಂತ್ರವು ಸೂಕ್ಷ್ಮವಾದ ವಸ್ತುವಿನ ಮಹತ್ವವನ್ನು ಸೂಚಿಸುತ್ತದೆ. ಹೀಗೆ ಈ ಎರಡು ಕಾದಂಬರಿಗಳಲ್ಲಿ ಬಳಕೆಯಾದ ತಂತ್ರವು ವಿಶಿಷ್ಟರೀತಿಯಲ್ಲಿ ಕಾಣಸಿಗುತ್ತದೆ. ವಸ್ತುವಿನ ವಿಶ್ಲೇಷಣೆಯೇ ತಂತ್ರದ ವಿಶ್ಲೇಷಣೆ ಆಗಬೇಕಾಗುತ್ತದೆ.

ಗಂಗವ್ವ ಗಂಗಾಮಾಯಿಯಲ್ಲಿ ಸ್ವತಃ ಲೇಖಕರೇ ನೇರವಾಗಿ ಕಥೆಯನ್ನು ಹೊರಗಿನಿಂದ ನಿರೂಪಿಸುತ್ತಾನೆ. ವಸ್ತು, ಪಾತ್ರಗಳು ಘಟನೆಗಳಲ್ಲಿ ಅವನ ಸೃಷ್ಟಿಯಲ್ಲಿಯೇ ಸಾಗುತ್ತದೆ. ಘಟನೆ ಪಾತ್ರಗಳ ಆಶಯಗಳ ಮೇಲೆ ತನ್ನ ಟೀಕೆ, ಟಿಪ್ಪಣಿಯನ್ನು ಸೇರಿಸುತ್ತಾನೆ. ಆದರೆ ಹಳ್ಳ ಬಂತು ಹಳ್ಳ ಕಾದಂಬರಿಯಲ್ಲಿ ಲೇಖಕರು ಕಥೆಯನ್ನು ಯಾವುದಾದರೂ ಒಂದು ಪಾತ್ರ ದೃಷ್ಟಿಕೋನದ ಮೂಲಕ ಒಳಗಿಂದ ಆತ್ಮಕಥನ ರೀತಿಯಲ್ಲಿ ನಿರೂಪಿಸಿರುವರು. ಪಾತ್ರಗಳ ತಮ್ಮ ಅನುಭವಗಳನ್ನು ತಾವೇ ಹೇಳಿಕೊಳ್ಳುವುದರಿಂದ ಪಾತ್ರಕ್ಕೆ ಜೀವಂತ ಕಳೆ ಬರುವುದನ್ನು ಈ ಕಾದಂಬರಿಯ ನಿರೂಪಣಾ ತಂತ್ರವನ್ನು ಕಂಡುಕೊಳ್ಳಬಹುದಾಗಿದೆ. ಆಧುನಿಕ ಸಂವೇದನೆಯ ಯಾತನೆ, ಏಕಾಕಿತನ, ಅನಾಥ ಪ್ರಜ್ಞೆಗೆ ಈ ತಂತ್ರ ಸಂವಾದಿಯಾಗಿದೆ. ವೈದ್ಯರ ನಿರೂಪಣೆ ಮಾನಸಿಕ ನೈತಿಕ ಭಾವನಾತ್ಮಕ ಆಸಕ್ತಿ ಸಂದಿಗ್ದತೆಗಳನ್ನು ಹುಟ್ಟಿಸುವಲ್ಲಿ ಯಶಸ್ವಿಯಾಗಬಲ್ಲದು.

ಗಂಗವ್ವ ಗಂಗಾಮಾಯಿ ನಿರೂಪಣೆ ಪ್ರಾರಂಭದಲ್ಲಿ ಲೇಖಕ ಕಥಾನಾಯಕಿಯ ಜೀವನದ ದರ್ಶನದೊಂದಿಗೆ ಮಾಹಿತಿಯನ್ನು ನೇರವಾಗಿ ಪ್ರಾರಂಭಿಸಿ ಸರಳವಾದ ರೀತಿಯಲ್ಲಿ ಹೇಳುತ್ತಾ ಸಾಗುತ್ತಾನೆ. ಗಂಗವ್ವ ಧಾರವಾಡದಿಂದ ಕಾಶಿಗೆ ಪ್ರಯಾಣ ಬೆಳಸಿ ಕಾಶಿಯಾತ್ರೆಯನ್ನು ಮಾಡುವ ಧಾರ್ಮಿಕ ಸಂದರ್ಭವನ್ನೇ ಎತ್ತಿಹಿಡಿದು ಪುಣ್ಯಕ್ಷೇತ್ರಗಳ ಪರಿಚಯವಾದರೆ ಮದ್ಯದಲ್ಲಿ ಒಂದು ಬ್ರಾಹ್ಮಣ ಮದ್ಯಮ ವರ್ಗದ ಕುಟುಂಬ ಜೀವನ ಚಿತ್ರಸಾಗಿ, ಕಿಟ್ಟೆಯ ಮೂಲಕ ಆಧುನಿಕ ವಸಾಹತುಶಾಹಿಯ ಪ್ರಭಾವ ಚಿತ್ರಣ. ದೇಸಾಯರ ಕುಟುಂಬದ ಗೊಂದಲವಾತಾವರಣ, ರಾಘುಪ್ಪಗೆ ಗಂಗವ್ವನ ಹಟ. ದ್ವೇಷ, ಅಲ್ಲೇ ಅಲ್ಲೆ ಮಾತಿನ ಚಕಮಕಿಯನ್ನು ತನ್ನದೇಯಾದ ತಂತ್ರ ಬಳಸಿ ಓದುಗರನ್ನು ಆಕರ್ಷಿಸಿರುವರು. ಪಾತ್ರದ ಮೂಲಕ ಪಾತ್ರದ ಮನದಾಳದ ತುಡಿತಗಳನ್ನು ನಿರೂಪಕರೇ ನಿರೂಪಿಸುವರು. ಕೊನೆಯದಾಗಿ ಅಚ್ಯುತನ ಪತ್ರದ ಬರಹವೇ ಕಾದಂಬರಿಯ ಅಂತ್ಯ ಹಾಡಿರುವುದನ್ನು ಕಾಣುತ್ತೇವೆ.

ಆದರೆ ಹಳ್ಳ ಬಂತು ಹಳ್ಳ ಕಾದಂಬರಿಯ ಪ್ರಾರಂಭದಲ್ಲಿ ಒಂದು ನಿಸರ್ಗ ವರ್ಣನೆಮೂಲಕ ಓದುಗರನ್ನು ಆಕರ್ಷಿಸುವುದರ ಜೊತೆಗೆ ಕಾನಪುರದಿಂದ ಆಗಮಿಸಿದ ಬ್ರಾಹ್ಮಣ ಯುವಕ ಆಗಮನವು

ಕೂತುಹಲವನ್ನು ಕೇರಳಿಸುತ್ತದೆ. ಕಾನಪುರದಿಂದ ನವಲಗುಂದಕ್ಕೆ ದೇಸಗತಿ ಆಗುಹೋಗುಗಳ ವರದಿ ತಂದು ಒಪ್ಪಿಸುವ ಬಗೆಯನ್ನು ಪ್ರಾರಂಭದಲ್ಲಿ ಕಾಣುವ ಚಿತ್ರಣ, ವಾಸುದೇವಾಚಾರ್ಯ, ಮತ್ತು ಅಂಬಕ್ಕನ ಮೂಲಕ ಬ್ರಾಹ್ಮಣ ವರ್ಗದ ಆಚಾರ ವಿಚಾರ, ಮಡಿ ಮೈಲಿಗೆ, ಸಂಪ್ರದಾಯವನ್ನು ಪರಿಚಯಿಸುವುದರ ಕಲೆ ವೈದ್ಯರು ಬಳಸಿಕೊಂಡ ತಂತ್ರಗಾರಿಕೆ ಕಾದಂಬರಿಯನ್ನು ಉನ್ನತ ಮಟ್ಟಕ್ಕೆ ಕರೆದ್ಯೊದಿವೆ. ಪ್ಲೇಗಿನ ಚಿತ್ರಣವನ್ನು ಅತ್ಯದ್ಭುತವಾದ ವರ್ಣನೆ ವಾಸ್ತವದ ಜೀವನವನ್ನೆ ಕಟ್ಟಿಕೊಡುವುದನ್ನು ಕಾಣುತ್ತೇವೆ. ಸ್ವತಂತ್ರ ಸಂಗ್ರಾಮದ ಹೋರಾಟ ಪರಿಣಾಮಕಾರಿ ಚಿತ್ರದಲ್ಲಿ ಘೋಷಣೆಗಳು ಹಾಡುಗಳ ಬಳಕೆ ತಂತ್ರಗಾರಿಕೆಯು ಅಲ್ಲೆ ಕಾಣಸಿಗುತ್ತವೆ. ಸಂಪ್ರದಾಯದ ನೆಲೆಯಲ್ಲಿ ಪ್ರಾರಂಭವಾದ ನಿರೂಪಣೆಯು ಆಧುನಿಕತೆಯನ್ನು ಒಗ್ಗಿಕೊಂಡು ನಿಸರ್ಗದ ನದಿಯು ಗುಪ್ತಗಾಮಿಸಿಯಾಗಿ ಕೊನೆಗೆ ಸಾಗರಂಪ್ರತಿಯನ್ನು ಸೇರುವಂತೆ ಮುಕ್ತಾಯ ನಿರೂಪಣ ತಂತ್ರಕ್ಕೆ ಹಿಡಿದ ಕೈಗನ್ನಡಿ, ಒಂದು ಅಧ್ಯಾಯವು ಹೊಸ ತಿರುವಿನಲ್ಲಿ ಪಾತ್ರಗಳ ಮೂಲಕ ನೇರ ನಿಷ್ಟುರ ನುಡಿಗಳ ಮೂಲಕ ಯಶಸ್ವಿಯಾಗಿವೆ.

ಉತ್ತರ ಕರ್ನಾಟಕದ ಪ್ರಾದೇಶಿಕ ನುಡಿ ಸಂಪತ್ತನ್ನು ಲೇಖಕರು ಬಳಸುವ ರೀತಿ ಅನನ್ಯಯವಾಗಿಸಿದೆ. ಧಾರವಾಡ ಕನ್ನಡವು ಕಾದಂಬರಿಯ ಸಂಭಾಷಣೆಯ ಜೀವನಾಡಿಯಾಗಿದೆ. ಗಂಗವ್ವ ದೇಸಾಯಿ ಅವರ ಮಾತುಗಳು ಅವರ ಸಂಪ್ರದಾಯಿಕ ವ್ಯಕ್ತಿತ್ವ ಪ್ರತೀಕಗಳಾಗಿವೆ. ರಾಘಪ್ಪನ ನಾಟಕೀಯ ಸಂಭಾಷಣೆ ಮೆಹಬೂಬಜಾನಳ ಉರ್ದು ಮಿಶ್ರಿತ ಕನ್ನಡ ಲೇಖಕರ ಸಂಸ್ಕೃತ ಪಾಂಡಿತ್ಯದಿಂದ ಹೊರಹೊಮ್ಮುವ ಅನುಭಮೃತದ ನುಡಿಗಳು ಹೀಗೆ ಇಡಿ ಕಾದಂಬರಿ ಶೈಲಿ ಸಮ್ಮಿಶ್ರತೆಯಿಂದ ರೋಚಕವಾಗಿದೆ. ''ಕಾದಂಬರಿಯಲ್ಲಿ ಜನ ಜೀವನ ಚಿತ್ರಣಕ್ಕೆ ಒತ್ತು ಕೊಂಡುವ ಲೇಖಕರು ನಿಸರ್ಗದ ವರ್ಣನೆಯನ್ನು ತಂದಿರುವುದು ಕಾದಂಬರಿಯಲ್ಲಿ ಕೊರತೆಯಾಗಿ ಕಂಡುಬರುವುದು.''[೧೦] ಪತ್ರಶೈಲಿಯ ವೈಶಿಷ್ಟ್ಯವೇ ಬೆರಗುಗೊಳಿಸುವಂತಹದು. ಮೂರು ಪತ್ರಗಳು ರಾಘಪ್ಪನ ಪೌರುಷ ತಗ್ಗಿಸುವಂತಿದ್ದಾರೆ. ರಾಘಪ್ಪನು ಕೊನೆಯದಾಗಿ ದೇಸಾಯಿ ಅವರಿಗೆ ಬರೆದ ಪತ್ರದ ಶೈಲಿ ದುರಂತ ವ್ಯಕ್ತಿತ್ವದ ಆತ್ಮಕಥನವಾಗಿದೆ. ಪಾತ್ರಗಳು ಅಂತರಂಗ ದರ್ಶನದಲ್ಲಿ ಲೇಖಕರ ಶೈಲಿ ಭಾವಮಯವಾಗುವ ಸಂದರ್ಭಗಳೂ ಇವೆ. ಪ್ರಿಯ ವಾಚಕರೇ ಎಂಬ ಶಬ್ದವೇ ಓದುಗರನ್ನು ತನ್ನತ್ತ ಸೆಳೆಯುವ ಕ್ರಮ. ನಾಟಕೀಯ ಲವಲವಿಕೆಯ ಸಂಭಾಷಣೆಯರಿಗೆ ನೈಜತೆಯನ್ನು ಒದಗಿಸದೆ ಧಾರವಾಡ ಪುಣೆಯ ಸಂಪರ್ಕದಿಂದಾಗಿ ಭಾಷೆಯಲ್ಲಿ ಮಹರಾಷ್ಟ್ರದ ಮರಾಠಿ ಭಾಷೆಯ ಪ್ರಭಾವ ದಟ್ಟವಾಗಿದೆ. ಅಲ್ಲಿಯ ಬಾಯಿ, ಆಯಿ, ರಾಯ ಎನ್ನುವ ಧ್ವನಿಮಾಗಳನ್ನು ಗಮನಿಸಬಹುದಾಗಿದೆ.

ಆದರೆ ಹಳ್ಳ ಬಂತು ಹಳ್ಳದಲ್ಲಿ ಲೇಖಕರು ಬಳಸಿಕೊಂಡ ಧಾರವಾಡ ನೆಲದ ಭಾಷೆಯ ಸೊಗಡು ತನ್ನ ನೈಜತೆಯಿಂದಾಗಿ ಬಹಳ ಪ್ರಭಾವಶಾಲಿ ಪ್ರಯೋಗವಾಗಿ ಕತೆಗೆ ಹೆಚ್ಚಿನ ಬಲವನ್ನು ತಂದು ಕೊಟ್ಟಿದೆ. ಬ್ರಾಹ್ಮಣ ಸಮುದಾಯದ ಸಂಪ್ರದಾಯವನ್ನು ಸಂಸ್ಕೃತ ಸೂಕ್ತಗಳ ಮೂಲಕ ಕೊಡಮಾಡಿದ್ದಾರೆ. ಅಲ್ಲೆ ಅಲ್ಲೆ ಬೈಗುಳ ಮಾತು ಅಂಬಕ್ಕ ಮತ್ತು ವಾಸುದೇವಾಚಾರ್ಯರ ನುಡಿಗಳು ಮೂಲಕ ಆ ಚಿತ್ರವನ್ನು

ಕಣ್ಣಿಗೆ ಕಟ್ಟುವಂತೆ ನೇರ ನಿಷ್ಠುರ ನುಡಿಗಳ ಮೂಲಕ ಭಾಷೆ ಶೈಲಿಯ ಬಳಕೆಯು ನಿಜವಾಗಿಯು ಆ ಪಾತ್ರವನ್ನು ಜೀವಂತವಾಗಿಸಿವೆ. ವೈದ್ಯರು ಅವರ ಭಾಷಾ ಚತುರತೆಗೆ ಕೆಳಗಿನ ಉದಾಹರಣೆಯಾಗಿ ನೋಡಬಹುದಾಗಿದೆ.

**ಉದಾ:** ''೧೮೫೭ರ ಬಂಡಾಯದ ಕಾಲಕ್ಕೆ, ವಿಧಿತ ಬೀಸಿದ ಪ್ರಚಂಡಗಾಳಿಗೆ, ಉತ್ತರ ಕಾಶಿಯಿಂದ ಒಂದು ಪುಂಕೇಸರಿ ಹಾರಿ ಹಾರಿ ಒಂದು ದಕ್ಷಿಣದ ನವಲಗುಂದದ ಸವಳು ಮಣ್ಣಿನಲ್ಲಿ ಗಟ್ಟಿಯಾಗಿ ನೆಟ್ಟಿತು.''

ಒಂದು ಭಾಷೆಯನ್ನು ವಾಸ್ತವ ನೆಲೆಯಲ್ಲಿ ಕಾಣಿಸಿದ್ದು ಕಂಡುಬರುತ್ತದೆ. ಅವರ ದೃಷ್ಟಿಕೋನವು ವಿಶಿಷ್ಠ ರೀತಿಯಲ್ಲಿರುವುದು ಕಂಡುಬರುತ್ತದೆ.

ಉತ್ತರ ಕರ್ನಾಟಕದ ಕನ್ನಡದ 'ಗಂಡುಮಟ್ಟ' ಎಂದು ಎಲ್ಲ ಸಾಹಿತಿಗಳು ಹೇಳುತ್ತಾರೆ. ಸತ್ಯಯುತವಾದ ಭಾಷೆ ಈ ಜಿಲ್ಲೆಯ ಜನರು ಸರಳವಾಗಿ ಒದಿಕೊಂಡು ಹೋಗುವ ಸಂತೋಷ ಪಡುವ ಭಾಷೆ. ಇಷ್ಟೊಂದು ಸಮರ್ಥವಾಗಿ ಪ್ರಾದೇಶಿಕ ಭಾಷೆಯನ್ನು ಬಳಸಿಕೊಂಡ ಇನ್ನೊಂದು ಕೃತಿ ಇಲ್ಲವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಭಾಷಾ ಬಳಕೆಯು ಸಾರ್ಥಕತೆಯನ್ನು ಪಡೆದಿದೆ. ಹಿಂದಿ, ಇಂಗ್ಲೀಷ ಭಾಷೆಗಳ ಪ್ರಭಾವ ಆಗಿದ್ದು ಮರಾಠಿ ಪ್ರಭಾವ ಆಡು ಮಾತಿನ ಹೊರತಾಗಿ ಇನ್ನು ಎಲ್ಲೂ ಕಾಣಸಿಗುವುದಿಲ್ಲ. ಇಲ್ಲಿಯ ಭಾಷಾ ಶೈಲಿಯು ಬಹಳ ಸೊಗಸಾಗಿ ಮೂಡಿ ಬಂದಿದೆ. ಅದಕ್ಕೆ ಕೆಲವೊಂದು ಉದಾಹರಣೆ ಮೂಲಕ ನೋಡಬಹುದಾಗಿದೆ.

''ಹೆಂತಾ ಸುಡಗಾಡು ಕಾಲ್ಗುಣನೋ ಏನೋ.....
ಮನೀ ಮಗನ್ನ ನುಂಗಿ ಕೂತಿತು ಸುಟ್ಟ ಬುರಲಿ''

''ಅಂಬಕ್ಕನ ಕಣ್ಣು ತಪ್ಪಿಸಿ, ದಿನಾ ಇಷ್ಟಿಷ್ಟು
ಅವಲಕ್ಕಿ ಬೆಲ್ಲ ತರತೀಯಲ್ಲ ನಾರಾಣ......
ಒಮ್ಮಲ್ಲೊಮ್ಮೆ ಆಕೀ ಕೈಯಾಗ ಸಿಕ್ಕೀ ಅಂದರ
ನಿನ್ನ ಚರ್ಮ ಸುಲಿತಾಳ ನೋಡು''

''ಏನಾದರೇನು ಶ್ರೀಮಂತಿಕೆಯನ್ನು ಹಂಚಿಕೊಳ್ಳುವುದು ಕಷ್ಟ. ಬಡತನಕ್ಕೇನು? ಅದರ ವಾತ್ಸಲ್ಯ ಮಯ ಹರಕು ಕವದಿಯೊಳಗ ಇನ್ನೂ ನಾಲ್ಕು ಜನ ಬರಬಹುದು. ಹಿಂಗ ನಾರಾಯಣ ರುಕುಮಾ ಇಬ್ಬರೂ ಆ ಮನಿಗೇನು ಒಝು ಆಗಿದ್ದಿಲ್ಲ.''

ವೈದ್ಯರು ಹೇಳಬೇಕಾದ ವಿಷಯವನ್ನು ನೇರವಾಗಿ ಹೇಳದೇ ಭಾಷೆ ಶೈಲಿಯು ಮೂಲಕ ಸಹೃದಯವನ್ನು ಆಕರ್ಷಿಸುವ ಇವರ ನುಡಿಗಳು ವಾಸ್ತವದ ನೆಲೆಯಲ್ಲಿ ಪ್ರತಿಬಿಂಬಿತವಾಗಿವೆ. ಅದೇ ರೀತಿ ಇನ್ನೊಂದು ವಾಕ್ಯವನ್ನು ಗಮನಿಸಬಹುದು.

''ಹಂಗೇನಿಲ್ರಿ..... ಹೇಳಿ ಕೇಳಿ ನರಮನಿಷ ನೋಡ್ರಿ, ಉಪ್ಪು ತಿಂದ ಸರೀರ ನೋಡ್ರಿ..... ಹೆಣ್ಣು ಗಂಡಿನ ಮಾಡೇನ್ರೀ ಯಲ್ಲಾಕಡೆ ಇರೋದು ಆದರೂ ಮುಸಲರು ಅಂದರ ತೀರಾ''

ಈ ಎರಡು ಕಾದಂಬರಿಗಳು ಬೇರೆಯಾದರು ಕೆಲವೊಂದು ಸಾಮ್ಯತೆಗಳಿವೆ ಎರಡು ಕಾದಂಬರಿಗಳು ಒಂದು ಬ್ರಾಹ್ಮಣ ಸಮುದಾಯದ ಸಾಂಸ್ಕೃತಿಕ ಜೀವನವನ್ನು ಕಟ್ಟಿಕೊಡುವ ಕಾದಂಬರಿಗಳಾಗಿವೆ. ಒಂದು ಸಮುದಾಯದ ಆಚಾರ, ವಿಚಾರ ನಡೆ ನುಡಿ, ಮಡಿ ಮೈಲಿಗೆ, ಪಾತ್ರ ಚಿತ್ರಗಳು, ಕಥನ ಕಲೆ ಅರ್ಥವಂತಿಕೆ, ಶೈಲಿಯು ಹೊಸತನಗಳಲ್ಲಿ ಸಾಮ್ಯತೆಗಳನ್ನು ಹೊಂದಿರುವುದನ್ನು ಗಮನಿಸಿವುದು ಸೂಕ್ತವೆನಿಸುತ್ತದೆ.

ವೈದ್ಯರು ರಚಿಸಿದ ಕೃತಿ ಇತ್ತೀಚಿನದಾದರೂ ವಸ್ತು ವಿಷಯವು ಸಿಪಾಯಿ ದಂಗೆಯಿಂದ ಸ್ವತಂತ್ರ ಚಳುವಳಿಯನ್ನು ವಿವರಿಸುವ ಕೃತಿ. ಆಗಿನ ಕಾಲದ ಸಂಸ್ಕೃತಿ ಜೀವನ ಕಟ್ಟಿಕೊಡುವುದರಿಂದ ಪುಣೇಕರವರ ಕೃತಿಯ ವಸ್ತು ವಿಷಯ ಒಂದೇ ಯಾಗುವುದರ ಜೊತೆಗೆ ಕಾಲಘಟ್ಟವು ಕೂಡ ಆಗಿನ ಸಮಕಾಲೀನ ಪರಿಸರವನ್ನು ಚಿತ್ರಿಸುವಲ್ಲಿ ಕೂಡ ಸಮಾನವಾದ ಅಂಶಗಳನ್ನು ತಿಳಿಯ ಪಡಿಸಿವೆ. ಎರಡು ಕಾದಂಬರಿಗಳ ಒಂದು ಪ್ರಾದೇಶಿಕ ಭಾಷೆ, ವಸ್ತು ಶೈಲಿಯನ್ನು ಉಪಯೋಗಿಸಿಕೊಂಡು ಕೃತಿಯ ಶ್ರೇಷ್ಠತೆಗೆ ಕಾರಣವಾಗಿವೆ. ಧಾರವಾಡ ಪ್ರದೇಶದ ಒಂದು ಬ್ರಾಹ್ಮಣ ಸಮುದಾಯದ ಸಂಪ್ರದಾಯವನ್ನು ಎತ್ತಿ ತೋರಿಸುವುದರ ಜೊತೆಗೆ ಧಾರವಾಡ ಪ್ರದೇಶವು ನಗರೀಕರಣಕ್ಕೆ ಒಳಗಾಗಿ ಅಲ್ಲಿನ ಶಿಕ್ಷಣ ಪ್ರಸಾರದಿಂದ ಆಗತಕ್ಕಂತ ಬದಲಾವಣೆ ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೂ ಕಾರಣವಾಗಿ ನಿಲ್ಲುತ್ತವೆ. ಸ್ತ್ರೀ ಸಂವೇದನೆಯನ್ನು ಪ್ರತಿಬಿಂಬಿಸುವ ಈ ಎರಡು ಕಾದಂಬರಿಗಳಲ್ಲಿ ಒಬ್ಬ ವಿಧವೆಯು ಬದುಕಿನಲ್ಲಿ ಎದುರಿಸಿದ ನೋವು, ಯಾತನೆ, ಒಂಟಿತನ, ಹಟ ಮುಂತಾದ ಗುಣಗಳು ಗಂಗವ್ವ ಮತ್ತು ಅಂಬಕ್ಕ ಪ್ರಧಾನ ಪಾತ್ರದ ಮೂಲಕ ಕಂಡುಕೊಳ್ಳಬಹುದಾಗಿದೆ.

ಎರಡು ಕಾದಂಬರಿ ಒಂದೇ ಪ್ರಾದೇಶಿಕ ಪರಿಕಲ್ಪನೆಯನ್ನು ಹುಟ್ಟುಹಾಕಿವೆ. ಧಾರವಾಡ ಪರಿಸರ ಜೀವನ ಚಿತ್ರವನ್ನು ಕಟ್ಟಿಕೊಡುವುದರ ಜೊತೆಗೆ ಧಾರವಾಡದ ಭಾಷೆಯ ಸೊಗಡನ್ನು ರಮಣೀಯವಾಗಿ ಪಾತ್ರಗಳ ಮೂಲಕ ಸಂದರ್ಭೋಚಿತವಾಗಿ ನಿರ್ಮಿಸಿದ ಶೈಲಿಯು ಶೈಲಿಗಾಗಿಯೇ ವಿಷಯವನ್ನು ಆರಿಸಿಕೊಂಡು ಅಭಿವ್ಯಕ್ತಿಸಿದೆ ಎನ್ನುವಷ್ಟರ ಮಟ್ಟಿಗೆ ಸಹೃಯದವರನ್ನು ಗೆದ್ದಿವೆ. ಪ್ರಾದೇಶಿಕ ಸಾಹಿತ್ಯವನ್ನು ಕಟ್ಟಿಕೊಡುವ ಈ ಎರಡು ಕೃತಿಗಳು ಭೌಗೋಳಿಕ ಭಾಷಿಕತೆ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ-ಗತಿಗಳ ವಿವರಿಸುವುದರಲ್ಲಿ ಕೆಲವೊಂದು ಸಾಮ್ಯತೆ ಅಂಶಗಳಿವೆ. ಭೌಗೋಳಿಕವಾಗಿ ಉದಾಹಣೆ ಮೂಲಕವಾಗಿ ಲೈನ್ ಬಜಾರ, ಜಕಣಿಬಾವಿ, ಪ್ರಸ್ತಾಪವು ಧಾರವಾಡದ ಪ್ರದೇಶವನ್ನು ಬಳಸಿಕೊಂಡ ಕುರುಹುಗಳಾಗಿ ಎರಡು ಕಾದಂಬರಿಯಲ್ಲಿ ನೀಡುತ್ತವೆ. ಹಾಗೆಯೇ ಧಾರವಾಡ ಮತ್ತು ಮುಂಬೈ ನಂಟನ್ನು ಬೆಳಸಿಕೊಂಡಿರುವುದು. ಶಿಕ್ಷಣ ಉದ್ಯೋಗಕ್ಕಾಗಿ ಮುಂಬೈ ಸಂಪರ್ಕವನ್ನು ಬಳಸಿಕೊಂಡಿರುವ ವಸ್ತು ವಿಷಯ ಒಂದೆಯಾಗಿ ನಮ್ಮ ಮುಂದೆ ಕಾಣಸಿಗುತ್ತವೆ.

ಕಾದಂಬರಿಗಳು ಶೀರ್ಷಿಕೆಯು ಒಂದು ಪವಿತ್ರವಾದ ಗಂಗಾ ಮಾತೆ ಜಲಕ್ಕೆ ಅನ್ವಯಿಸಿ ಹೇಳಿರುವ ಎರಡು ಕಾದಂಬರಿ ಜೀವನದ ಹೋಲಿಕೆಯಾಗಿ ಜಲವನ್ನು ಬಳಸಿಕೊಂಡು ನದಿಯ ಮೂಲದಲ್ಲಿ

ಉದ್ಭವವಾಗಿ ಸಾಗರವನ್ನು ಸೇರುವಂತೆ. ಗಂಗೋದಕದ ಪವಿತ್ರತೆಯು ಕೂಡ ಗಂಗವ್ವ ಸಾವನ್ನು ಗೆಲ್ಲುವ ಶಕ್ತಿಯಾಗಿ ಬಳಸಿಕೊಂಡು ಪ್ರತಿಮೆ ಲೇಖಕರಲ್ಲಿ ಒಂದೇ ಯಾಗಿರುವುದಾಗಿದೆ. ಕಾದಂಬರಿಯಲ್ಲಿ ಸರಳವಾದ ನಿರೂಪಣಾ ತಂತ್ರವನ್ನು ಬಳಸಿಕೊಂಡ ಬಗ್ಗೆ, ಪತ್ರವನ್ನು ಬಳಸಿಕೊಂಡ ಬಗ್ಗೆ, ಕಾದಂಬರಿಯ ನಿರೂಪಣಾ ತಂತ್ರದಲ್ಲಿ ಸಾಮ್ಯತೆಯನ್ನು ಕಾಣುತ್ತವೆ. ಅದಲ್ಲದೇ ಹಿಂದಿ, ಇಂಗ್ಲೀಷ, ಮರಾಠಿ ಭಾಷೆಯು ಸಾಕಷ್ಟು ಪ್ರಭಾವವಾದದ್ದು ಎರಡು ಕಾದಂಬರಿಯಲ್ಲಿ ಮೂಡಿ ಬರುತ್ತವೆ. ಎರಡು ಕಾದಂಬರಿಯು ವರ್ಗ ಸಂಘರ್ಷಕ್ಕೆ ಎಡೆಮಾಡಿಕೊಳ್ಳದೇ ವರ್ಗ ಸೌಹಾರ್ದತೆಯು ಕಂಡುಬರುತ್ತದೆ. ಇಲ್ಲಿ ಬದುಕಿನಲ್ಲಿ ಇತರ ಜಾತಿಯೊಂದಿಗೆ ಆತ್ಮೀಯವಾಗಿ ನಡೆದುಕೊಂಡು ಮಾನವೀಯ ಸಂಬಂಧಕ್ಕೆ ಒತ್ತು ಕೊಡುವ ಲೇಖಕರ ವ್ಯಕ್ತಿತ್ವ ಸ್ವಭಾವ ಒಂದೇಯಾಗಿದೆ. ಉದಾಹರಣೆಯಾಗಿ ಚಂಪಕ್ಕನು ಮೆಹಬೂಬಳ ಜೊತೆಯು ವರ್ತಿಸಿದ ಬಗೆ ಇಬ್ಬರು ಅಕ್ಕ ತಂಗಿಯಾಗಿ ಬದುಕನ್ನು ಸ್ವೀಕರಿಸುವ ಬಗೆ, ಒಂದು ಬ್ರಾಹ್ಮಣ ಸಮುದಾಯದ ಉನ್ನತ ಸ್ಥಾನದಲ್ಲಿರುವ ವಾಸುದೇವಚಾರ್ಯರು ಲಿಂಗಾಯತ ಮಠಕ್ಕೆ ಹೋಗುವುದಲ್ಲದೇ ಅಲ್ಲಿಯ ಅಪ್ಪನೋರ ಜೊತೆ ಸ್ನೇಹವು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುವುದು. ಇಲ್ಲಿ ವರ್ಗ ಸಮನ್ವಯತೆ ಇವೆರಡು ಕಾದಂಬರಿಯಲ್ಲಿ ಸ್ಪಷ್ಟವಾಗಿ ಗೋಚರಿಸುತ್ತವೆ.

ವಾಸ್ತವಾದದ ತಿರುಳನ್ನು ಬೆನ್ನುಹತ್ತಿ ಹೊರಟ ಇವೆರಡು ಕಾದಂಬರಿ ಸ್ವಾತಂತ್ರೋತ್ತರ ಸಂದರ್ಭದಲ್ಲಿ ಈ ನೆಲದ ಮಡಿಲಲ್ಲಿ ಬದುಕುವ ಜೀವಂತ ಪಾತ್ರಗಳನ್ನು ಚಿತ್ರಿಸುವ ಮೂಲಕ ತಾತ್ವಿಕ ಹಾದಿಯನ್ನು ಸಾಧಿಸಿದ್ದಾರೆ. ಈ ಕಾದಂಬರಿಗಳ ಲೇಖಕರು. ಉತ್ತರ ಕರ್ನಾಟಕದ ಜನ ಜೀವನದ ಒಳನೋಟಕಗಳನ್ನು ಅರ್ಥಪೂರ್ಣವಾಗಿ ಚಿತ್ರಿಸಿ. ಗಂಗವ್ವ, ದೇಸಾಯರು, ಕಿಟ್ಟಿ, ರಾಘಪ್ಪ ಮೊದಲಾದವರು ಮತ್ತು ವಾಸುದೇವಾಚಾರ್ಯ, ಕಮಲನಾಭ, ತುಳಸಕ್ಕ, ಅಂಬಕ್ಕ ಮೊದಲಾದವರು ಬ್ರಾಹ್ಮಣ ಮನೆತನದ ಜೀವನ ಪ್ರತಿಕಗಳಾಗಿ ಹೊರ ಹೊಮ್ಮಿವೆ.

**ಅಡಿಟಿಪ್ಪಣಿಗಳು**

೧. ಮಲ್ಲೇಪುರಂ ಜಿ. ವೆಂಕಟೇಶ 'ತೌಲನಿಕ ಸಾಹಿತ್ಯಧ್ಯಯನ' ಪುಟ - ೫೫

೨. ರಾಜಪ್ಪ ದಳವಾಯಿ, 'ಕನ್ನಡ ಸಾಹಿತ್ಯ ಕೋಶ' ಪುಟ - ೨೯೪

೩. ರಾಜಪ್ಪ ದಳವಾಯಿ, 'ಕನ್ನಡ ಸಾಹಿತ್ಯ ಕೋಶ' ಪುಟ - ೨೯೫

೪. ಮಲ್ಲೇಪುರಂ ಜಿ. ವೆಂಕಟೇಶ, 'ತೌಲನಿಕ ಸಾಹಿತ್ಯಧ್ಯಯನ' ಪುಟ - ೦೬

೫. ಮಲ್ಲೇಪುರಂ ಜಿ. ವೆಂಕಟೇಶ, 'ತೌಲನಿಕ ಸಾಹಿತ್ಯಧ್ಯಯನ' ಪುಟ - ೫೧

೬. ಗಿರಡ್ಡಿಗೋವಿಂದರಾಜ, 'ಕಾದಂಬರಿ ವಸ್ತು ಮತ್ತು ತಂತ್ರ' ಪುಟ - ೪

೭. ಗಿರಡ್ಡಿಗೋವಿಂದರಾಜ, 'ಕಾದಂಬರಿ ವಸ್ತು ಮತ್ತು ತಂತ್ರ' ಪುಟ - ೪

೮. ಬಸವರಾಜ ಕಲ್ಗುಡಿ, (ಸಂ), 'ಸುವರ್ಣ ಸಾಹಿತ್ಯ ವಿಚಾರ' ಪುಟ - ೨೩೦

೯. ಬಸವರಾಜ ಕಲ್ಗುಡಿ, (ಸಂ), 'ಸುವರ್ಣ ಸಾಹಿತ್ಯ ವಿಚಾರ' ಪುಟ - ೨೩೧

೧೦. ಬಸವರಾಜ ಕಲ್ಗುಡಿ, (ಸಂ), 'ಸುವರ್ಣ ಸಾಹಿತ್ಯ ವಿಚಾರ' ಪುಟ - ೨೩೧

೧೧. ಜಿ.ಎಂ.ಹೆಗಡೆ, 'ಸಾಹಿತ್ಯ ಮತ್ತು ಸಹೃದಯತೆ' ಪುಟ - ೨೮೫

• • •

## ಅಧ್ಯಾಯ ಏಳು

# ಸಮಾರೋಪ

ಪ್ರಸ್ತುತ ಅಧ್ಯಯನದಲ್ಲಿ ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಲೋಕದ ಪ್ರಶಸ್ತಿ ಭಾಜನವಾದ, ಒಂದೇ ಪರಿಸರ ಚಿತ್ರಣವಿರುವ ಕಾದಂಬರಿಗಳೆರಡನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ. ಈ ಕೃತಿಗಳು ಕಟ್ಟಿಕೊಡುವ ಸಾಂಸ್ಕೃತಿಕ ಪರಿಸರ ಒಂದು ನೂರು ವರ್ಷದ ಪ್ರವಾಹವನ್ನು ಒಳಗೊಂಡರೆ ಇನ್ನೊಂದು ಕೆಲವೇ ವರ್ಷಗಳ ಪ್ರವಾಹವನ್ನು ತನ್ನಲ್ಲಿ ಗರ್ಭೀಕರಿಸಿಕೊಂಡಿದೆ. ಆದಾಗ್ಯೂ ಈ ಎರಡೂ ಕಥನಗಳು ಕಟ್ಟಿಕೊಳುವ ಸಂಕಥನ ತುಂಬ ಅಧ್ಯಯನ ಯೋಗ್ಯವೆನಿಸಿದೆ. ಚರಿತ್ರೆ, ಸಾಹಿತ್ಯ, ಸಮಾಜ, ಪರಂಪರೆಗಳನ್ನು ಒಳಗೊಳ್ಳುವ ಕಥನಗಾರಿಕೆಯ ನಲೆ, ಆಳ-ಅಗಲಗಳನ್ನು ಹಲವಾರು ಮಗ್ಗುಲಗಳಾಗಿಸಿ ತಿಳಿದುಕೊಳ್ಳಲಾಗಿದೆ.

ಪ್ರಾದೇಶಿಕ ಕಲ್ಪನೆಯಲ್ಲಿ, ಸಾಂಪ್ರದಾಯಿಕ ಆಚರಣೆಗಳು, ಶಿಷ್ಟಾಚಾರಗಳು, ಸಿರಿತನ ಬಡತನ, ವರ್ಗವಾರು ಸಂಘರ್ಷಗಳು ಭಾಷಾ ಶೈಲಿಗೆ ಉದಾಹರಣೆಗಳಾದರೂ, ಈ ಕಥನಗಾರಿಕೆಯಲ್ಲಿನ ಆಂತರ್ಯ ಕಟ್ಟಿಕೊಡುವ ಸಾಂಸ್ಕೃತಿಕ ಗುಟ್ಟು ಏನೆಂಬುದನ್ನು ಧಾರವಾಡದ ಭೌಗೋಳಿಕ, ಸಾಮಾಜಿಕ, ರಾಜಕೀಯ ನೆಲೆಗಳಲ್ಲಿ ಅದು ಪರಿ ಬಿಚ್ಚಿಕೊಳ್ಳುವ ಬಗೆಯನ್ನು ವಿಶ್ಲೇಷಿಸಲಾಗಿದೆ. ಮೊಕಾಶಿಯವರ ಕಥೆಯನ್ನು ಸೂಕ್ಷ್ಮವಾಗಿ ಪ್ರಾದೇಶಿಕ ನೆಲೆಯಲ್ಲಿ ಗಮನಿಸಿದಾಗ ಹೆಚ್ಚು ಸಂಪ್ರದಾಯಕ್ಕೆ ಒತ್ತು ಕೊಡದೆ. ಮರಾಠಿ ಮತ್ತು ಇಂಗ್ಲೀಷ್ ಪ್ರಭಾವ, ಪ್ರದೇಶದ ಸುಸಂಸ್ಕೃತ ಪಠ್ಯ ಭಾಷೆ ಬಳಕೆಯಾಗಿರುವುದು. ಆದರೆ ವೈದ್ಯರು ತಾವು ಕಂಡುಂಡ ಪ್ರಾದೇಶಿಕ ಭಾಷೆಯನ್ನು ಅದರಲ್ಲೂ ಆಡು ಮಾತಿನ ಬಳಕೆಯಿಂದ ಧಾರವಾಡ ಪರಿಸರಕ್ಕೆ ಬದ್ಧರಾಗಿರುವುದನ್ನು ಕಂಡುಕೊಳ್ಳಬಹುದಾಗಿದೆ.

ಗಂಗವ್ವ ಗಂಗಾಮಾಯಿ ದಾರ್ಶನಿಕ ನಿಲುವು ಹಾಗೂ ಪ್ರಗತಿಪರ ಧೋರಣೆಯಿಂದಾಗಿ ರೂಪುಗೊಳ್ಳುವ ಕುಟುಂಬವೊಂದರ ಸಂಬಂಧಗಳನ್ನು ಚಿತ್ರಿಸುತ್ತಲೇ ಸಾಮಾಜಿಕ ಹಲವಾರು ಸಂದರ್ಭಗಳಲ್ಲಿ ಮೂಡಿ

ಬರುವ ವಸಾಹತುಶಾಹಿ ಪರಿಣಾಮ ಮನಪರಿವರ್ತನೆಯನ್ನೂ ಕಾಣಬಹುದಾಗಿದೆ. ಎರಡು ಕಾದಂಬರಿಗಳು ವಸಾಹತುಶಾಹಿಯ ಕಾಲಘಟ್ಟದಲ್ಲಿನ ಸಾಂಸ್ಕೃತಿಕ ಪರಿಸರವನ್ನು ಕುಟುಂಬವೊಂದರ ಚಿತ್ರಣದ ಮೂಲಕ ಬಿಂಬಿಸಿ, ಕುಟುಂಬದ ಆಗು ಹೋಗುಗಳ ಮೇಲೆ ವಸಾಹತುಶಾಹಿಯ ನೌಕರಿ, ಶಿಕ್ಷಣ, ಸ್ವತಂತ್ರ ಚಳುವಳಿ ಇತ್ಯಾದಿ ಅಂಶಗಳು ಬೀರುವ ಪ್ರಭಾವ, ಭಾರತೀಯ ಸಂಸ್ಕೃತಿಯಲ್ಲಿನ ಪಲ್ಲಟಗಳು, ಈ ಪಲ್ಲಟ ಸ್ಥಿತ್ಯಂತರಗಳನ್ನು ಬಹುಶಿಸ್ತೀಯ ನೆಲೆಗಳಲ್ಲಿ ಕೂಲಂಕಷವಾಗಿ ಗ್ರಹಿಸಲಾಗಿದೆ. ಹೀಗೆ ಸಮಕಾಲೀನ ಪರಿಸರದಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ, ನೆಲೆಯಲ್ಲಿ ಸ್ಥಿತ್ಯಂತರಗಳನ್ನು ಗಮನಿಸಲಾಗಿದೆ.

ಎರಡು ಕೃತಿಗಳಲ್ಲಿರುವ ಸಮಾನ ಗುಣಧರ್ಮಗಳಿರುವುದನ್ನು ಎತ್ತಿ ಹಿಡಿಯುವುದು. ಇದರಲ್ಲಿನ ವಸ್ತು, ಭಾಷೆ, ಶೈಲಿ ಹಿನ್ನೆಲೆಯನ್ನಾಧರಿಸಿ ಸಾದೃಶ್ಯ ಮತ್ತು ವೈದೃಶ್ಯ ಮೂಲ ಪ್ರಭಾವ ಎಂಬ ಪರಿಕಲ್ಪನೆಯನ್ನು ಮತ್ತು ಕೆಲವು ತಾತ್ವಿಕ ವಿಚಾರಗಳ ಮೂಲಕ ತಿಳಿದುಕೊಳ್ಳಲಾಗಿದೆ.

ಎರಡು ಕೃತಿಗಳ ವಸ್ತು, ಪರಿಸರ ಒಂದೆಯಾದರೂ ಸಮಕಾಲೀನ ಸಂದರ್ಭಗಳ ಮತ್ತು ಕೃತಿಕಾರ ನಿಲುವುಗಳು ಸೃಷ್ಟಿಯಾಗುವ ರೀತಿಯನ್ನು ತಿಳಿಯಲಾಗಿದೆ. ಹಾಗೂ ಸಮಕಾಲೀನತೆ ಪಡೆದುಕೊಳ್ಳುವ ಸರ್ವಕಾಲಿಕತೆ ಹಾಗೂ ಸಮಗ್ರ ದರ್ಶಿಕತ್ವದ ನೆಲೆಗಳನ್ನು ತಿಳಿದುಕೊಳ್ಳಲಾಗಿದೆ.

• • •

# ಅನುಬಂಧ

೧. ಗ್ರಂಥಸೂಚಿ

೨. ಶಂಕರ ಮೊಕಾಶಿ ಪುಣೇಕರ ಕೃತಿ ವಿವರ

೩. ಶ್ರೀನಿವಾಸ ವೈದ್ಯರ ಸಾಹಿತ್ಯ ನೋಟ

## ೧. ಗ್ರಂಥಸೂಚಿ


**ಅ.ಪ್ರಧಾನ ಆಕರಗಳು**

೧. ಶಂಕರ ಮೊಕಾಶಿ ಪುಣೇಕರ '**ಗಂಗವ್ವ ಗಂಗಾಮಾಯಿ**', ಸುರುಚಿ ಪ್ರಕಾಶನ, ಮೈಸೂರು-೧೯೭೫

೨. ಶ್ರೀನಿವಾಸ ವೈದ್ಯರ '**ಹಳ್ಳ ಬಂತು ಹಳ್ಳ**', ಮನೋಹರ ಗ್ರಂಥಮಾಲೆ, ಧಾರವಾಡ-೨೦೦೯

**ಆ.ಆನುಷಂಗಿಕ ಆಕರಗಳು**

೧. ಟಿ.ಪಿ.ಅಶೋಕರ '**ವಾಸ್ತವತಾವಾದ**', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೯

೨. ಅನಂತಮೂರ್ತಿ.ಯು.ಆರ್., '**ಪ್ರಜ್ಞೆ ಮತ್ತು ಪರಿಸರ**', ಅಕ್ಷರ ಪ್ರಕಾಶನ, ಹೆಗ್ಗೋಡು, ಕರ್ನಾಟಕ-೧೯೯೨

೩. ಆಮೂರು.ಜಿ.ಎಸ್. '**ಕನ್ನಡ ಕಥನ ಸಾಹಿತ್ಯ ಕಾದಂಬರಿ**', ಸ್ವಪ್ನ ಬುಕ್‌ಹೌಸ್, ಬೆಂಗಳೂರು-೨೦೦೬

೪. ಕುರ್ತುಕೋಟಿ.ಕೆ.ಡಿ. '**ಯುಗಧರ್ಮ ಸಾಹಿತ್ಯ ದರ್ಶನ**', ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೧೯೮೨

೫. **ಕನ್ನಡ ವಿಷಯ ವಿಶ್ವಕೋಶ ಸಂಪುಟ-೧**, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು-೨೦೦೫

೬. ಕುವೆಂಪು ಅಧ್ಯಯನ ಸಂಸ್ಥೆ, '**ಕನ್ನಡ ವಿಷಯ ವಿಶ್ವಕೋಶ**', ಸಂಪುಟ-೨, -೨೦೦೭

೭. ಗಿರಡ್ಡಿ ಗೋವಿಂದರಾಜ., '**ಕಾದಂಬರಿ ವಸ್ತು ಮತ್ತು ತಂತ್ರ**', ಸ್ನೇಹ ಪ್ರಕಾಶನ, ಬೆಂಗಳೂರು-೧೯೮೭

೮. ಗಿರಡ್ಡಿಗೋವಿಂದರಾಜ., '**ಶತಮಾನದ ಸಾಹಿತ್ಯ ವಿಮರ್ಶೆ**', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೨೦೦೧

೯. ಜೋಶಿ.ಜಿ.ಬಿ., ಮತ್ತು (ಸಂ) ಕುರ್ತುಕೋಟಿ ಕೀರ್ತಿನಾಥ, 'ಪುಟ ಬಂಗಾರ', ಸಂಪುಟ-೨, ೧೯೮೬

೧೦. ಜೋಶಿ.ಜಿ.ಬಿ., ಮತ್ತು (ಸಂ) ಕುರ್ತುಕೋಟಿ ಕೀರ್ತಿನಾಥ, 'ನಡೆದು ಬಂದ ದಾರಿ', ಸಂಪುಟ.೨, ಮನೋಹರ ಗ್ರಂಥಮಾಲೆ, ಧಾರವಾಡ-೧೯೬೧

೧೧. ನಾಯಕ.ಜಿ.ಎಸ್. (ಸಂ) ಸಮೀಕ್ಷೆ 'ಶತಮಾನದ ಕನ್ನಡ ಸಾಹಿತ್ಯ', ಶ್ರೀರಾಘವೇಂದ್ರ ಪ್ರಕಾಶನ ಅಂಕೋಲಾ, -೨೦೦೦

೧೨. ನಾಯಕ.ಹಾ.ಮಾ., (ಸಂ), ಕೃಷ್ಣಕುಮಾರ, ಸಿ.ಪಿ.ವೆಂಕಟಾಚಲ ಶಾಸ್ತ್ರಿ.ಟಿ.ವಿ., 'ಸ್ವಸ್ತಿ' ತಳುಕಿನ ವೆಂಕಣಯ್ಯ ಸ್ಮಾರಕ ಗ್ರಂಥಮಾಲೆ,-೧೯೮೩

೧೩. ನಿಂಗಣ್ಣ.ಚಿ.ಸಿ., 'ಕನ್ನಡ ಸಾಹಿತ್ಯ ಸಂಸ್ಕೃತಿ' (ಸಂ) ಶ್ರೀ ಸಿದ್ಧಲಿಂಗೇಶ್ವರ, ಪ್ರಕಾಶನ ಗುಲಬರ್ಗಾ-೨೦೦೮

೧೪. ಪ್ರಮೀಳಾ ಮಾಧವ, 'ಕುಮಾರ ಸಂಭವ ಹಾಗೂ ಗಿರಿಜಾ ಕಲ್ಯಾಣ' ಒಂದು ತೌಲನಿಕ ಅಧ್ಯಯನ, ಪ್ರಿಯದರ್ಶಿನಿ ಪ್ರಕಾಶಕರು, ಬೆಂಗಳೂರು-೨೦೦೧

೧೫. ನಾಯಕ.ಹಾ.ಮಾ., ಮತ್ತು ಡಿ.ವಿ.ವೆಂಕಟಾಚಲ ಶಾಸ್ತ್ರಿ.ಡಿ.ವಿ., 'ಕನ್ನಡ ಸಾಹಿತ್ಯ ಚರಿತ್ರೆ' ಸಂಪುಟ-೧, ಮೈಸೂರು ವಿಶ್ವವಿದ್ಯಾಲಯ, ಮೈಸೂರು-೧೯೮೩

೧೬. ಭೈರಪ್ಪ.ಎಸ್.ಎಲ್., 'ಸಾಹಿತ್ಯ ಮತ್ತು ಪ್ರತೀತ' ಸಾಹಿತ್ಯ ಭಂಡಾರ, ಬೆಂಗಳೂರು-೧೯೮೭

೧೭. ಬಾಲಸುಬ್ರಹ್ಮಣ್ಯ ನರಹಳ್ಳಿ, 'ನವ್ಯತೆ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೯

೧೮. ಮೊಕಾಶಿ ಪುಣೇಕರ ಮತ್ತು ಸಿ.ಪಿ.ಕೃಷ್ಣಕುಮಾರ 'ಕನ್ನಡ ವಿಮರ್ಶೆ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, -೧೯೮೩

೧೯. ಮೊಕಾಶಿ ಪುಣೇಕರ., 'ಅಪೂರ್ಣವರ್ತಮಾನಕಾಲ' ಕರ್ನಾಟಕ ಸರಕಾರ, ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೫

೨೦. ಮೊಕಾಶಿ ಪುಣೇಕರ., 'ಅವಧೇಶ್ವರಿ' ಗೀತಾಬುಕ್ ಹೌಸ್, ಮೈಸೂರು-೧೯೯೫

೨೧. ಮೊಕಾಶಿ ಪುಣೇಕರ., 'ಗಂಗವ್ವ ಗಂಗಾಮಾಯಿ' ಗೀತಾಬುಕ್ ಹೌಸ್, ಮೈಸೂರು-೧೯೯೯

೨೨. ರಹಮತ್ ತರೀಕೆರೆ., (ಸಂ), 'ಕನ್ನಡ ಅಧ್ಯಯನ' ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೧೯೯೮

೨೨. ಮುಗಳಿ.ರಂ.ಶ್ರೀ., 'ಕನ್ನಡ ಸಾಹಿತ್ಯ ಚರಿತ್ರೆ' ಸಮಾಜ ಪುಸ್ತಕಾಲಯ, ಧಾರವಾಡ-೧೯೯೬

೨೩. ರಾಜಪ್ಪ ದಳವಾಯಿ (ಸಂ), 'ಕನ್ನಡ ಸಾಹಿತ್ಯ ಕೋಶ', ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೨೦೦೮

೨೪. ರಾಘುವೇಂದ್ರ.ಎಚ್.ಎಸ್., (ಸಂ), '**ಶತಮಾನದ ಸಾಹಿತ್ಯ ವಿಮರ್ಶೆ**', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೨೦೦೧

೨೫. ವೆಂಕಟೇಶ ಮಲ್ಲೇಪುರಂ.ಜಿ., '**ತೌಲನಿಕ ಸಾಹಿತ್ಯಧ್ಯಯನ**', ತುಳುಕಿನ ವೆಂಕಟಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು-೨೦೦೮

೨೬. ಹೆಗಡೆ.ಜಿ.ಎಂ., '**ಸಾಹಿತ್ಯ ವಿಮರ್ಶೆ**', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೮

೨೭. ಶ್ರೀನಿವಾಸ ಹಾವನೂರು., '**ಹೊಸಗನ್ನಡ ಅರುಣೋದಯ**', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೦

೨೮. ಶಿವರುದ್ರಪ್ಪ.ಜಿ.ಎಸ್., '**ಕನ್ನಡದ ಕೆಲವು ಪ್ರಮುಖ ಕಾದಂಬರಿಗಳು**' ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೯

೨೯. ಶಿವರುದ್ರಪ್ಪ.ಜಿ.ಎಸ್. (ಸಂ), '**ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ**', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೮೦

೩೦. ಶೇಷಗಿರಿರಾವ್.ಎಲ್.ಎಸ್., '**ಹೊಸಗನ್ನಡ ಸಾಹಿತ್ಯ**' ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೧೯೭೫

೩೧. ಶಾಂತಿನಾಥ ದೇಸಾಯಿ., '**ಕನ್ನಡ ಕಾದಂಬರಿ ನಡೆದು ಬಂದ ದಾರಿ**', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೮೯

೩೨. ಶಾಂತಿನಾಥ ದೇಸಾಯಿ., '**ನವ್ಯ ಸಾಹಿತ್ಯ ದರ್ಶನ**', ಪರಿಸರ ಸಾಹಿತ್ಯ, ಶಿವಮೊಗ್ಗ-೧೯೯೦

೩೩. ಶಿವಕುಮಾರಸ್ವಾಮಿ., '**ಸಂಸ್ಕೃತಿ ಮತ್ತು ಸಾಹಿತ್ಯ ಪರಂಪರೆ**', ಭಾರವಿ ಪ್ರಕಾಶನ, ಬೆಂಗಳೂರು-೧೯೮೬

೩೪. ಶ್ರೀಧರ.ಎಸ್.ಎಸ್., '**ಇಂದಿನ ಕನ್ನಡ ರಚನೆ ಮತ್ತು ಬಳಕೆ**' ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೧೯೯೫

**ಇ. ಇತರ ಆಕರಗಳು**

೧. **ಪ್ರಜಾವಾಣಿ** ದಿನಪತ್ರಿಕೆ, ೨೦೦೮

೨. **ಹೊಸತು** ವಾರಪತ್ರಿಕೆ, ಮಾರ್ಚ್ ೯, ೨೦೦೯

೩. ಶಂಕರ ಮೊಕಾಶಿ ಪುಣೇಕರ ಕಾದಂಬರಿಯ '**ಸಂಪ್ರದಾಯ ಮತ್ತು ಆಧುನಿಕತೆ ನಡುವಿನ ಸಂಘರ್ಷ**' ಎಂ.ಫಿಲ್ ಪ್ರಬಂಧಸಾರ (ಎಚ್.ಕೆ.ಅಶೋಕರವರು ವೆಂಕಟೇಶ ಇಂದ್ವಾಡಿಯವರ ಮಾರ್ಗದರ್ಶನ ಮೂಲಕ ಅಧ್ಯಯನ)

• • •

## ೨. ಪುಣೇಕರ ಕೃತಿಗಳು

೧. ಗಾನಕೇಳಿ, (ಕವನ ಸಂಕಲನ), ೧೯೪೮, ಪ್ರಕಾಶನ ?

೨. ಗಂಗವ್ವ ಗಂಗಾಮಾಯಿ, (ಕಾದಂಬರಿ), ೧೯೫೬, ಸುರಚಿ ಪ್ರಕಾಶನ, ಮೈಸೂರು

೩. ವಿಪರ್ಯಾಸ ವಿನೋದ, (ನಾಟಕ), ೧೯೬೦, ಐ.ಬಿ.ಎಚ್., ಪ್ರಕಾಶನ, ಬೆಂಗಳೂರು

೪. ಬೇಂದ್ರೆಕಾವ್ಯ ವಿಮಾಂಸೆ, (ಕಾವ್ಯಮಿಮಾಂಸೆ), ೧೯೬೨, ಪ್ರತಿಭಾ ಗ್ರಂಥಮಾಲೆ, ಧಾರವಾಡ

೫. ಮಾಯಿಯ ಮೂರು ಮುಖಗಳು, (ಕಾವ್ಯ), ೧೯೭೦, ಸುರಚಿ ಪ್ರಕಾಶನ, ಮೈಸೂರು

೬. ಸಾಹಿತ್ಯ ಮತ್ತು ಅಭಿರುಚಿ, (ವಿಮರ್ಶೆ), ೧೯೮೧, ಮಿತ್ರ ಪ್ರಕಾಶನ, ಮೈಸೂರು

೭. ನಟನಾರಾಯಣ, (ಕಾದಂಬರಿ), ೧೯೮೨, ಸಾಹಿತ್ಯ ಭಂಡಾರ, ಬೆಂಗಳೂರು

೮. ಯುರೋಪಿಯನ್ ವಿಮರ್ಶೆಯ ಇತಿಹಾಸ (ವಿಮರ್ಶೆಯ ಚರಿತ್ರೆ), ೧೯೮೭, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೯. ಅವಧೇಶ್ವರಿ, (ಕಾದಂಬರಿ), ೧೯೮೭, ಗೀತಾ ಬುಕ್‌ಹೌಸ್, ಬೆಂಗಳೂರು

೧೦. ಡೆರೆಕ್ ಡಿಸೋಜಾ ಮತ್ತು ಇತರ ಕತೆಗಳು, (ಸಣ್ಣಕತೆ), ೧೯೯೦, ಸಿಂಚನ ಗ್ರಂಥಮಾಲೆ, ಧಾರವಾಡ

೧೧. ಅಪೂರ್ಣ ವರ್ತಮಾನಕಾಲ, ೧೯೯೫, ಪುಸ್ತರ ಪ್ರಾಧಿಕಾರ, ಬೆಂಗಳೂರು

೧೨. The Captive (ಕವನ ಸಂಕಲನ), ೧೯೬೫

೧೩. The Cycle of Seasons (‘ಕಾಳಿದಾಸನ ಋತು ಸಂಹಾರ’ದ ಅನುವಾದ), ೧೯೬೫

೧೪. The Lates phase in the Development of W.B.Yeats (ವಿಮರ್ಶೆ)

೧೫. The Pretender (ಕವನ ಸಂಕಲನ), ೧೯೬೮

೧೬. The Epistle to Daved Mccutchion (ವಿಡಂಬನ ಕಾವ್ಯ), ೧೯೬೫

೧೭. The Indo-Anglican creed (ವಿಮರ್ಶೆ), ೧೯೭೨

೧೮. The Enterpreations of the later poems of Yeats (ವಿಮರ್ಶೆ), ೧೯೭೩

೧೯. V.K.Gokak (ವ್ಯಕ್ತಿಚಿತ್ರಣ), ೧೯೭೪

೨೦. Homing Bird (ಕುವೆಂಪು ಕುರಿತ ಲೇಖನವಿರುವ ಕೃತಿ), ೧೯೭೬

೨೧. Theosetical and practical Studies in Indo-English literature (ವಿಮರ್ಶೆ), ೧೯೭೮

೨೨. Avadhoota Geetha (ಸ್ವಾಮಿ ಪುರೋಹಿತ ಅವರ ಕೃತಿಯ ಅನುವಾದ), ೧೯೮೦

೨೩. Compulsosy Capitatization (ಆರ್ಥಿಕ ಚಿಂತನೆ), ೧೯೮೨

೨೪. Mohenjodaro Seals (ಸಂಶೋಧನೆ), ೧೯೮೪

೨೫. Tentpole (ಕವನ ಸಂಕಲನ), ೧೯೮೭

೨೬. Parodigsma (ಕವನ ಸಂಕಲನ), ೧೯೮೯

೨೭. Harijan Contribution to Medieval Indian Thought (ಸಂಶೋಧನೆ), ೧೯೯೧

೨೮. Nana's Contession (ನಟನಾರಾಯಣೆ ಕಾದಂಬರಿ ಅನುವಾದ), ೧೯೯೨

೨೯. Chomisky-Slcinner Experimential Method (ಚಿಂತನೆ)

೩೦. Ramayan Darshanam (ಶ್ರೀರಾಮಾಯಣ ದರ್ಶನಂ ಅನುವಾದ) ಅಚ್ಚಿನಲ್ಲಿದೆ

೩೧. B.Puttaswamy (ವಿಮರ್ಶೆ) ಅಚ್ಚಿನಲ್ಲಿದೆ.

• • •

## ೩. ಶ್ರೀನಿವಾಸ ವೈದ್ಯರ ಸಾಹಿತ್ಯ ನೋಟ

### ೧. ಕಥೆಗಳು

೧. ಅಗ್ನಿಕಾರ್ಯ

೨. ಹುಳಿಯೋಗರು

೩. ತಲೆಗೊಂದು ಥರಾ ಥರಾ (ಹರಟೆ ಮತ್ತು ಸಣ್ಣ ಕಥೆಗಳ ಸಂಕಲನ)

೪. ಮನಸುಬರಾಯನ ಮನಸ್ಸು (ಹರಟೆ ಮತ್ತು ಸಣ್ಮ ಕಥೆಗಳ ಸಂಕಲನ)

### ೨. ಕಾದಂಬರಿಗಳು

೧. ಹಳ್ಳ ಬಂತು ಹಳ್ಳ

### ೩. ಪ್ರಶಸ್ತಿಗಳು

೧. ೨೦೦೪ನೇ ಸಾಲಿನ ಕಾದಂಬರಿ ಪ್ರಚಾರದಲ್ಲಿ ಪ್ರಥಮ ಪ್ರಶಸ್ತಿಯನ್ನು ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಪ್ರಶಸ್ತಿ ಪಡೆದುಕೊಂಡರು

೨. ೨೦೦೮ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಅತ್ಯುತ್ತಮ ಕನ್ನಡ ಕೃತಿಯೆಂದು ಬಹುಮಾನಿತ ಕಾದಂಬರಿ

• • •

